

ಮಹಾತ್ಮಾ ಪಿಕ್ಚರ್ಸರವರ,
ಪೌರಾಣಿಕ ಚಿತ್ರ

## ಶ್ರೀನಿವಾಸ ಕಲ್ಯಾಣ

ಅರ್ಥಾತ್

## ತಿರುಪತಿ ವೆಂಕಟೇಶ ಮಹಾತ್ಮೆ

(ಕನ್ನಡ)

ಭೂಮಿಕಾ:-ಅಮೀರಬಾಯಿ ಕರ್ನಾಟಕಿ, ಪ್ರತಿಮಾದೇವಿ, ಹರಿಣಿ, ಜಯಶ್ರಿ, ಎ. ಕೆ. ಶ್ರೀನಿವಾಸರಾವ, ವಿಮಲನಂದಾ ದಾಸ, ವೀರಭದ್ರಪ್ಪ, ಮರಿರಾವ, ಮಹಾಬಲರಾವ ವಗೈರೆ.

## ಪ್ರಕಾಶ ಪಿಕ್ಚರ್ಸ, ಹುಬ್ಬಳ್ಳಿ

ರಿಲೀಜ

ನಮ್ಮ ಗ್ರಾಹಕರಿಗೂ . . . ಚಲಚ್ಚಿತ್ರ ರಸಿಕರಿಗೂ . . .
ದೀಪಾವಳಿಯ ಶುಭಾಶಯಗಳು

---



## ಸೌಂದರ್ಯಕ್ಕೆ ನಮ್ಮ ಕಾಣಿಕೆಗಳು

ಸೌಂದರ್ಯ ಸಂಸ್ಕೃತಿಗೆ ಗುಣಶ್ರೇಷ್ಠ ಅಂಗಶೃಂಗಾರ ತಯಾರಿಕೆಗಳು ನೈಜ ಸಹಾಯಕಗಳಾಗಿವೆ. ನಮ್ಮ ಅಂಗಶೃಂಗಾರ ವಸ್ತುಗಳು ಈ ದೃಷ್ಟಿಯಿಂದ ಸೌಂದರ್ಯವರ್ಧನೆಗೆ ಸೌಮ್ಯ ಕಾಣಿಕೆಗಳಾಗಿವೆ.



ಕಲಕೆಮಿಕೊರವರ

ಮಾರ್ಗೋ ಸೋಪ

ನೀಮ ಟೂಥಪೇಸ್ಟ

ಭೃಂಗೋಲ ಮಹಾಭೃಂಗರಾಜ ಹೇರಾಯಿಲ್

ಲಾಬೋನಿ ಸ್ನೋ ಮತ್ತು ಕ್ರೀಮ

ಕಾಂತಾ ಕೈ ವಸ್ತ್ರ ಸುಗಂಧ.



**THE CALCUTTA CHEMICAL CO., LTD.** CALCUTTA 29

*Bombay Office :* Devakarn Mansion, Princess Street Toilet Sales Department,
Swastik Carnac, Cornac Road, BOMBAY.

ಬನ್ನಿರಿ !! ದೀಪಾವಳಿಯ ಉಡುಗರೆ ! ಬನ್ನಿರಿ !!

ಯೋಗ್ಯ ಬೆಲೆ, ಖಾತ್ರಿ ಮಾಲು, ಮನಮೆಚ್ಚುವ ವಸ್ತುಗಳು, ಒಮ್ಮೆ ಸಂದರ್ಶಿಸಿ ಅನುಭವ ಪಡೆಯಿರಿ-

ನಮಲ್ಲಿ ಶಾಲೆ, ಕಾಲೇಜ ವಿದ್ಯಾರ್ಥಿಗಳಿಗೆ ಬೇಕಾಗುವ ಕನ್ನಡ, ಇಂಗ್ಲೀಷ, ಮರಾಠಿ ಮತ್ತು ಹಿಂದಿ ಮುಂತಾದ ಎಲ್ಲ ಬಗೆಯ ಪಠ್ಯ ಹಾಗೂ ಪಠ್ಯೇತರ ಪುಸ್ತಕಗಳೂ ಲಾಯಬ್ರರಿ ಪುಸ್ತಕಗಳೂ ಸಹಕಾರಿ ಸಂಘಗಳಿಗೂ ಗ್ರಾಮಪಂಚಾಯತಿಗಳಿಗೂ ರೇಶನ್ನ ಅಂಗಡಿಗಳಿಗೂ ಬಡ್ಡಿಯ ವ್ಯವಹಾರಸ್ಥರಿಗೂ ಬೇಕಾಗುವ ಎಲ್ಲ ಬಗೆಯ ಪುಸ್ತಕ ಫಾರ್ಮುಗಳೂ ಪಾವತಿ ಬುಕ್ಕುಗಳೂ ಅಲ್ಲದೇ ಹಬ್ಬಹುಣ್ಣಿವೆಗಳಿಗೂ ಮದುವೆ ಮುಂಜಿಗಳಿಗೂ ಬೇಕಾಗುವ ಹೇರಾಯಿಲ್, ಅತ್ತರ, ಲೆವ್ಹೆಂಡರ, ಸ್ನೋ, ಪಾವಡರ ಮುಂತಾದ ಸುನಾಸಿಕ ವಸ್ತುಗಳೂ ಉಡುಗರೆಯ ಸಾಮಾನುಗಳೂ ಸಂಘ ಸಂಸ್ಥೆಗಳಿಗೂ ಶಾಲೆಕಾಲೇಜುಗಳಿಗೂ ಬೇಕಾಗುವ ನಿತ್ಯೋಪಯೋಗಿ ಅವಶ್ಯಕ ಸಾಮಾನುಗಳೂ ನಮ್ಮಲ್ಲಿ ಯೋಗ್ಯ ಬೆಲೆಗೆ ಠೋಕಾಗಿಯೂ ಚಿಲ್ಲರೆಯಾಗಿಯೂ ದೊರೆಯುವವು. ಅಲ್ಲದೆ ತಮಾಷೆಯ ಮದ್ದಿನ ಸಾಮಾನುಗಳೂ ಉಕ್ಕಿನ ತೊಟ್ಟಿಲಗಳೂ ದೊರೆಯುತ್ತವೆ.

ಮರೆಯದೆ ಸಂದರ್ಶಿಸಿರಿ—

**ಆಕಳವಾಡಿ ಬುಕ್ ಡಿಪೋ, ಧಾರವಾಡ.**

---

ದೀಪಾವಳಿಯು ನಮ್ಮ ಖಾತೆದಾರರಿಗೂ ಹಾಗೂ ಪಾಲುದಾರರಿಗೂ ಸುಖ-ಸಮೃದ್ಧಿಯನ್ನೀಯಲಿ !

## ದಿ ಬ್ಯಾಂಕ ಆಫ್ ಮಹಾರಾಷ್ಟ್ರ ಲಿ.,

ಸ್ಥಾಪನಾ ೧೯೩೫

ಮುಖ್ಯ ಕಚೇರಿ :— ಲಕ್ಷ್ಮೀ ರೋಡ, **ಪುಣೆ - ೨**

— ಬಂಡವಲು —

| | |
|---|---|
| ಅಧಿಕೃತ ಬಂಡವಲು . . | ೫೦,೦೦,೦೦೦ |
| ಮಾರಾಟಕ್ಕೆ ತೆಗೆದ ಹಾಗೂ ಮಾರಾಟದ ಬಂಡವಲು | ೩೨,೦೦,೦೦೦ |
| ವಸೂಲಾದ ಬಂಡವಲು . . | ೧೬,೦೦,೦೦೦ |
| ರಿಝರ್ವ ಹಾಗೂ ಇತರ ಫಂಡ . | ೫,೬೫,೦೦೦ |
| ಕೆಲಸದಲ್ಲಿ ತೊಡಗಿದ ಒಟ್ಟು ಬಂಡವಲು | ೭೫ ಲಕ್ಷಕ್ಕೂ ಹೆಚ್ಚಿಗೆ |

ಶಾಖೆಗಳು:

ಮುಂಬಯಿ- (ಫೋರ್ಟ, ಗಿರಗಾಂವ, ದಾದರ ಹಾಗೂ ಕಲ್ಯಾಣ)
ಪುಣೆ- (ಡೆಕ್ಕನ್ ಜಮಖಾನಾ ಹಾಗೂ ಖಡಕಿ)

ನಾಶಿಕ, ಚಾಳಿಸಗಾಂವ, ಧುಳೆ, ಜಳಗಾಂವ, ನಾಗಪೂರ, ರತ್ನಾಗಿರಿ, ಕೋಪರಗಾಂವ, ಹುಬ್ಬಳ್ಳಿ, ಸೊಲ್ಲಾಪೂರ, ಕೊಲ್ಹಾಪೂರ, ದ. ಹೈದರಾಬಾದ, ಸಾಂಗಲಿ ಹಾಗೂ ಅಮರಾವತಿ.

ಠಾಣೆ ಹಾಗೂ ಹರಿಹರ ( ಮೈಸೂರ ಸಂ. ) ಗಳಲ್ಲಿ ಬ್ಯಾಂಕಿನ ಶಾಖೆಗಳು ಶೀಘ್ರದಲ್ಲಿಯೇ ಪ್ರಾರಂಭವಾಗುವವು.

ಎಸ್. ಎಚ್. ಮಳಗಿ, ಏಜಂಟ, ಹುಬ್ಬಳ್ಳಿ ಶಾಖೆ.
ಚಿಂ. ವಿ. ಜೋಗ, ಮ್ಯಾನೇಜರ.

---

## ಸುಜೀರ್ಕಾರ ಬ್ರದರ್ಸರವರ

ಉತ್ತಮ **ನೇಯಿಗೆಯ** ಮತ್ತು **ಖಾತ್ರಿ ಬಣ್ಣದ**

Registered

TRADE S.B. MARK

Fast Colour Sarees

ಗುರುತಿನ ಸೀರೆಯನ್ನು ಒಮ್ಮೆ ಉಟ್ಟುಕೊಂಡಾಕೆ ಪುನಃ ತಪ್ಪದೇ ಅದನ್ನು ಉಡಲು ಆಶಿಸುವದರಲ್ಲಿ ಸಂದೇಹವೇನು ?

**ಯಾವತ್ತೂ ಸೀರೆಗಳ ದರವನ್ನು ಕಡಿಮೆ ಮಾಡಿರುತ್ತದೆ.**

ತಯಾರಕರು :

**ಸುಜೀರ್ಕಾರ ಬ್ರದರ್ಸ**

ಮಾರ್ಕೆಟು ರಸ್ತೆ — — ಮಂಗಳೂರು

ನಮ್ಮ ತಯಾರಿಕೆಯ ಯಾವತ್ತೂ ಸೀರೆಗಳು ಹಿಂದುಸ್ತಾನದ ಎಲ್ಲಾ ಕೇಂದ್ರಗಳಲ್ಲೂ ಅಲ್ಲದೇ ಪರರಾಷ್ಟ್ರ ಇಂಗ್ಲಾಂಡಿನಲ್ಲೂ ಧಾರಾಳವಾಗಿ ಮಾರಾಟವಾಗುತ್ತದೆ ಎಂದು ತಿಳಿಸುವದೇ ತುಂಬಾ ಸಂತೋಷಪಡುತ್ತೇವೆ.

ವಿ. ಸೂ. :— ಸುವರ್ಣಾಕ್ಷರದ ತ್ರಿವರ್ಣಗಳ ಲೇಬಲುಳ್ಳ ನಮ್ಮ ತಯಾರಿಕೆಯ ಯಾವೊಂದು ಸೀರೆಗಳ ಬಣ್ಣವು ಮಾಸಿ ಹೋದಲ್ಲಿ ಆ ಸೀರೆಯನ್ನೇ ಒಂದು ತಿಂಗಳೊಳಗಾಗಿ ಹಿಂದೆ ತಂದಲ್ಲಿ ಅದನ್ನು ವಾಪಸು ಪಡಕೊಳ್ಳುತ್ತೇವೆ. ಕಾರಣ “ ನಮ್ಮ S.B. ಗುರುತಿನ ಸೀರೆ ” ಮೇಲಿರುವ ಲೇಬಲನ್ನು ನೋಡಿ ಪಡಕೊಳ್ಳಿರಿ.

---

ಅತಿಥಿ ಸತ್ಕಾರವೇ ನಮ್ಮ ಶ್ರೇಷ್ಠ ಧರ್ಮ

- ಕಡಿಮೆ ವೆಚ್ಚದಲ್ಲಿ ಮನಮೆಚ್ಚುವ ವ್ಯವಸ್ಥೆ
- ಸ್ವಚ್ಛ ಹಾಗೂ ರುಚಿಕಟ್ಟಾದ ಭೋಜನ
- ಉತ್ತಮ ವಸತಿ ಸೌಕರ್ಯ.

# ಬೆಳಗಾಂವ ಗೆಸ್ಟ ಹೌಸ

## ಬೆಳಗಾವಿ





ನೀವು ಯಾವದೇ ನಿಮಿತ್ತದಿಂದ ಒಮ್ಮೆ ಬೆಳಗಾಂವಿಗೆ ಬಂದರೆ ನಿಮ್ಮ ಎಲ್ಲ ಕೆಲಸಗಳಿಗೂ ಅನುಕೂಲವಿರುವ ಸ್ಥಳದಲ್ಲಿದೆ.

**ಸಂದರ್ಶಿಸಲು ಮರೆಯಬೇಡಿರಿ !**

ನಮ್ಮ ಗ್ರಾಹಕರಿಗೂ ಮತ್ತು ಚಲಚ್ಚಿತ್ರ ರಸಿಕರಿಗೂ ದೀಪಾವಳಿಯ ಅಭಿನಂದನೆಗಳು !

ಈ ಕೆಳಗಿನ ಚಿತ್ರಗಳಿಗಾಗಿ ನಾವು ಮುಂಬೈ ರಾಜ್ಯದ ಪ್ರದೇಶಕ್ಕಾಗಿ ಹಂಚಿಕೆಗಾರರಿದ್ದೇವೆ. ದಯವಿಟ್ಟು ಸಂಪರ್ಕವಿಡಿರಿ

ಶಕುಂತಲಾ ಫಿಲ್ಮ ಡಿಸ್ಟ್ರಿಬ್ಯೂಟರ್ಸ, ಸರಾಫ ಬಝಾರ, ಧಾರವಾಡ.

---

ವಿಧಿಯ ತೆಕ್ಕೆಗೆ ಸಿಲುಕಿದ ಹೆಣ್ಣೊಂದರ ತುಂಬು ಪ್ರಣಯದ ಬಾಳ್ವೆಯ ಚಿತ್ರ

ತ್ರಿಮೂರ್ತಿಯವರ ಜಾನಪದ ಚಿತ್ರ.

# ಆಕಾಶರಾಜು (ತೆಲಗು)

ಪ್ರಧಾನ ಭೂಮಿಕೆಯಲ್ಲಿ:— ಕುಮಾರಿ, ಲಕ್ಷ್ಮೀರಾಜ್ಯಂ, (ಜ್ಯೂನಿಯರ್) ಸಿ. ಎಸ್. ಆರ್. ಗೌರೀನಾಥಶಾಸ್ತ್ರಿ ಮತ್ತು ಕನಕಂ

---

ದೈನಿಕ ಕೌಟುಂಬಿಕ ಜೀವನವನ್ನು ಚಿತ್ರಿಸುವ ಆದರ್ಶ ಚಿತ್ರ.

ASSOCIATED PRODUCTIONS

# AMMA

TAMIL

# ಅಮ್ಮಾ

(ತಮಿಳು)

ದಿಗ್ದರ್ಶಕ :

ಕೆ. ವೆಂಬು

---

ಮಹಾನ್ ಪೌರಾಣಿಕ ಚಿತ್ರ

# ಶ್ರೀವಿಷ್ಣು ಭಗವಾನ

ಭೂ.— ನಿರುಪಾರಾಯ, ತ್ರಿಲೋಕ ಕಪೂರ

---

ಕರ್ನಾಟಕದ ಪ್ರಮುಖ ಪಟ್ಟಣಗಳಲ್ಲಿ ಶೀಘ್ರದಲ್ಲಿಯೇ ಪ್ರದರ್ಶಿಸಲ್ಪಡುವ ಅಶೋಕರವರ ಶ್ರೇಷ್ಠ ಪೌರಾಣಿಕ ತೆಲಗು ಚಿತ್ರಪಟ





# ವಾಲೀ-ಸುಗ್ರೀವ

★

ಡಾಯರೆಕ್ಟರ:

ಐಂಪನ್

ಮುಖ್ಯ ಭೂಮಿಕೆ:

★ ಎಸ್. ವರಲಕ್ಷ್ಮೀ ★ ಜಿ. ವರಲಕ್ಷ್ಮೀ

★ ಶ್ರೀ ರಂಜನಿ ★ ಸಿ.ಎಸ್.ಆರ್.

★ ರಾಜೇರಾವ್ ★ ಸದಾಸಿವರಾವ



**SHAKUNTALA FILM DISTRIBUTORS**

SHROFF BAZAR, DHARWAR

*For full particulars please contact with Sole distributors for Maharastra & Karnatak*

Phone : 84 Gram : Shantikunj'

ಸ್ಥಾಪನಾ ೧೯೧೮

ತಾರಿನ ವಿಳಾಸ:- ಸ್ಟೀಲಸೇಫ

ಟೆಲಿಫೋನ ನಂ. ೨೯



# ಸಿದ್ಧೇಶ್ವರ ಕಂಪನಿ ಹುಬ್ಬಳ್ಳಿ

ನಮ್ಮಲ್ಲಿ ಮಿಗಿಲಾದ ಉಕ್ಕಿನ ತಿಜೋರಿ, ಕಪಾಟು, ಸ್ಟ್ರಾಂಗರೂಮ ಡೋರ್ಸ, ಸೇಫ ಡಿಪಾಜಿಟ್ ಲಾಕರ್ಸ, ಕ್ಯಾಶಬಾಕ್ಸ, ಗ್ರಿಲ್ಸ, ಕೀಲಿ ಮುಂತಾದ ಅನೇಕ ವಸ್ತುಗಳು ತಯಾರಾಗುತ್ತವೆ.

"ಸಿದ್ಧೇಶ್ವರ" ತಿಜೋರಿ ಮುಂತಾದವುಗಳನ್ನು ೩೫ ವರ್ಷದ ದೀರ್ಘಾವಧಿಯ ಸತತ ಪ್ರಯತ್ನ, ರಚನೆ ಅತ್ಯಾಧುನಿಕ ಯಂತ್ರೋಪಕರಣಗಳ ಜೋಡಣೆ, ಮುಂತಾದ ಸಮ್ಮಿಶ್ರಗಳ ಯೋಜನೆಯಿಂದ "ಬೆಂಕಿ ಮತ್ತು ಕಳವು" ಇವುಗಳ ವಿರುದ್ಧ ಪ್ರಬಲವಾದ ಸಂರಕ್ಷಣೆಯನ್ನೀಯುವ ಸಾಮರ್ಥ್ಯವನ್ನು ಪಡೆದಿವೆ.

— ಇದೂ ಅಲ್ಲದೆ —

ಈಗ ಹೊಸತಾಗಿ ತಯಾರಿಸುತ್ತಿರುವ ನಮ್ಮ ಉಕ್ಕಿನ "ಬ್ಲೂನೆಕ್ಕ" ಕಪಾಟುಗಳ, ಸ್ಟೀಲ ರ್‍ಯಾಕುಗಳು ಕಾಟು (ಪಲಂಗು) ತೊಟ್ಟಿಲ ಮುಂತಾದವುಗಳು ಅಲ್ಪಾವಧಿಯಲ್ಲಿಯೇ ಜನಪ್ರಿಯವಾಗಿರುವವು.

ಹೆಚ್ಚಿನ ಮಾಹಿತಿಗಾಗಿ ಪತ್ರ ಬರೆಯಿರಿ ಇಲ್ಲವೆ ಸಮಕ್ಷಮ ಬನ್ನಿರಿ.

**ಹೊಸ ವರ್ಷವು ಎಲ್ಲರಿಗೂ ಸುಖಪ್ರದವಾಗಲೆಂದು ಬೇಡುವ**

## ಸಿದ್ಧೇಶ್ವರ ಮತ್ತು ಕಂಪನಿ ಹುಬ್ಬಳ್ಳಿ

ಫ್ಯಾಕ್ಟರಿ ಮತ್ತು ಆಫೀಸು: **ಹುಬ್ಬಳ್ಳಿ** ಬಮ್ಮಾಪೂರಗಲ್ಲಿ

ಬ್ರ್ಯಾಂಚುಗಳು
ಹೈದ್ರಾಬಾದ (ಡೆಕ್ಕನ), ಕೊಲ್ಲಾಪೂರ

ಏಜನ್ಸಿಗಳು
ದಾವಣಗೇರಿ, ತಿಪಟೂರು

---

*Tel :* DURGA TEA

*Phone :* 45 A.

ಗದಗಿನಲ್ಲಿ ಒಂದೇ ಒಂದು ಸ್ಥಳ!

**ಅತ್ಯುತ್ತಮ ವಸತಿ, ಶ್ರೇಷ್ಠತರಗತಿಯ ಭೋಜನ ಸೌಕರ್ಯ ಮತ್ತು ನಮ್ರ ಸೇವೆ!!**

ಬಹುದಿನಗಳಿಂದಲೂ ಖ್ಯಾತಿಪಡೆದ

# ದುರ್ಗಾ ಲಾಜ ಗದಗ

**ಆದರ್ಶ ಬೋರ್ಡಿಂಗ ಮತ್ತು ಲಾಜಿಂಗ ಹೌಸ್**

ಸಂದರ್ಶಿಸಲು ಮರೆಯದಿರಿ

**ದೀಪಾವಳಿಯು ನಮ್ಮ ಗ್ರಾಹಕರಿಗೂ ಮತ್ತು ಹಿತೈಷಿಗಳಿಗೂ ಸುಖಸಮೃದ್ಧಿಯನ್ನೀಯಲಿ.**

# ಪರಿವಿಡಿ

# INDEX TO ADVERTISERS



(P. T. O.)







**Index to Advertisers (*contd.*)** — P. No.








ಸಂಸ್ಥಾಪಕರು : ರಂ. ರಾ. ದಿವಾಕರ ★ ದೀಪಾವಳಿ ಸಂಚಿಕೆ ೧೯೫೨ ★ ಸಂಪಾದಕರು : ಹ. ರಾ. ಪುರೋಹಿತ

# ನಮ್ಮ ನುಡಿ

ನಂದನ ಸಂವತ್ಸರದ ದೀಪಾವಳಿಯ ಈ ಶುಭಪ್ರಸಂಗದಲ್ಲಿ ನಮ್ಮ ಓದುಗರ ಕರಕಮಲಗಳಲ್ಲಿ ಈ ವಿಶೇಷ ಸಂಚಿಕೆಯನ್ನು ಇರಿಸಲು ಸಂತೋಷವೆನಿಸುತ್ತದೆ. ಇದು ನಾವು ಸಮರ್ಪಿಸುತ್ತಿರುವ ಐದನೇ ದೀಪಾವಳಿ ಸಂಚಿಕೆ. ಈ ಸಂಚಿಕೆಯ ನಂದನವನದಲ್ಲಿ ವಿಹರಿಸುವ ಓದುಗರ ಎಲ್ಲ ಅಭಿರುಚಿಗಳಿಗೂ ಒಂದಲ್ಲ ಒಂದು ರೋಚಕವಾದ ಅಂಶ ದೊರೆತು ಹಬ್ಬದ ಆನಂದದಲ್ಲಿ ಹೊಸ ಸವಿಯನ್ನುಂಟುಮಾಡದಿರದೆಂದು ನಂಬಿದ್ದೇವೆ.



ವರ್ಷವರ್ಷವೂ ಗಳಿಸಿದ ಅನುಭವದಿಂದ ಹೊಸ ಹೊಸ ವಿಚಾರಗಳನ್ನು ಆಚರಣೆಗೆ ತರಲು ನಾವು ಯತ್ನಿಸುತ್ತಿದ್ದೇವೆ. ದೀಪಾವಳಿಯಂಥ ಹಬ್ಬದಲ್ಲಿ ಮನೋರಂಜನೆಗೆ ಪ್ರಥಮ ಪ್ರಾಶಸ್ತ್ಯವೆಂದು ಈ ಸಲ ಲಲಿತಸಾಹಿತ್ಯಕ್ಕೆ ಎಂದಿಗಿಂತ ಹೆಚ್ಚು ಸ್ಥಳ ಕೊಟ್ಟಿದ್ದನ್ನು ಓದುಗರು ಗಮನಿಸಬಹುದು. ಅದರಲ್ಲಿಯೂ ಈ ಸಂದರ್ಭಕ್ಕಾಗಿಯೇ ಏರ್ಪಡಿಸಿದ ಕಥಾಸ್ಪರ್ಧೆ ಈ ಸಲದ ವೈಶಿಷ್ಟ್ಯವಾಗಿದೆ. ಅದರಲ್ಲಿ ಪ್ರಥಮ ಬಹುಮಾನ ಪಡೆದ ಶ್ರೀ ವರಗಿರಿ ಮಾರ್ತಾಂಡ ರಾವ್, ಎಂ.ಎ., ಬಿ.ಟಿ. ಇವರು ಈಗಾಗಲೆ ಕಾದಂಬರಿ ಚಿಕ್ಕ ಕತೆಗಳನ್ನು ಪ್ರಕಟಿಸಿದವರಿದ್ದು ಈಗ್ಗೆ ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದಾರೆ. ದ್ವಿತೀಯ ಬಹುಮಾನ ಪಡೆದ ಶ್ರೀ ಸುಬ್ಬಣಾಚಾರ್ಯ ಎಕ್ಕುಂಡಿ, ಬಿ. ಎ. ( ಆನರ್ಸ) ಇವರು ಬಂಕೀಕೊಡ್ಲದ ಆನಂದಾಶ್ರಮ ಹೈಸ್ಕೂಲಿನಲ್ಲಿ ಶಿಕ್ಷಕರೂ ಕನ್ನಡದ ಉದೀಯಮಾನ ಕವಿಗಳಲ್ಲಿ ಗಣ್ಯರೂ ಇದ್ದಾರೆ. ಅವರಿಬ್ಬರಿಗೂ ಅಭಿನಂದನೆಗಳನ್ನು ಸಲ್ಲಿಸುವೆವು.



ಕಳೆದ ದೀಪಾವಳಿಯಿಂದೀಚೆಗೆ ದೇಶದಲ್ಲಿ ನಡೆದ ಸಂಗತಿಗಳನ್ನು ಸಿಂಹಾವಲೋಕನ ಮಾಡುವುದಾದಲ್ಲಿ ಜಗತ್ತಿನಲ್ಲೇ ಅಭೂತಪೂರ್ವವಾದ ಪ್ರಜಾಸತ್ತಾತ್ಮಕ ಪ್ರಯೋಗವೆಂದು ಎಲ್ಲೆಲ್ಲೂ ಪ್ರಶಂಸಿಸಲ್ಪಟ್ಟ ಸಾರ್ವತ್ರಿಕ ಪ್ರೌಢಮತದಾನಾತ್ಮಕ ಚುನಾವಣೆಗಳು ಯಶಸ್ವಿಯಾಗಿ ಮುಗಿದುದು ಉಲ್ಲೇಖಾರ್ಹವಾಗಿದೆ. ಆದರೆ ಪ್ರಜಾಸತ್ತೆಯು ಬರಿಹೊಟ್ಟೆಯಲ್ಲಿ ತಾಳುವುದಿಲ್ಲೆಂಬ ಮಾತನ್ನು ಮರೆಯುವಂತಿಲ್ಲ. ನಮ್ಮ ದುರ್ದೈವದಿಂದಲೋ ಅಥವಾ ದೈವೀ ಪರೀಕ್ಷೆಯೆಂದೋ ಒಂದಲ್ಲ ಒಂದು ತೆರದಿಂದ ಪ್ರಕೃತಿಯು ನಮ್ಮ ಹೊಟ್ಟೆಯ ಯೋಜನೆಗೆ ಪೆಟ್ಟು ಕೊಡುತ್ತಲೇ ಇದ್ದು ಈ ವರ್ಷ ಹಲವೆಡೆ ಬರಗಾಲದ ಕ್ರಂದನ ಕೇಳಬರುತ್ತಿದೆ. ಆದರೂ ನಾವು ಇವೆಲ್ಲ ಪರೀಕ್ಷೆಗಳಿಂದ ಯಶಸ್ವಿಯಾಗಿ ಪಾರಾಗುವೆವೆಂಬ ಆತ್ಮವಿಶ್ವಾಸದಿಂದ ಮುನ್ನುಗ್ಗಬೇಕಾಗಿದೆ. ಪಂಚವಾರ್ಷಿಕ ಯೋಜನೆಯು ನಮ್ಮ ಮುನ್ನಡೆಗೊಂದು ದಿಕ್ಸೂಚಿಯಾಗಿದೆ. ಭಾರತದ ಪ್ರತಿಯೊಬ್ಬ ನಾಗರಿಕನೂ ಈ ಸಂಪದಭಿವೃದ್ಧಿ ಕಾರ್ಯದಲ್ಲಿ ಆತ್ಮೀಯತೆಯಿಂದ ದುಡಿದರೆ ಅದು ನಾವೆಲ್ಲ ಅಮೂಲ್ಯವೆಂದು ಬಗೆಯುವ ರಾಜಕೀಯ ಮತ್ತು ವೈಯಕ್ತಿಕ ಸ್ವಾತಂತ್ರ್ಯಕ್ಕೆ ತಳಹದಿಯಾದ ಆರ್ಥಿಕ ಸ್ವಾತಂತ್ರ್ಯವನ್ನು ತಂದುಕೊಡುವಲ್ಲಿ ಸಂಶಯವಿಲ್ಲ. ಹಬ್ಬದ ಸಮಾರಂಭದಲ್ಲಿ "ಅರಸಾಗಿ ಉಣ್ಣು"ವುದರೊಡನೆ ಇತರ ಕಾಲಗಳಲ್ಲಿ "ಆಳಾಗಿ ದುಡಿ"ಯಲು ನಾವು ಹಿಂಜರಿಯಬಾರದು. ಇದನ್ನು ಹಬ್ಬದ ಹೊತ್ತಿನಲ್ಲೂ ನಾವು ಮರೆಯುವಂತಿಲ್ಲ.



ಕೊನೆಯದಾಗಿ, ಕೃತಜ್ಞತಾ ಸಮರ್ಪಣೆ. ಈ ಸಂಚಿಕೆಗಾಗಿ ಲೇಖಗಳನ್ನೂ ಚಿತ್ರ ಮೊದಲಾದವುಗಳನ್ನೂ ಒದಗಿಸಿದವರಿಗೆಲ್ಲ ನಮ್ಮ ಮೊದಲನೆ ಅಭಿನಂದನೆಗಳು. ಈ ಸಾರಿಯ ಮುಖಚಿತ್ರವನ್ನೊದಗಿಸಿದವರು ಮುಂಬಯಿಯ ಕಲಾವಿದ ಶ್ರೀ ದಲಾಲರು. ಅವರಿಗೂ ಪಡಿಯಚ್ಚುಗಳನ್ನೊದಗಿಸಿದ ಮುಂಬಯಿಯ ವಾಗಳೆ ಕಂಪನಿ, ಧಾರವಾಡದ ಶ್ರೀನಿವಾಸ ಕಂಪನಿ ಹಾಗೂ ಹುಬ್ಬಳ್ಳಿಯ ಐಡಿಯಲ್ ಫೋಟೋ ಝಿಂಕೋ ವರ್ಕ್ಸ್ ಇವರಿಗೂ ಕೃತಜ್ಞತೆಗಳು. ಕಥಾಸ್ಪರ್ಧೆಯಲ್ಲಿ ಭಾಗವಹಿಸಿದ ಎಲ್ಲ ಕತೆಗಾರರನ್ನೂ ಪರೀಕ್ಷಕರಾಗಿ ಶ್ರಮಪಟ್ಟ ಪ್ರೊ. ತೀ. ನಂ. ಶ್ರೀಕಂಠಯ್ಯ, ಪ್ರೊ. ವಿ. ಎಂ. ಇನಾಮದಾರ ಮತ್ತು ಶ್ರೀ ಬೆಟಗೇರಿ ಕೃಷ್ಣಶರ್ಮ ಇವರನ್ನೂ ನಾವು ಹೃತ್ಪೂರ್ವಕ ಅಭಿವಂದಿಸುವೆವು. ಈ ಬಾರಿಯೂ ಹೇಳಿ ಬರೆಸಿದ ಹಾಗು ತಾವಾಗಿ ಬಂದ ಕೆಲ ಲೇಖಗಳು ಉತ್ತಮವಾಗಿದ್ದರೂ ಸ್ಥಳಾಭಾವದಿಂದ ಮತ್ತು ಸಮಯಾಭಾವದಿಂದ ಉಳಿದುಹೋದುದಕ್ಕಾಗಿ ಆಯಾ ಲೇಖಕರ ಕ್ಷಮೆ ಕೋರಿ ಅವನ್ನು ಕ್ರಮಶಃ 'ಕರ್ಮವೀರ'ದ ಸಾದಾ ಸಂಚಿಕೆಯಲ್ಲಿ ಪ್ರಕಟಿಸುವ ಆಶ್ವಾಸನೆ ಕೊಡುವೆವು. ಜಾಹಿರಾತುದಾರರನ್ನೂ ಈ ಸಂಚಿಕೆಗಾಗಿ ತುಂಬ ಶ್ರಮದಿಂದ ದುಡಿದ ನಮ್ಮ ಮುದ್ರಣ ಮತ್ತು ಇತರ ವಿಭಾಗಗಳ ಕೆಲಸಗಾರರು ಮತ್ತು ಸಹಕಾರಿಗಳನ್ನೂ ಅಭಿನಂದಿಸದಿರಲಾರೆವು.

ದೀಪಾವಳಿ ಸರ್ವರಿಗೂ ಉಲ್ಲಾಸದಾಯಕವಾಗಿ ಹೊಸ ಆನಂದದ ಯುಗದ ಪ್ರಾರಂಭವಾಗಲೆಂದು ಹಾರೈಸುತ್ತೇವೆ.

ಸರ್ವೇ ಜನಾಃ



ಸುಖಿನೋ ಭವಂತು !

# ಬಲ್ಲೆನೆ ಇಂತೊದರ್ವುದೇಕೆ

ಬಲ್ಲೆನೆ ಇಂತೊದರ್ವುದೇಕೆ
ಮುಖರಮೆನ್ನ ಮನಂ ?
ಮನಸನಿಂತು ಕೆದರ್ವುದೇಕೆ
ಚಪಲಮೆನ್ನ ನೆನಂ ?
ತುಲಸಿಬನದ ತುರುಚೆಯನ್ನ
ತೊಲಗದಿಹರೆ ನುಡಿಯನೆನ್ನ
[೧]ಇನ್ನ ಮುನ್ನ ಜನಂ ? ೭

ಆದಡಿಂತು ನುಡಿವೆನೇಕೆ
ಬಲ್ಲೆನೆ ನಾನಣಂ ?
ನನ್ನನಿಂತು ನುಡಿಸುವೇಕೆ
ಬಲ್ಲೆನೆ ಕಾರಣಂ ?
ಮನದ ಬುಗರಿ ತಿರಿಚುವನ್ನ[೨]
ಸುಮ್ಮನಿಹುದೆ ಕಿರಿಚದೆನ್ನ
ಎದೆಯ [೩]ದಿದೃಕ್ಷಣಂ ? ೧೪

ನುಡಿವೆನಾರಿಗೆಂದು ಹೊಡೆ[೪]
ಮನಸನಿಂತನಿಶಂ,
ಕನದ ಕದನ ನೀನೆ ದೂಡೆ
ತೆರೆಯದೆಂತವಶಂ ?
ಅರಳಲೊಲ್ಲದಿರುಳ ನಲಿನ-
ದೆದೆಗೆ ಸುಳಿಯೆ [೫]ಹಗಲಿನಲಿನ-
ನರಳದೆಂತು ಭೃಶಂ ? ೨೧

ದುಂದುಗೆಡಿಸಲಲ್ಲ ನುಡಿವೆ
ನನ್ನರ ಕಾಲವಂ,
ಸಲಿಸಲೆಂದು ನುಡಿಗೆ ದುಡಿವೆ
ನಿನ್ನಯ ಸಾಲವಂ;
ಉರುಳುರುಳಿ ತರಂಗಮುಣಂ
ತೆರಬಲ್ಲುದೆ ಕಡಲ ರಿಣಂ ?—
ತೆತ್ತೆನೆ ನಾ ಲವಂ ? ೨೮

ಕಠಿನ ಸಾಧನದಿಂದಲ್ಲ-
ದೆಲ್ಲಿ ಸರಲ ಸ್ವರಂ ?
ಶಿಶಿರವ್ರತದ ಕುಕಿಲಿಗಲ್ಲ-
ದೆಲ್ಲಿ ಮಧುರ ವರಂ ?
ಸಾಧಿಸಿತೇಂ ಸ್ವರವನೋಂಟಿ ? [೬]
ಸಾಧನದೆನಗೇಕೆ ತಂಟೆ ?
ನಿನ್ನನುಳಿದು ಪರಂ ? ೩೫

ಸಾಧನ ಗಡ ನನ್ನದಲ್ಲ
ಸ್ವರಮಥವಾದರಂ;
ಒಡೆಯ, ನುಡಿಯ ಗೊಡವೆ ಎಲ್ಲ
ನೀನೆ ನಿರಂತರಂ.
ಸಾಕೆನಗೀ ನುಡಿಯ ಪಥಂ
ಸಾಗೆ ನಿನಗೆ, ರವಿಯ ರಥಂ
ಸಾಗದೆಲ್ಲಿವರಂ. ೪೨

ಒಲ್ಲಡೆ ನೀನೆನ್ನ ನುಡಿಯ-
ನೇಕೆ ಜಲೇ ಹುತಂ ?
ನುಡಿಯಲೆ ? ತಡೆಯಲೇನೊಡೆಯ ?
ನುಡಿಯ ನಿನ್ನ ಹಿತಂ.
ನಿನ್ನೊಳಿಂತು ಮೊರೆವ ಜೆದೆಗೆ
ಕರೆವುದು ಶತಧಾರನೆದೆಗೆ—
'ಆಲಿಪೆನವಿರತಂ.' ೪೯

—ಗೋವಿಂದ ಪೈ

೧ ಇನ್ನ = ಇಂದಿನ. ೨ ತಿರಿಚುವನ್ನ = ತಿರುಗಿಸುತ್ತಿರುವಾಗ. ೩ ದಿದೃಕ್ಷಣ = ದಿದೃಕ್ಷೆ, ನೋಡಬೇಕೆಂಬ ಆಶೆ. ೪ ಹೂಡು = ಬಾಗಲು ಮುಚ್ಚು. ೫ ಹಗಲಿನಲಿ + ಇನನ್ + ಅರಳಬು + ಎಂತು. ೬ ಓಂಟಿ = ಕೊಳಲು.

---

# ಆ ಗ ಮ ನ

ನೀಲಾಶ್ವವನ್ನೇರಿ
ಮನದ ಕ್ಷಿತಿಜವ ಸಾರಿ
ದಿವ್ಯ ಹಾಸವ ಬೀರಿ
ತಾಯಿ ನೀ ಬರುವಿ !
ನೂರು ಕೊಳಲಿನ ದನಿಯ
ಬಾಳ ಚಿಂತಾಮಣಿಯ
ವಿಶ್ವದಿರವಿನ ಕಣಿಯ
ಒಡನೆ ತರುವಿ.

ಆಗಮನಕೆದೆಯುಕ್ಕಿ
ನಿನ್ನೊಳಗದ ಹಕ್ಕಿ—
ನಿಮಿಷಗಳ ಪಿಕಲಕ್ಕಿ—
ಒಲಿದು ಹಾಡುವವು.
ಬರುವನಕ ಸಂತೈಸಿ
ಬಂದೊಡನೆ ಸಂಭ್ರಮಿಸಿ
ತಮ್ಮ ಹಾಡನು ನಿಲಿಸಿ
ನಿನ್ನ ನೋಡುವವು !

—ವಿನಾಯಕ

# ಪ್ರಾರ್ಥನೆ

## ಅದರ ವಿಶಿಷ್ಟ ಸ್ಥಾನ ಮತ್ತು ಮಹತ್ವ

ಪ್ರಾರ್ಥನೆಯೆಂಬುದು ಮನುಷ್ಯನಷ್ಟೇ ಪ್ರಾಚೀನವಾದುದು. ಮನುಷ್ಯನು ನಿರಾಶನಾದಾಗ, ನಿರುತ್ಸಾಹನಾದಾಗ ಪ್ರಾರ್ಥನೆಯಿಂದ ಅಪೂರ್ವ ಶಕ್ತಿಯನ್ನು ಪಡೆದು ಮುನ್ನುಗ್ಗಿದ್ದಾನೆ. ಪ್ರಾರ್ಥನೆ ಸಕಾಮ—ಅಂದರೆ ಐಹಿಕ ಲಾಭಗಳನ್ನು ಪಡೆಯುವ ಆಸೆಯಿಂದಾಗಲಿ, ಅಥವಾ ನಿಷ್ಕಾಮ—ಅಂದರೆ ಕೇವಲ ಪರಮಾತ್ಮಪ್ರೀತಿಗಾಗಲಿ ಇರಬಹುದು. ಇವೆರಡೂ ಬಗೆಯ ಪ್ರಾರ್ಥನೆಗಳ ಅವಶ್ಯಕತೆ, ಅವುಗಳಿಂದ ಪಡೆಯಬಹುದಾದ ಬಲ ಇವನ್ನು ಅಧ್ಯಾತ್ಮಜೀವಿಯಾದ ಶ್ರೀ ದಿವಾಕರರು ವಿವರಿಸಿದ್ದಾರೆ.

ಲೇಖಕರು: ಶ್ರೀ ರಂ. ರಾ. ದಿವಾಕರ

ಉಪಾಸನೆಯಲ್ಲಿ, ಆಧ್ಯಾತ್ಮಿಕ ಸಾಧನೆಯಲ್ಲಿ ಪ್ರಾರ್ಥನೆಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಆದುದರಿಂದ ಪ್ರಾರ್ಥನೆಯ ಮಹತ್ವ, ಅದರ ಪೂರ್ಣ ಅರ್ಥ, ಅದರ ವಿವಿಧ ರೂಪಗಳು, ಅದರ ಶಕ್ತಿ - ಸಾಮರ್ಥ್ಯಗಳು, ಅದರ ಪ್ರಯೋಜನ ಮುಂತಾದವುಗಳನ್ನು ಸ್ವಲ್ಪ ಮಟ್ಟಿಗೆ ವಿಚಾರಿಸುವದು ಅವಶ್ಯವಿರುವದು.

ಪಾರ್ಥನೆಯ ಮೂಲ ಅರ್ಥವು ಮೊರೆ ಇಡುವುದು, ಬೇಡಿಕೊಳ್ಳುವದು, ದೇವರನ್ನು ಆಹ್ವಾನಿಸುವದು ಎಂದು ಇರುವದು. ಇಂಗ್ಲೀಷ ಭಾಷೆಯಲ್ಲಿ ಕೂಡ 'ಪ್ರೇಯರ್' ಈ ಶಬ್ದಕ್ಕೆ ಇದೇ ಅರ್ಥವಿರುವದು. ನಾಲ್ಕು ಬಗೆಯ ಭಕ್ತರಿರುವರು ಎಂದು ಹೇಳುವಾಗ ಗೀತೆಯು 'ಅರ್ಥಾರ್ಥಿ' ಎಂಬ ಒಂದು ಬಗೆಯನ್ನು ಹೇಳಿರುವದು. ಅಲ್ಲಿ ಅದರ ಅರ್ಥವು 'ದೇವರಿಂದ ಯಾವದಾದರೊಂದು ಬಯಕೆಯನ್ನು ಪಡೆಯುವ ಇಚ್ಛೆಯುಳ್ಳ ಭಕ್ತ' ಎಂದು ಇರುವದು.

ಪ್ರಾರ್ಥನೆ ಈ ಶಬ್ದದಲ್ಲಿ ಪ್ರ+ಅರ್ಥ ಈ ಎರಡು ಪದಗಳು ಇರುವವು. ಅರ್ಥ ಅಂದರೆ ಬಯಕೆ, ಇಚ್ಛೆ, ಅಪೇಕ್ಷೆ. 'ಪ್ರ' ಅಂದರೆ ಹೆಚ್ಚಾಗಿ ಅಥವಾ ಹೆಚ್ಚಿನ. 'ಅರ್ಥ' ಅಥವಾ ಬಯಕೆ ಇದ್ದುದೆ ಪ್ರಾರ್ಥನೆ. ಈ ರೀತಿ ಮೂಲದಲ್ಲಿ 'ಪ್ರಾರ್ಥನೆ' ಇದು ಸಕಾಮ ಭಕ್ತಿಯ ಒಂದು ರೀತಿ, ಎಂದು ಹೇಳಬಹುದು. ತನಗಿಂತ ಹೆಚ್ಚಿನ ಶಕ್ತಿಯನ್ನು, ತನ್ನ ಬಯಕೆಯನ್ನು ಪೂರೈಸುವ ಶಕ್ತಿಯುಳ್ಳ ವ್ಯಕ್ತಿಯನ್ನು, ದೇವರನ್ನು ಆರಾಧಿಸುವದು, ಆಹ್ವಾನಿಸುವದು, ಬೇಡಿಕೊಳ್ಳುವದು, ಪ್ರಶಂಸಿಸುವದು, 'ಪ್ರಾರ್ಥನೆ' ಎಂದೆನಿಸುವದು. ಇದೊಂದು ಸಗುಣ, ಸಕಾಮ ಭಕ್ತಿಯ ರೂಪ. ಶುದ್ಧ ಭಕ್ತಿಯ ದೃಷ್ಟಿಯಿಂದ, ಭಕ್ತಿಯೋಗದ ದೃಷ್ಟಿಯಿಂದ ಇದೊಂದು ಗೌಣರೂಪವೆಂದೇ ಹೇಳಬಹುದು. 'ದೇವಾ, ನಮ್ಮ ನಿತ್ಯದ ರೊಟ್ಟಿಯನ್ನು ನಮಗೆ ದಯಪಾಲಿಸು' ಎಂದು ಒಂದು ಧರ್ಮದವರು ನಿತ್ಯ ಪ್ರಾರ್ಥಿಸುವದುಂಟು. ಇದು ಆ ವರ್ಗಕ್ಕೆಯೆ ಸೇರಿದುದು.

ಮೂಲಾರ್ಥ ಹಾಗೂ ಶಬ್ದಾರ್ಥ ಹೀಗಿದ್ದರೂ ಯೋಗರೂಢಿಯಿಂದ ಲಕ್ಷಣಾರ್ಥವು ವಿಕಸಿತವಾಗುತ್ತ ಹೋಯಿತು. ಯಾವುದೇ ಒಂದು ವೈಯಕ್ತಿಕ ವಿಶಿಷ್ಟವಾದ ಬಯಕೆಯನ್ನು ಕಣ್ಣೆದುರು ಇಟ್ಟುಕೊಳ್ಳದೆ ಭಕ್ತನು ದೇವರನ್ನು ಆಹ್ವಾನಿಸಿ 'ಸರ್ವಭೂತ ಹಿತವಾಗಲಿ' ಎಂದು ಬೇಡಿಕೊಂಡರೂ ಅದು ಪ್ರಾರ್ಥನೆಯೆ ಎನಿಸುವದು. ಅದೇ ರೀತಿ ಈಗ ಶಬ್ದ, ಗಾಯನ, ವಾದ್ಯ, ಮುಂತಾದವುಗಳ ಸಹಾಯದಿಂದ ಸಹ ಭಕ್ತನು ಪ್ರಾರ್ಥನೆ ನಡೆಯಿಸಬಲ್ಲನು. ಈ ರೀತಿ ಪ್ರಾರ್ಥನೆಗೆ ಈಗ ಒಂದು ವಿಶಾಲವಾದ ಅರ್ಥವು ಉಂಟಾಗಿದೆ. ಆದರೂ ಪ್ರತಿ ಪ್ರಾರ್ಥನೆಯಲ್ಲಿ, ಭಕ್ತನಿಗೆ ತನ್ನ ಅಲ್ಪಶಕ್ತಿತ್ವದ ಅರಿವು, ತನಗಿಂತ ಶ್ರೇಷ್ಠವಾದ ಸಗುಣ ಶಕ್ತಿಯಲ್ಲಿ ನಂಬಿಗೆ, ಆ ಶಕ್ತಿಯ ಆವಾಹನ ಹಾಗೂ ಆ ಶಕ್ತಿಗೆ ಮೊರೆ ಇಡುವಿಕೆ, ಆ ಮೊರೆ ಕೇಳಿ ಆ ಶಕ್ತಿ ಓಗೊಡಲಿ ಎಂಬ ಪ್ರಬಲವಾದ ಇಚ್ಛೆ, ಇವು ಅಡಕವಾಗಿರುವವು. ತನಗೂ ವಿಶ್ವದಲ್ಲಿರುವ ದಿವ್ಯಭವ್ಯ ಶಕ್ತಿಗೂ ಇದ್ದ ತನ್ಮಯತೆಯ ಸಂಬಂಧದ ಅನುಭವವಾಗಬೇಕು, ಆ ಅನುಭವದ ಮೂಲಕ ತಾನು ನಿಮಿತ್ತ ಮಾತ್ರನಾಗಿ ಬದುಕಿ ಬಾಳಬೇಕು, ಎಂಬುದೆ ಪ್ರಾರ್ಥನಾಶೀಲನಾದ ಭಕ್ತನ ಹರಕೆ; ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಸಾಧಕನು ಯಾವದೇ ಮಾರ್ಗದಿಂದ ಸಾಗುವುದಾದರೂ ಪ್ರಾರ್ಥನೆಗೆ ಒಂದು ಸ್ಥಾನವಿದೆ, ಗೌರವದ ಸ್ಥಾನವಿದೆ, ಎಂದು ಹೇಳಬಹುದು. ಆತ್ಮವಿಕಾಸಕ್ಕೆ ಅವಶ್ಯವಿರುವ ಸಾಧನಸಂಪತ್ತಿನಲ್ಲಿ ಪ್ರಾರ್ಥನೆಯೂ ಒಂದು. ಇನ್ನು ಅದು ಕೇವಲ ಸಕಾಮವಿರಕೂಡದು, ಬರೀ ವೈಯಕ್ತಿಕ ಬಯಕೆಗಳ ಪೂರೈಕೆಗಾಗಿ ಇರಬಾರದು, ಅಂಥಿಂಥ ದೈವಗಳನ್ನು ಕುರಿತು ಇರಬಾರದು ಎಂಬುದು ಸ್ಪಷ್ಟವಿರುವದು.

ಪ್ರಾರ್ಥನೆಯು ವೈಯಕ್ತಿಕವೂ ಇರಬಲ್ಲದು ಸಾಮೂಹಿಕವೂ ಇರಬಲ್ಲದು. ಸಾಮೂಹಿಕವಿರಕೂಡದು ಎಂದು ಹಟ ಹಿಡಿಯುವದೂ ತಪ್ಪು, ಸಾಮೂಹಿಕವೇ ಇರಬೇಕು ಎನ್ನುವುದೂ ಸೂಕ್ತವಲ್ಲ. ಪ್ರತಿಯೊಂದು ಬಗೆಯ ಸಾಧನೆಯು ವೈಯಕ್ತಿಕವಿರುವಂತೆ ಇದ್ದು ಸಾಮೂಹಿಕವೂ ಇರಬಲ್ಲುದು. ಹಾಗೆ ಇದ್ದರೆ ಅದು ಎರಡು ಬಗೆಯಿಂದ ಉಪಕಾರಕವಾಗುವದು. ಅದರಿಂದ ಒಂದು ಅನುಕೂಲ ವಾತಾವರಣವು ನಿರ್ಮಾಣವಾಗುವದು. ಅದೇ ರೀತಿ ಸಮಾಜದಲ್ಲಿ ಪ್ರಚಾರವಾಗಲು ಸುಲಭವಾಗುವದು. ಸಮೂಹದಲ್ಲಿ ಸೇರಿದವರಲ್ಲಿ ಹಲವರು ದಾಂಭಿಕರಿರುವರು, ಮನಸು ಏಕಾಗ್ರವಾಗಲು ಕಠಿಣವಾಗುವದು, ಎಂಬ ಮುಂತಾದ ಆಕ್ಷೇಪಗಳನ್ನು ಸಾಮೂಹಿಕ ಪ್ರಾರ್ಥನೆಯ ವಿರುದ್ಧ ಹಲವರು ಎತ್ತಬಹುದು. ಅಂಥ ದೋಷಾದಿಗಳು ಹಾಗೂ ಆಕ್ಷೇಪಗಳು ಪ್ರತಿಯೊಂದು ಬಗೆಯ ಸಾಧನದ ಬಗ್ಗೆಯೂ ಕಂಡುಬರುವವು. ಆದರೆ ಅವುಗಳಿಂದ ನಾವು ಎದೆಗುಂದುವ ಕಾರಣವಿಲ್ಲ. ಮನುಷ್ಯನು ಸಾಮಾಜಿಕ ಜೀವಿಯಾದುದರಿಂದ ಸಾಮೂಹಿಕ ಪ್ರಾರ್ಥನೆಗೆ ಉತ್ತೇಜನ ಕೊಡುವುದು ಸರ್ವಥಾ ಯೋಗ್ಯವು ಎಂದು ಹೇಳಲು ಅಡ್ಡಿಯಿಲ್ಲ.

ಪ್ರಾರ್ಥನೆಯು ಒಂದು ವಿಶಿಷ್ಟ ಬಗೆಯ ಆರಾಧನೆ ಇರುವುದರಿಂದ ಅದರ ಮಹತ್ವವೇನು ಹಾಗೂ ಅದರ ಉಪಯೋಗವು ಸಾಧಕನಿಗೆ ಯಾವ ವಿಶೇಷ ಪರಿಸ್ಥಿತಿಯಲ್ಲಿ ಆಗಬಲ್ಲದು ಇದನ್ನು ನೋಡುವದು ಮನೋವೇಧಕವಿರುವದು.

ಪ್ರಾರ್ಥನೆಯು ಭಕ್ತಿಮಾರ್ಗದ ಒಂದು ಅಂಗವಾಗಿರುವದೆಂಬುದು ಸ್ಪಷ್ಟವು. ದೇವರ ಸರ್ವಶಕ್ತಿಮತ್ವದಲ್ಲಿ ಸಂಪೂರ್ಣ ವಿಶ್ವಾಸ ಹಾಗೂ ನಮ್ರತೆಯಿಂದ ಭಾವನಾಪೂರ್ವಕವಾಗಿ ಆಹ್ವಾನಿಸಿದರೆ ದೇವರು ತನಗೆ ಸಹಾಯ ಮಾಡೇಮಾಡುವನು, ಎಂಬ ನಂಬುಗೆ ಇವು ಭಕ್ತನಲ್ಲಿ ಇದ್ದರೆ ಮಾತ್ರ ಪ್ರಾರ್ಥನೆ ಎಂಬುದು ಸಂಭವಿಸಬಲ್ಲದು. ತನ್ನ ಇಚ್ಛೆ, ತನ್ನ ಶಕ್ತಿ, ಇವು ತೀರ ಅಸಮರ್ಥವಿರುವವು ಎಂಬರಿವು ಕೂಡ ಭಕ್ತನಿಗೆ ಪೂರ್ಣವಾಗಿ ಇರುವದು. ಪ್ರಾರ್ಥನೆಯಿಂದ ಭಕ್ತನು ತನ್ನನ್ನು ಪರಾಶಕ್ತಿಯ ಅಧೀನಮಾಡಿಬಿಡುವನು. ಹಾಗೂ ಆ ಶಕ್ತಿಯಿಂದ ಬಲಗೊಂಡು ಮುಂದೆ ಸಾಗುವನು. ಆದುದರಿಂದ ನಿರುತ್ಸಾಹನಾದಾಗ, ಯಾವ ಮಾತಿನ ಬಗ್ಗೆ ನಿರಾಶನಾದಾಗ ಭಕ್ತನಿಗೆ ಪ್ರಾರ್ಥನೆಯು ಹೆಚ್ಚು ಪ್ರಯೋಜನವಾಗಬಲ್ಲದು. ಅದೇ ರೀತಿ ಯಾವದೊಂದು ಹೊಸ ಕಾರ್ಯವನ್ನು ಕೈಕೊಳ್ಳುವಾಗ ಕೂಡ ಪ್ರಾರ್ಥನೆ ಹೆಚ್ಚು ಉಪಯುಕ್ತವಾಗಬಲ್ಲದು. ಅರ್ಥಾತ್ ಪ್ರಾರ್ಥಿಸುವಾಗ ಭಕ್ತನ ಸಂಕಲ್ಪವು ಶುದ್ಧವಿರ

ಬೇಕು, ಭಕ್ತಿ-ವಿಶ್ವಾಸಗಳು ಅಪಾರವಾಗಿರ ಬೇಕು, ದೇವರೊಡನೆ ತನ್ಮಯನಾಗಿ ಅವನನ್ನು ಆರಾಧಿಸುವ ಸಿದ್ಧತೆ ಹಾಗೂ ವಿವ್ಹಲತೆ ಬೇಕು, ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಇನ್ನು ಭಕ್ತನು ಯಾವದೊಂದು ಪ್ರಸಂಗ ದಲ್ಲಿ ಮಾತ್ರ ಅಥವಾ ಯಾವದೊಂದು ಸಂಕಲ್ಪ ವನ್ನು ಸಾಧಿಸುವ ಸಂದರ್ಭದಲ್ಲಿ ಮಾತ್ರ ಪ್ರಾರ್ಥಿಸ ಬೇಕು ಎಂದು ಯಾರೂ ತಿಳಿಯಕೂಡದು. ಭಕ್ತನು ಸತತ ಹಾಗೂ ನಿತ್ಯ ಪ್ರಾರ್ಥನೆ ಮಾಡ ಬಲ್ಲನು. ಪ್ರಾರ್ಥನಾ ಭಾವದಿಂದಲೆ ಅವನು ತನ್ನ ಜೀವನವನ್ನು ನಡೆಯಿಸಬಲ್ಲನು. ತಾನು ಅಲ್ಪ ಶಕ್ತಿ, ಪರಮಾತ್ಮನು ಸರ್ವಶಕ್ತಿವಂತನು, ಎಂಬ ಭಾವನೆಯಿಂದ ಪ್ರಾರಂಭಮಾಡಿ ಪ್ರಾರ್ಥನಾಶೀಲ ನಾದ ಭಕ್ತನು, ದೇವರೇ ಎಲ್ಲವನ್ನು ಮಾಡು ವವನು, ತಾನು ನಿಮಿತ್ತಮಾತ್ರನು, ಎಂಬ ಸ್ಥಾಯೀಭಾವದ ವರೆಗೆ ತನ್ನ ವಿಕಾಸವನ್ನು ಮಾಡಿಕೊಳ್ಳಬಲ್ಲನು. ಈ ರೀತಿ ಆತ್ಮನಿವೇದನವೆ ಈ ಮಾರ್ಗದಲ್ಲಿ ಪರಮಾವಧಿಯ ಅವಸ್ಥೆ ಅಥವಾ ಪರಮುಗತಿ ಎನಿಸುವದು.

ಪ್ರಾರ್ಥನೆ ಎಂಬುದು ವೈದಿಕ-ಕಾಲದಿಂದಲೂ ನಡೆಯುತ್ತ ಬಂದ ಸಾಧನ ವಿಶೇಷವಾಗಿದೆ. ಋಗ್ವೇದದಲ್ಲಿ ಪ್ರಾರ್ಥನಾಪರ ಮಂತ್ರಗಳು ಹೇರಳ ವಾಗಿವೆ. ಉದಾ:- ಪ್ರಥಮ ಮಂಡಲದಲ್ಲಿಯ (೧,೮೯,೬) 'ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ ಸ್ವಸ್ತಿ ನಃ ಪೂಷಾ ವಿಶ್ವವೇದಾಃ। ಸ್ವಸ್ತಿ ನಃ ತಾರ್ಕ್ಷ್ಯೋ ಅರಿಷ್ಟನೇಮಿಃ ಸ್ವಸ್ತಿ ನೋ ಬೃಹಸ್ಪತಿ ರ್ಧಧಾತು॥' ಈ ಮಂತ್ರವನ್ನೇ ನೋಡುವ. ಪ್ರಸಿದ್ಧ ಪುರುಷನಾದ ಇಂದ್ರ, ವಿಶ್ವವೇದನಾದ ಪೂಷನ್, ಮಹಾನ್ ಗರುಡ, ಮತ್ತು ಬೃಹಸ್ಪತಿ ಇವರೆಲ್ಲರೂ ಅಕ್ಷಯಸುಖವನ್ನು ನಮಗೆ ದಯ ಪಾಲಿಸಲಿ, ಎಂಬ ಪ್ರಾರ್ಥನೆ ಇಲ್ಲಿ ಇದೆ. ವೇದ ಗಳಲ್ಲಿ ಕೇವಲ ಐಹಿಕಸುಖ, ದೀರ್ಘಾಯುಷ್ಯ, ಸಂಪತ್ತು, ವೈಭವ ಇವುಗಳ ಬಗ್ಗೆಯೆ ಪ್ರಾರ್ಥನಾ ಮಂತ್ರಗಳಿವೆ, ಎಂದು ಹಲವರು ಟೀಕಿಸುವರು. ಆದರೆ 'ಅಭ್ಯುದಯ, ನಿಃಶ್ರೇಯಸ' ಈ ಎರಡೂ ಧ್ಯೇಯಗಳನ್ನು ಸಾಧಿಸುವುದೇ ಋಷಿ-ಮುನಿ ಗಳ ಗುರಿಯಾಗಿತ್ತು, ಎಂಬುದನ್ನು ಬೇರೆ ಹೇಳ ಬೇಕಾಗಿಲ್ಲ. ಲೌಕಿಕ ಅಭ್ಯುದಯ, ಪಾರಮಾರ್ಥಿಕ ನಿಃಶ್ರೇಯಸ ಇವೆರಡನ್ನೂ ಏಕಕಾಲಕ್ಕೆ ಸಾಧಿ ಸುವುದಕ್ಕಾಗಿಯೆ ಆಗಿನ ಸಾಧಕರು ಹೆಣಗು ತಿದ್ದರು. ಆದುದರಿಂದ ಉಜ್ವಲವಾದ ಹಾಗೂ ಸುದೀರ್ಘವಾದ ಆಯುಷ್ಯವನ್ನು ಕೋರುವಂತೆ ಪುರಾತನರು 'ಸತ್ಯಧರ್ಮಾಯ ದೃಷ್ಟಯೇ' ಸತ್ಯ ಧರ್ಮದ ದರ್ಶನಕ್ಕಾಗಿ ಸೂರ್ಯದೇವತೆಯ ಅಥವಾ ಜ್ಞಾನದೇವತೆಯ ಆರಾಧನೆಯನ್ನಾದರೂ ಅತೀವ ನಿಷ್ಠೆಯಿಂದ ಮಾಡುತಿದ್ದರು.

ಈ ರೀತಿ ಪ್ರಾರ್ಥನೆಯು ಪುರಾತನ ಕಾಲ ದಿಂದ ಪರಂಪರಾಗತವಾಗಿ ಬಂದ ಸಾಧನವು, ಈಗ್ಯೂ ಅದು ಅಷ್ಟೇ ಉಪಯುಕ್ತವು, ಫಲ ಕಾರಿಯು, ಸಹಜವು, ಹಾಗೂ ಸುಲಭವು.

# ಪಾರ್ಲಿಮೆಂಟರಿ ರಾಜ್ಯದ ಅನುಭವ

ಭಾರತವು ಪಾರ್ಲಿಮೆಂಟರಿ ರಾಜ್ಯಪದ್ಧತಿಯನ್ನು ಅಂಗೀಕರಿಸಿದೆ. ಆದರೆ ಅದರ ಯಶಸ್ಸಿನ ಬಗ್ಗೆ ಸಂಶಯವನ್ನು ವ್ಯಕ್ತಗೊಳಿಸುವವರುಂಟು. ಈಗೈದು ವರ್ಷಗಳ ಅನುಭವವನ್ನು ನೋಡಲು ಅಂಥ ಸಂಶಯಕ್ಕೆ ಆಧಾರವಿಲ್ಲೆಂದು ತೋರುವುದು. ಭಾರತದ ಘಟನಾಸಮಿತಿಯ ಸದಸ್ಯರಾಗಿ ಹಾಗು ಈಗ ರಾಜ್ಯಸಭೆಯ ಉಪಾಧ್ಯಕ್ಷರಾಗಿರುವ ಪ್ರಸ್ತುತ ಲೇಖಕರು, ನಮ್ಮ ಪಾರ್ಲಿಮೆಂಟು ಯೋಗ್ಯವಾದ ಸಂಪ್ರದಾಯಗಳನ್ನು ಬೆಳಸಿಕೊಂಡು ಬರುತ್ತಿದೆ ಯೆಂದು ತೋರಿಸಿದ್ದಾರೆ.

ಲೇಖಕರು: ಶ್ರೀ ಸಂ. ವಾ. ಕೃಷ್ಣಮೂರ್ತಿರಾಯರು

---

ಭಾರತ ಸಂವಿಧಾನದ ೭೯ ನೇ ವಿಧಿಯಂತೆ ಪಾರ್ಲಮೆಂಟ (ಸಂಸತ್ತು) ಎಂದರೆ ರಾಷ್ಟ್ರಪತಿಗಳು, ರಾಜ್ಯ ಸಭೆ ಮತ್ತು ಲೋಕಸಭೆ. ೧೯೫೦ ನೆಯ ಇಸ್ವಿಯ ಜನೆವರಿ ೨೬ ರಂದು ಹೊಸ ಸಂವಿಧಾನವು ಆಚರಣೆಯಲ್ಲಿ ಬಂದು ರಾಷ್ಟ್ರಪತಿಗಳಾದ ಬಾಬು ರಾಜೇಂದ್ರ ಪ್ರಸಾದರು ಗವರ್ನರ ಜನರಲ್ ರಾಜಾಜಿಯವರಿಂದ ಅಧಿಕಾರ ವಹಿಸಿಕೊಂಡರು. ಸಂಸ್ಥಾನಿಕರು ಹೆಚ್ಚು ವ್ಯಾಪಕವಾದ ಪ್ರವೇಶ ಪತ್ರಗಳನ್ನು ಬರೆದು ಕೊಟ್ಟು ಭಾರತ ಸಂವಿಧಾನದಲ್ಲಿ ಅಡಕವಾದರು. ಅನಂತರ ಸಾರ್ವತ್ರಿಕ ಚುನಾವಣೆಗಳು ನಡೆದವು. ಹೊಸ ಪಾರ್ಲಿಮೆಂಟು ಸ್ಥಾಪಿತವಾಗಿ ತನ್ಮುಖಾಂತರ ರಾಷ್ಟ್ರದ ಆಡಳತೆ ಸಾಗಿದೆ. ಈ ಸಂವಿಧಾನದ ಸಂಬಂಧದಲ್ಲಿಯೇ ನನ್ನ ಅನುಭವಗಳನ್ನು ಸಂಕ್ಷೇಪತಃ ಇಲ್ಲಿ ಉಲ್ಲೇಖಿಸುತ್ತೇನೆ.

ಸ್ವತಂತ್ರ ಭಾರತದ ಮೊಟ್ಟಮೊದಲನೆಯ ಪಾರ್ಲಿಮೆಂಟ್ ಆರಂಭವಾದುದು ೧೯೫೨ ನೆಯ ಮೇ ೧೪ ರಿಂದ. ಈಗ ಪಾರ್ಲಿಮೆಂಟನ ಲೋಕಸಭೆ, ರಾಜ್ಯ ಸಭೆ ಎರಡೂ ಕೆಲಸ ಮಾಡುತ್ತಿವೆ. ಭಾರತದ ಎಲ್ಲ ರಾಜ್ಯಗಳ ವಯಸ್ಕ ಮತದಾರರು ತಮ್ಮ ಮತ ಕೊಟ್ಟು ಲೋಕ ಸಭೆಗೆ ೪೯೬ ಜನ ಸದಸ್ಯರನ್ನು ಕಳುಹಿಸಿದ್ದಾರೆ. ರಾಜ್ಯಗಳ ನಾನಾ ಶಾಸನ ಸಭೆಗಳ ಸದಸ್ಯರು ಮತಕೊಟ್ಟು ರಾಜ್ಯ ಸಭೆಯ ೨೧೬ ಜನ ಸದಸ್ಯರಲ್ಲಿ ೨೦೪ ಜನರನ್ನು ಆರಿಸಿ ಕಳುಹಿಸಿದ್ದಾರೆ. ಇನ್ನುಳಿದ ೧೨ ಜನರನ್ನು ಅಧ್ಯಕ್ಷರು ನೇಮಿಸಿದ್ದಾರೆ. ಈ ರೀತಿ ಈಗ ಇಂದಿನ ಪಾರ್ಲಿಮೆಂಟನಲ್ಲಿ ೭೧೨ ಜನ ಸದಸ್ಯರಿದ್ದಾರೆ. ರಾಜ್ಯ ಸಭೆಗೆ ರಾಷ್ಟ್ರದ ಉಪಾಧ್ಯಕ್ಷ ಡಾಕ್ಟರ್ ಸರ್ವಪಲ್ಲಿ ರಾಧಾಕೃಷ್ಣನ್ ಅಧ್ಯಕ್ಷರು. ಲೋಕ ಸಭೆಗೆ ಶ್ರೀ. ಜಿ. ವಿ. ಮಾವಳಣಕರರು ಅಧ್ಯಕ್ಷರು. ಎರಡು ಸಭೆಗಳ ಕಚೇರಿಗಳೂ ಆಯಾ ಸಭಾಧ್ಯಕ್ಷರಿಗೆ ಅಧೀನ.

ಹಿಂದಿನ ಪಾರ್ಲಿಮೆಂಟನಲ್ಲಿ ವ್ಯವಸ್ಥಿತ ಪಕ್ಷಗಳೇ ಇರಲಿಲ್ಲ. ದೇಶಾದ್ಯಂತ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕಮ್ಯುನಿಸ್ಟ ಪಕ್ಷ, ಸೋಷಲಿಸ್ಟ ಪಕ್ಷ, ಕೆ. ಎಂ. ಪಿ. ಪಕ್ಷ, ಹಿಂದೂ ಮಹಾ ಸಭೆ ಮುಂತಾಗಿ ನಾನಾ ಪಕ್ಷಗಳು ತಮ್ಮ ತಮ್ಮ ಬಲಾಬಲಗಳನ್ನು ಒರೆಗೆ ಹಚ್ಚಿದವು. ಪಾರ್ಲಿಮೆಂಟನ ಎರಡೂ ಸಭೆಗಳಲ್ಲಿ ಕಾಂಗ್ರೆಸ್ಸಿಗೆ ಬಹುಮತವಿದೆ. ಪಂಡಿತ ಜವಾಹರಲಾಲರೇ ಕಾಂಗ್ರೆಸ್ ಪಕ್ಷದ ನಾಯಕರಾಗಿ ಪೂರ್ಣ ಕಾಂಗ್ರೆಸ್ ಪಕ್ಷದ ಸರಕಾರ ಸ್ಥಾಪಿಸಿದ್ದಾರೆ. ಸದಾ ಎಚ್ಚತ್ತ ಸುವ್ಯವಸ್ಥಿತ ವಿರೋಧಿ ಪಕ್ಷಗಳು ಈಗ ಸರಕಾರವನ್ನು ಎದುರಿಸುತ್ತಿವೆ. ಆದ್ದರಿಂದ ಈಗ ಕಾಂಗ್ರೆಸ್ ಪಕ್ಷದಲ್ಲಿ ಹೆಚ್ಚು ಶಿಸ್ತು,ಸಂಯಮ ಮತ್ತು ಕಾರ್ಯಶ್ರದ್ಧೆ ಇರಬೇಕಾದದು ಅತ್ಯವಶ್ಯಕ. ವಿರೋಧಿ ಪಕ್ಷಗಳು ಎಷ್ಟೋ ಪ್ರಯತ್ನಪಟ್ಟರೂ ಕಳೆದ ಎರಡು ಅಧಿವೇಶನಗಳಲ್ಲಿ ಲೋಕಸಭೆಯಲ್ಲಾಗಲಿ, ರಾಜ್ಯ ಸಭೆಯಲ್ಲಾಗಲಿ, ಸರಕಾರವನ್ನು ಸೋಲಿಸಲು ಸಾಧ್ಯವಾಗಿಲ್ಲ.

ಈಗ ಬಹುಮಟ್ಟಿಗೆ ಕಾಮನ್ಸ್ ಸಭೆಯ ನಿಯಮನಿಬಂಧನೆಗಳನ್ನೇ ಆಚರಣೆಗೆ ತರಲಾಗಿದೆ. ಹಣಕಾಸಿನ ಬೇಡಿಕೆಗಳನ್ನು ಮಂಜೂರುಮಾಡಲು ಮತ್ತು ಮಂತ್ರಿ ಮಂಡಳದಲ್ಲಿ ಅವಿಶ್ವಾಸ ಸೂಚಿಸಲು ಲೋಕಸಭೆಗೆ ಮಾತ್ರಅಧಿಕಾರವಿದೆ. ಉಳಿದ ವಿಷಯಗಳಲ್ಲಿ ಎರಡು ಸಭೆಗಳಿಗೂ ಸಮಾನ ಅಧಿಕಾರ. ಎರಡೂ ಸಭೆಗಳು ಒಪ್ಪಿ ಅಧ್ಯಕ್ಷರ ಒಪ್ಪಿಗೆ ಮುದ್ರೆ ಬಿದ್ದರೆ ಮಾತ್ರ ಶಾಸನವಾಗುತ್ತದೆ. ಯಾವುದಾದರೊಂದುಸಭೆ ಒಪ್ಪದಿದ್ದರೆಸಂಯುಕ್ತ ಅಧಿವೇಶನದ ಬಹುಮತದ ಅಭಿಪ್ರಾಯದಂತೆ ಶಾಸನವಾಗುತ್ತದೆ. ಹಣಕಾಸಿನ ಅಂದಾಜು ನೋಡುವ 'ಎಸ್ಟಿಮೇಟ್ಸ್ ಕಮೀಟ', ಹಣಕಾಸಿನ ವಿನಿಯೋಗವನ್ನು ಪರೀಕ್ಷಿಸಲು 'ಪಬ್ಲಿಕ್ ಅಕೌಂಟ್ಸ್ ಕಮೀಟ'ಗಳೂ ಕೆಲಸ ಮಾಡುತ್ತಿವೆ. ಪಾರ್ಲಿಮೆಂಟನ ಕಾರ್ಯವಿವರಗಳನ್ನು ನಿರ್ಧರಿಸಲು ಕಾರ್ಯನಿರ್ಧಾರ ಸಮಿತಿಗಳಿವೆ. ಸಾಮಾನ್ಯ ಮಸೂದೆಗಳನ್ನು ಯಾವ ಸಭೆಯಲ್ಲಾದರೂ ತರಬಹುದು. ಎರಡೂ ಸಭೆಗಳ ಸಂಯುಕ್ತ ವಿಶೇಷ ಸಮಿತಿಗಳಿಗೆ ಅವಕಾಶ ಮಾಡಲಾಗಿದೆ. ಶಾಸನಗಳ ಪ್ರಕಾರ ಸರಕಾರವು ರಚಿಸುವ ನಿಯಮನಿಬಂಧನೆಗಳು ಸರಿ ಇವೆಯೋ ಇಲ್ಲವೆ ಎಂದು ನೋಡಲು 'ಸಬ್ಸಿಡಿಯರಿ ಲೆಜಿಸ್ಲೇಷನ್ ಸಮಿತಿ' ಪಾರ್ಲಿಮೆಂಟ ಸಭೆಗಳ ಮತ್ತು ಸದಸ್ಯರ ಹಕ್ಕುಬಾಧ್ಯತೆ ರಕ್ಷಣೆಗಾಗಿ ಹಕ್ಕುಬಾಧ್ಯತೆ ಸಮಿತಿಗಳೂ ಸದಸ್ಯರ ಅನುಕೂಲತೆಗಳನ್ನು ವಿಚಾರಿಸಲು 'ಹೌಸ್ ಕಮಿಟ''ಗಳೂ ಇವೆ.

ಈ ಐದು ವರ್ಷಗಳಲ್ಲಿ ಪಾರ್ಲಮೆಂಟ್ ಶ್ರೇಷ್ಠ ಸಂಪ್ರದಾಯ ಹಾಕಿಕೊಟ್ಟಿದೆ. ತನ್ನ ಗೌರವ ಮತ್ತು ಘನತೆ ಕಾಪಾಡಲು ಉಚಿತ ಕಾರ್ಯಕ್ರಮಗಳನ್ನೂ ತೆಗೆದುಕೊಂಡಿದೆ. ಒಬ್ಬ ಹಣಕಾಸಿನ ಸಚಿವರು ರಾಜೀನಾಮೆ ಕೊಡಬೇಕಾಯಿತು; ಇನ್ನೊಬ್ಬ ಸದಸ್ಯರು ತಮ್ಮ ಸದಸ್ಯತ್ವ ಕಳೆದುಕೊಳ್ಳಬೇಕಾಯಿತು; ಮತ್ತೊಬ್ಬರನ್ನು ಸಭೆಯಿಂದ ಹೊರಗೆ ಕಳುಹಿಸಬೇಕಾಯಿತು. ರಾಜ್ಯ ಸಭೆಯಲ್ಲಿ ಆ ಬಗೆಯ ಪ್ರಸಂಗಗಳಾವುವೂ ಉದ್ಭವಿಸಿಲ್ಲ.

ಪಾರ್ಲಿಮೆಂಟನಲ್ಲಿ ಕಟುವಾದ ಟೀಕೆಗಳಿಗೂ ಲಘುಹಾಸ್ಯಗಳಿಗೂ ಕೊರತೆ ಇಲ್ಲ. ಸಂಸ್ಥಾನಗಳ ಸಂಯುಕ್ತ ರಾಜ್ಯಗಳ ಉದ್ಘಾಟನ ಸಮಯದಲ್ಲಿ ಸರ್ದಾರ್ ಪಟೇಲರು ನಡೆಸುತ್ತಿದ್ದ ರಾಜಸಭೆಗಳನ್ನು ಒಮ್ಮೆ ಅಜಿತ ಪ್ರಸಾದ ಜೈನರು "Mock durbars" ಎಂದು ಟೀಕಿಸಿದರು. ಒಡನೆ ಸರದಾರರು "You want mock durbars of members of Parliament, is it—?" ಎಂದು ಮೂದಲಿಸಿದರು. ಇನ್ನೊಮ್ಮೆ ದೆಹಲಿಯ ಪೋಲೀಸ್ ಶಾಸನ ಚರ್ಚೆಯಾಗುತ್ತಿರುವಾಗ ಪೋಲೀಸರಿಗೆ ಮನೆಯ ಸಾಲುಗಳನ್ನು ಕಟ್ಟಿಸಿ ಕೊಡಬೇಕೆಂದು ಒಬ್ಬ ಸದಸ್ಯರು ಹೇಳಿದುದಕ್ಕೆ ಸರ್ದಾರರು "We have no baracks even for members of Parliament" ಎಂದರು. ಪಾರ್ಲಿಮೆಂಟನಲ್ಲಿ ಒರಗಿ ನಿದ್ರೆ ಹೊಡೆಯುವ ಸದಸ್ಯರೂ ಕೆಲವರಿದ್ದರೆ

ವಯೋವೃದ್ಧರೂ ಜ್ಞಾನವೃದ್ಧರೂ ಆದ ಪಂಡಿತ ಹೃದಯನಾಥ ಕುಂಜ್ರು ಸದಾ ಎಚ್ಚರದಿಂದ ಇರುತ್ತಾರೆ. ಚರ್ಚೆಯಲ್ಲಿ ಭಾಗ ವಹಿಸಿದವರು ಸರಕಾರದ ಪರ ಉತ್ತರ ಹೇಳುವಾಗ ಸಭೆಯಲ್ಲಿರಬೇಕಾದ್ದು ಸಭಾಮರ್‍ಯಾದೆ. ಅನೇಕರು ಸುಮ್ಮನೆ ಹೊರಟುಬಿಡುತ್ತಾರೆ. ಒಮ್ಮೆ ದೆಹಲಿಯ ವಿಶ್ವವಿದ್ಯಾನಿಲಯಕ್ಕೆ ಹೋಗಬೇಕಾದ್ದು ಅನಿವಾರ್ಯವಾದಾಗ ಕುಂಜ್ರು ಅವರು ಬಂದು ಅಪ್ಪಣೆ ಪಡೆದು ಹೊರಗೆ ಹೋದರು. ಸಕ್ಕರೆ ವಿಷಯು ಒಮ್ಮೆ ಚರ್ಚೆ ನಡೆಯುವಾಗ ಆಚಾರ್ಯ ಕೃಪಲಾನಿಯರಿಗೆ ಅಜಿತ ಪ್ರಸಾದ ಜೈನರು "ಹಾಗಾದರೆ ನೀವು"black marketting"ನಲ್ಲಿ ನಿಪುಣರಾಗಿದ್ದೀರಿ" ಎಂದರು. "ಹೌದು ನಿಮ್ಮಂತೆ ಕಳ್ಳಪೇಟೆ ಸಕ್ಕರೆ ತೆಗೆದುಕೊಂಡಿದ್ದರೆ" ಎಂದು ಕೃಪಲಾನಿಯವರು ಉತ್ತರಿಸಿದರು. ಅದೇ ಚರ್ಚೆಯಲ್ಲಿ "ಸಕ್ಕರೆಯ ಅಭಾವದಿಂದ ಬಹುಮೂತ್ರ ಜಾಡ್ಯದವರಿಗೆ ಬಹಳ ಅನುಕೂಲವಾಗಿದೆ" ಎಂದು ನಜಿರುದ್ದೀನ್ ಅಹಮದ್ ಎಂದರು. ಪಾರ್ಲಿಮೆಂಟ ಸದಸ್ಯರಲ್ಲಿ ಅಸಾಮದ ರೋಹಿಣಿ ಕುಮಾರ ಚೌಧುರಿ ಒಳ್ಳೆಯ ಹಾಸ್ಯದ ವ್ಯಕ್ತಿ. ಕಲೆ ಕೂದಲನ್ನು ಚಾಚಿದವರೇ ಅಲ್ಲ. ಒಮ್ಮೆ ಪಾರ್ಲಿಮೆಂಟ ಸದಸ್ಯರ ಫೋಟೋ ತೆಗೆಯುವಾಗ ಯಾರೋ ಒಬ್ಬರು ಅವರಿಗೆ ಒಂದು ಹಣಿಗೆಯನ್ನು ಬಹುಮಾನ ಕೊಟ್ಟರು. "ಹಣಿಗೆ ಕೊಟ್ಟರೇನಂತೆ, ಯಾರಾದರೂ ಘನವ್ಯಕ್ತಿ ಬಂದು ಬಾಚಿದಲ್ಲದೆ ಅದರ ಉಪಯೋಗವೇನು?" ಎಂದರವರು. ಈಗಲೂ ಅವರು ಲೋಕಸಭೆಯಲ್ಲಿದಾರೆ.

ಜವಾಹರಲಾಲರೊಂದಿಗೆ ಸ್ವಾತಂತ್ರ್ಯದ ಆರಂಭದ ದಿನಗಳ ಬೃಹತ್ಸಮಸ್ಯೆಗಳನ್ನು ಎದುರಿಸಿ ಛಿದ್ರ-ಛಿದ್ರವಾದ ಭಾರತವನ್ನು ಒಂದುಗೂಡಿಸಿ ಭದ್ರ ರಾಷ್ಟ್ರ ನಿರ್ಮಿಸಿದ ಮಹಾ ಶಿಲ್ಪಿ ಸರದಾರ ಪಾರ್ಲಿಮೆಂಟನಲ್ಲಿ ಈಗ ಇಲ್ಲ. ಸದಸ್ಯರ ಬೆಲೆಕಟ್ಟುವ ಅವರ ದಾರಿಯೇ ಬೇರೆ. ಅನೇಕರು ಅವರು ಪಾರ್ಲಿಮೆಂಟಗೆ ಬರುವುದೇ ವಿರಳವೆಂದು ತಿಳಿದಿದ್ದರು. ನಿಜ, ಆದರೆ ನಿತ್ಯ ಯಾವಾಗಲೂ ಅರ್ಧ ಗಂಟೆ ಬಂದು ಯಾರು ಚಹಕುಡಿಯುತ್ತ ಹರಟುತ್ತಿದ್ದಾರೆ; ಯಾರು ಪಾರ್ಲಿಮೆಂಟ ಕೆಲಸದಲ್ಲಿ ಆಸಕ್ತಿ ವಹಿಸುತ್ತಾರೆ; ಯಾರು ತೂಕಡಿಸುತ್ತಿದ್ದಾರೆ ಎಂದು ನೋಡಿಕೊಂಡು ಹೋಗುತ್ತಿದ್ದರು. ಅವರು ಈಗ ಕಣ್ಮರೆಯಾಗಿದ್ದರೂ 'ಭಾರತ ಬಲಗೊಳ್ಳಬೇಕು, ಭದ್ರವಿರಬೇಕು, ಭಾರತ ಬದುಕಿದರೆ ನಮ್ಮ ಬಾಳು' ಎಂಬ ಅವರ ಹಿರಿಯಾಸೆಯನ್ನು ಯಾರೂ ಮರೆಯುವಂತಿಲ್ಲ. ಒಮ್ಮೆ "Before I die, I want to see in India only 10 or 12 strong well-knit states" ಎಂದರು. ಸಾಯುವ ಮೊದಲು ಆ ಆಸೆ ಸಾಧಿಸಿದರು. ರಾಷ್ಟ್ರೀಕರಣ ಪ್ರಶ್ನೆ ಬಂದಾಗ ಇನ್ನೊಮ್ಮೆ "I have come to construct and not to destroy" ಎಂದರು. ಆ ಮಾತುಗಳು ಇನ್ನೂ ನಮ್ಮ ಕಿವಿಗಳಲ್ಲಿ ನಾರ್ದನಿಗೂಡುತ್ತಿವೆ.

ಕೈಲಾಸನಾಥ ಕಟ್ಜು ಈಗ ಅವರ ಸ್ಥಾನದಲ್ಲಿದ್ದಾರೆ. ಸರದಾರರಷ್ಟೇ ಪ್ರತಿಭಾವಂತ ವ್ಯಕ್ತಿ, ಉತ್ತಮ ಸಂಸ್ಕೃತ ಪಂಡಿತರು; ವಾಗ್ಮಿ, ನ್ಯಾಯವಾದಿ, ಕಠಿಣರಿಗೆ ಕಠಿಣ, ಮೃದು ಸ್ವಭಾವದವರಿಗೆ ಮೃದು. ಇವರೊಂದಿಗೆ ಹಣಕಾಸಿನ ಸಚಿವ ದೇಶಮುಖ, ನಿರಾಡಂಬರ ಕೆಲಸದ ಲಾಲ್‌ಬಹದೂರ್ ಶಾಸ್ತ್ರಿ, ಪ್ರಸಿದ್ಧ ನ್ಯಾಯವಾದಿ ವಿಶ್ವಾಸ, ಮುಂತಾದವರಿದ್ದಾರೆ. ಕನ್ನಡಿಗರಿಗೆ ಮಂತ್ರಿಮಂಡಲದಲ್ಲಿ ನಾಲ್ಕು ಸ್ಥಾನಗಳು ದೊರೆತಿವೆ. ರಾಜ್ಯಸಭೆಯ ಉಪಾಧ್ಯಕ್ಷ ಸ್ಥಾನವೂ ಕನ್ನಡಿಗನೊಬ್ಬನಿದೆ. ಕನ್ನಡಿಗರೊಬ್ಬರು ಕಾಂಗ್ರೆಸ್ ಪಾರ್ಟಿಯ ಉಪ ಮುಖ್ಯ ಚಾಲಕರಲ್ಲಿ ಒಬ್ಬರು. ಪಾರ್ಲಿಮೆಂಟ ಚಟುವಟಿಕೆಗಳಲ್ಲಿ ಈ ರೀತಿ ಕನ್ನಡಿಗರೂ ಪ್ರಮುಖ ಪಾತ್ರ ವಹಿಸುತ್ತಾರೆ.

ಭಾರತದ ಅಂಗಗಳಾಗಿ ಎಲ್ಲ ೨೮ ರಾಜ್ಯಗಳಲ್ಲೂ ಸಂವಿಧಾನ ವಿಧಿನಿಯಮಗಳಂತೆ ಶಾಸನ ಸಭೆಗಳು ಏರ್ಪಟ್ಟಿವೆ. ಶಾಸನ ಸಭೆಗಳಿಗೆ ಜವಾಬ್ದಾರಿಯಾದ ಮಂತ್ರಿಮಂಡಲಗಳು ಕೆಲಸ ಮಾಡುತ್ತಿವೆ. ವಯಸ್ಕರ ಮತದಾನ ಪದ್ಧತಿಯಂತೆ ಮಹಾ ಚುನಾವಣೆಗಳು ಆದರ್ಶ ರೀತಿಯಲ್ಲಿ ನಡೆದು ಪ್ರಪಂಚದ ಮೆಚ್ಚಿಗೆ ಪಡೆದಿವೆ. ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ ಕಚ್ಛದಿಂದ ಕಾಮರೂಪದ ವರೆಗೆ ಒಂದು ರಾಷ್ಟ್ರಧ್ವಜದ ಅಡಿಯಲ್ಲಿ ಭಾರತ ಸಂವಿಧಾನವು ಆಚರಣೆಯಲ್ಲಿದೆ. 'ಪಾರ್ಲಿಮೆಂಟರಿ ಪ್ರಜಾಪ್ರಭುತ್ವವು ಭಾರತಕ್ಕೆ ಸಲ್ಲದು' ಎಂಬ ಮಾತನ್ನು ಭಾರತದ ಜನತೆಯು ಸುಳ್ಳು ಮಾಡಿದೆ. ಪ್ರಪಂಚದ ಎಲ್ಲ ಪ್ರಜಾಸತ್ತಾತ್ಮಕ ರಾಷ್ಟ್ರಗಳೂ "ಏಷ್ಯದಲ್ಲಿ ಭಾರತವೇ ಪ್ರಜಾಪ್ರಭುತ್ವದ ಕೋಟೆ" ಎಂದು ಭಾರತದ ಕಡೆ ನೋಡುತ್ತಿವೆ.

ಸಾಧಿಸಿದ ಕಾರ್ಯ ಮಹತ್ವಪೂರ್ಣವಿದ್ದರೂ ಸಾಧಿಸಬೇಕಾದ ಕಾರ್ಯ ಹಿಮಾಚಲದಷ್ಟಿದೆ. ದೇಶದಲ್ಲಿ ಆರ್ಥಿಕ ಸಮಸ್ಯೆ ಬಗೆಹರಿದಿಲ್ಲ. ಅದರ ನಿವಾರಣೆ ಸಹ ಪ್ರಜಾಸತ್ತಾತ್ಮಕ ರೀತಿಯಿಂದ ನಡೆಯಲೆಂದು ಪಂಚವಾರ್ಷಿಕ ಯೋಜನೆಯನ್ನು ರೂಪಿಸಿ ಕಾರ್ಯಗತ ಮಾಡುವ ಯತ್ನ ನಡೆದಿದೆ. ಅದರ ಯಶಸ್ಸು ಭಾರತ ಜನತೆಯ ಕಾರ್ಯಶಕ್ತಿ, ಸಹಕಾರ, ದೃಢಸಂಕಲ್ಪವನ್ನು ಅವಲಂಬಿಸಿದೆ.

ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ ।
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ
ದುರ್ಗಂ ಪಥಸ್ತತ್ಕವಯೋ ವದಂತಿ ॥

# ಮುನ್ನೋಟದ ಮುಂದಾಳ್ತನ

"ಮಹಾಜನೋ ಯೇನ ಗತಃ ಸ ಪಂಥಾಃ" ಎಂದಂತೆ ಹಿರಿಯರ ದಾರಿ ಹಿಡಿದೇ ಜನಸಾಮಾನ್ಯರು ಸಾಗುತ್ತಾರೆ. ಮುಂದಾಳ್ತನ ವಹಿಸಿದ ಹಿರಿಯರಲ್ಲಿ ದೂರದೃಷ್ಟಿ, ಗುಣಜ್ಞತೆಗಳಿದ್ದಲ್ಲಿ ಜನತೆಯಲ್ಲಿಯೂ ಆ ಗುಣಗಳು ಬೆಳೆದು ರಾಜಕಾರಣದಲ್ಲಿ ಸಹಿಷ್ಣುತೆಯೂ ಸ್ತ್ರಿಮಿತತೆಯೂ ಉಂಟಾಗುವುದು. ಹಿಂದಿನ ಪೀಳಿಗೆಯ ನಾಯಕರಲ್ಲಿ ಈ ಸ್ಪೃಹಣೀಯ ಗುಣವಿದ್ದುದನ್ನು ಮತ್ತು ಇಂದಿನ-ವರಲ್ಲಿ ಅದು ವಿರಳವಾಗಿರುವುದನ್ನು ಕೆಲ ಉದಾಹರಣೆಗಳೊಡನೆ ಲೇಖಕರು ವಿವರಿಸಿದ್ದಾರೆ.

ಲೇಖಕರು: ಶ್ರೀ. ನಾಯಕ ವೆಂಕಟರಾಯರು

---

ನಾಡಿನ ಅದೃಷ್ಟವನ್ನು ರೂಪಿಸುವ ಹೊಣೆಯನ್ನು ಹೊತ್ತ ಮುಂದಾಳುಗಳಲ್ಲಿ ಮುನ್ನೋಟದ ಅವಶ್ಯಕತೆಯು ವಿಶೇಷವಾಗಿರುತ್ತದೆಂಬುದು ವಿವೇಕಿಗಳೂ ವಿಚಾರವಂತರೂ ಬಲ್ಲ ಸಂಗತಿ. ಇಂತಹ ಮುನ್ನೋಟವು ಸಾಮಾನ್ಯವಾಗಿ ಒಮ್ಮೆಲೆ ಲಭಿಸತಕ್ಕ ವಿಷಯವಲ್ಲ. ಅದಕ್ಕೆ ಅಭ್ಯಾಸ, ನಿರೀಕ್ಷೆ, ವಿವೇಚನೆ, ಅನುಭವ ಮೊದಲಾದ ಸಂಸ್ಕಾರಗಳು ಅಗತ್ಯವಾಗಿವೆ. ಸುತ್ತುಮುತ್ತಲಿನ ಸನ್ನಿವೇಶಗಳನ್ನು ಆಳವಾಗಿ ಅಭ್ಯಾಸ ಮಾಡಿ ಅದರ ಒಳಮಡಿಕೆಗಳನ್ನೆಲ್ಲ ಬಿಚ್ಚಿನೋಡುವ ಹದವು ಚನ್ನಾಗಿ ಸಾಧಿಸಿದ ನಂತರ ಅವುಗಳ ಭವಿಷ್ಯತ್ ಸ್ವರೂಪವನ್ನು ತೋರಿಸುವ ಎದೆಗಾರಿಕೆಯು ಮುಂದಾಳಿನಲ್ಲಿ ಉಂಟಾಗುತ್ತದೆ. ಇದಕ್ಕಾಗಿ ಆತನ ಅಂತಃಕರಣವು ಕ್ಷುದ್ರವಾದ ಸಂಕುಚಿತ ಭಾವನೆಗಳಿಂದ ಅಲಿಪ್ತವಾಗಿರುವದವಶ್ಯವಾಗಿರುತ್ತದೆ. ಕನ್ನಡಿಯು ಸ್ವಚ್ಛವಾಗಿದ್ದರೆ ಪ್ರತಿಬಿಂಬವು ಚೆನ್ನಾಗಿ ಕಾಣುವಂತೆ ಮಾನವನ ಅಂತರಂಗವು ನಿರ್ಮಲವಾಗಿದ್ದರೆ ಆತನ ಮುನ್ನೋಟವೂ ಹಸನಾಗಿರುತ್ತದೆ. ದ್ವೇಷ, ಅಸೂಯೆ, ಸ್ವಾರ್ಥಲಾಭ, ಮೊದಲಾದ ಕೀಳುಭಾವನೆಗಳಿಗೆ ಅಸ್ಪದವನ್ನೀಯುದಿದ್ದರೆ ಜನಧುರೀಣತ್ವಕ್ಕೆ ಕಳೆ ಏರುತ್ತದೆಂಬುದು ಇತಿಹಾಸದಿಂದ ಗೊತ್ತಾಗುವಂತಿದೆ. ಯಾವ ರಾಷ್ಟ್ರದ ಮುಂದಾಳುಗಳಲ್ಲಿ ಪರಸ್ಪರ ಪ್ರೀತ್ಯಾದರಗಳು ಹಾಗು ಅವರ ಕಾರ್ಯದ ಬಗೆಗೆ ಅನ್ಯೋನ್ಯ ಸಮಂಜಸ ಗೌರವ ಇವುಗಳು ಇರುವವೋ ಆ ರಾಷ್ಟ್ರಗಳ ಚರಿತ್ರೆಯು ಉಜ್ವಲವಾಗುತ್ತದೆ. ಅಂತಹ ಸನ್ನಿವೇಶದಿಂದ ಉದ್ಭವಿಸುವ ಶಕ್ತಿಯು ಅದ್ಭುತವೂ ಅಚ್ಛೇದ್ಯವೂ ಅಗಿರುತ್ತದೆ. ತದ್ವಿರುದ್ಧವಾಗಿ ಮುಂದಾಳುತನವನ್ನು ಒಬ್ಬರ ಕೈಯಿಂಪ ಸೆಳೆದುಕೊಳ್ಳಬೇಕೆಂಬ ಲೋಭಕ್ಕೆ ತುತ್ತಾಗಿ ಸಂಕುಚಿತ ಮನೋವೃತ್ತಿಯಿಂದ ಪರಸ್ಪರ ನಿಂದೆ ತಿರಸ್ಕಾರ ಮುಂತಾದ ಅಪಾಯಕರ ಪ್ರವೃತ್ತಿಗಳಿಗೆ ಎಡೆಗೊಟ್ಟರೆ ಮುಂದಾಳುಗಳ ವ್ಯಕ್ತಿತ್ವವಿಕಾಸಕ್ಕೆ ಕೊಡಲಿ ಏಟನ್ನು ಹಾಕಿದಂತಾಗುತ್ತದಲ್ಲದೆ ಅದರ ಪರ್ಯವಸಾನವು ನಾಡಿನ ಅಧೋಗತಿಯಲ್ಲಾಗುವದೇ ನಿಶ್ಚಿತ.

ಮಾನವನ ವ್ಯಕ್ತಿತ್ವವು ಯಾವುದೊಂದು ನಿರ್ಜನವಾದ ಅರಣ್ಯದಲ್ಲಿ ವಿಕಾಸಹೊಂದಲಾರದೆಂಬುದನ್ನು ಈ ಸಂದರ್ಭದಲ್ಲಿ ನೆನಪಿನಲ್ಲಿಟ್ಟುಕೊಳ್ಳುವದೊಳಿತು. ಅಂತಹ ಬೆಳೆವಣಿಗೆಗೆ ಅನುಕೂಲವಾದ ಪರಿಸ್ಥಿತಿಯನ್ನು ಒದಗಿಸುವದು ಸಮಾಜದ ಮಹತ್ವದ ಕಾರ್ಯ. ಅದರಲ್ಲಿಯೂ ಸಮಾಜದ ಧುರೀಣತೆಯನ್ನು ಯಾವ ಕಾರಣದಿಂದಲೇ ಆಗಲಿ ವಹಿಸಿಕೊಂಡ ಹಿರಿಯರು ಅಂತಹ ಪರಿಸ್ಥಿತಿಯನ್ನು ನಿರ್ಮಿಸಲು ಬುದ್ಧಿಪೂರ್ವಕವಾಗಿ ಪ್ರಯತ್ನಿಸಬೇಕಾಗುವದೆಂದರೆ ತಪ್ಪಾಗದು. ಈ ಉದ್ದೇಶದಿಂದ ತಮ್ಮ ಅನುಯಾಯಿಗಳ ಹಾಗೂ ಬೆಂಬಲಿಗರ ಮನೋಧರ್ಮದ ರೀತಿ ನೀತಿಯ ಮೇಲೆ ಚೆನ್ನಾಗಿ ಕಣ್ಣನ್ನಿಡಬೇಕಾಗುವದು. ಬರೀ ಬೆಂಬಲಿಗರ ಇಂದಿನ ಬೆಂಬಲದಿಂದ ದೊರೆಯುವ ಸೌಕರ್ಯಗಳಿಗೆ ಮನಸೋತು ಅವರ ಆಚಾರ ವಿಚಾರಗಳೆಂತಿದ್ದರೂ ಅವುಗಳನ್ನು ಅನುಮೋದಿಸುತ್ತ ನಡೆಯುವದು ಮುಂದಾಳಿನ ನಿಜವಾದ ಲಕ್ಷಣವಲ್ಲ. ಹಾಗೆಯೇ ರಾಮಾಯ ಸ್ವಸ್ತಿ, ರಾವಣಾಯ ಸ್ವಸ್ತಿ ಎನ್ನುವ ತಟಸ್ಥ ಭಾವನೆಯೂ ಮುಂದಾಳಿಗೆ ಶೋಭಿಸದು. ಆದುದರಿಂದ ನಿಜವಾದ ಸಮರ್ಥ ಮುಂದಾಳ್ತನಕ್ಕೆ ಕೆಲಮಟ್ಟಿನ ನಿಷ್ಠುರತೆ ನಿರ್ದಾಕ್ಷಿಣ್ಯಗಳೂ ಅಗತ್ಯವಾಗಿವೆ. ಪ್ರಸಂಗ ಬಂದರೆ ತನಗೆ ಅತ್ಯಂತ ಸಮೀಪಸ್ಥರೂ ಸದಾ ಬೆಂಬಲಿಗರೂ ಆಗಿದ್ದ ಅನುಯಾಯಿಗಳನ್ನು ಪರಿತ್ಯಜಿಸಿ ಮುನ್ನಡೆಯಬೇಕಾಗುವದು. ಈ ಬಗೆಯ ಪರಿತ್ಯಾಗದ ನಿಷ್ಠುರತೆಯನ್ನು ಬೇರೆ ಬೇರೆ ದೇಶಗಳ ರಾಜಕೀಯ ಧುರೀಣರ ಚರಿತ್ರೆಗಳಿಂದ ಕಂಡುಕೊಳ್ಳಬಹುದು. ಆದರೆ ಹೀಗೆನ್ನುವದರಿಂದ ಪರಿತ್ಯಾಗನಿಷ್ಠುರತೆಯೆ ಯೋಗ್ಯ ಧುರೀಣತ್ವದ ಸಂಕೇತವೆಂದು ಯಾರೂ ಭಾವಿಸಕೂಡದು. ಯಾಕೆಂದರೆ ಪಕ್ಷಪರಿತ್ಯಾಗಕ್ಕೆ ನಿಷ್ಠುರತೆಯೊಂದೇ ಕಾರಣವೆಂದು ಎಲ್ಲ ಸಂದರ್ಭಗಳಲ್ಲಿಯೂ ಹೇಳಲಾಗದು. ಕೆಲ ಪ್ರಸಂಗಗಳಲ್ಲಿ ಧುರೀಣರು ಅಭಿಪ್ರಾಯ ಮತ್ತು ಆಚಾರ ಇವುಗಳ ನಿಷ್ಠುರತೆಯ ಮುಸುಕಿನಲ್ಲಿ ತಮ್ಮ ವೈಯಕ್ತಿಕ ಸ್ವಾರ್ಥವನ್ನು ಸಾಧಿಸಿದ ದೃಷ್ಟಾಂತಗಳೂ ಇವೆ. ಆದುದರಿಂದ ಮುಂದಾಳುಗಳ ರೀತಿನೀತಿಗಳನ್ನು ಸರಿಯಾಗಿ ತಿಳಿದುಕೊಳ್ಳುವ ಬುದ್ಧಿಸಾಮರ್ಥ್ಯವೂ ಸಮಂ-ಜಸವಾದ ವಿವೇಕವೂ ಅನುಯಾಯಿಗಳಲ್ಲಿ ಉಂಟಾಗುವಂತೆ ಯೋಗ್ಯ ಮನಃಸಂಸ್ಕಾರವು ಜನತೆಗೆ ಆಗುವದು ಅವಶ್ಯ. ಹಾಗೆಯೇ ನಿಜವಾದ ಧುರೀಣನಾಗಬೇಕೆನ್ನುವವನು ಜನತೆಯಲ್ಲಿ ಇಂತಹ ಶಕ್ತಿನಿರ್ಮಾಣವಾಗುವುದಕ್ಕೆ ಅವಶ್ಯವಾದ ಉಪಾಯಗಳನ್ನು ಕೈಕೊಳ್ಳಬೇಕು.

ಭಾರತದ ಸುದೈವದಿಂದ ಹಿಂದಿನ ಶತಮಾನದಲ್ಲಿ ಸ್ವಾತಂತ್ರ್ಯಸಂಗ್ರಾಮದ ಧುರಂಧರತೆಯನ್ನು ವಹಿಸಿದ್ದ ಹಿರಿಯ ಮುಂದಾಳುಗಳಲ್ಲಿ ಅಂತಹ ಮುನ್ನೋಟವೂ ಪರಸ್ಪರ ಗೌರವಾದರಗಳೂ ತುಂಬ ಕಂಡುಬರುತ್ತಿದ್ದವು. ಅಲ್ಲದೆ ಅಂತಃಕರಣದ ಪರಿಶುದ್ಧತೆಯಲ್ಲಿ ಅಚಲವಾದ ಶ್ರದ್ಧೆಯು ಅವರಲ್ಲಿದ್ದಿತು. ಆದುದರಿಂದಲೇ ಅವರು ಕಾಲಕಾಲಕ್ಕೆ ಬೇಕಾದ ಹೊಸ ಮುಂದಾಳುಗಳ ಬಗೆಗೆ ತಮ್ಮ ಅನುಯಾಯಿಗಳ ಅಂತಃಕರಣದಲ್ಲಿ ಪ್ರೀತ್ಯಾದರಗಳ ಬೀಜಗಳನ್ನು ಬಿತ್ತಲು ಎಲ್ಲ ಸಂಧಿಗಳನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಮೊನ್ನೆಮೊನ್ನೆ ಮಿತ್ರರೊಬ್ಬರ ಕೂಡ ಮಾತಾಡುತ್ತಿದ್ದಾಗ ಲೋಕಮಾನ್ಯ ಟಿಳಕರ ಹಾಗು ಮಹಾತ್ಮಾ ಗಾಂಧಿಯವರ ಪರಸ್ಪರ ಗೌರವಾದರಗಳು ಹೇಗಿದ್ದವೆಂಬ ಬಗೆಗೆ ಕೆಲ ಸಂಗತಿಗಳು ಗೊತ್ತಾದವು. ಅವುಗಳನ್ನು ಸರಿಯಾಗಿ ಅರಿತುಕೊಂಡರೆ ಮಹನೀಯರಿಬ್ಬರ ಮಹಾ ವ್ಯಕ್ತಿತ್ವದ ಬಗೆಗೆ ಯೋಗ್ಯವಾದ ಕಲ್ಪನೆಯಾಗಬಹುದು. ಆದುದರಿಂದ ಅಂತಹ ಒಂದೆರಡು ಉದಾಹರಣೆಗಳನ್ನು ಇಲ್ಲಿ ಕೊಡುತ್ತಿದ್ದೇನೆ.

ಲೋಕಮಾನ್ಯ ಟಿಳಕರು ಭಾರತದ ರಾಜಕೀಯ ಧುರೀಣರಲ್ಲಿ ಅಗ್ರಗಣ್ಯರಾಗಿದ್ದುದಲ್ಲದೆ ಏಕಮೇವ ಅದ್ವಿತೀಯ ಮುಂದಾಳೆಂದಿದ್ದ ಕಾಲದಲ್ಲಿ ಸ್ವಾಭಾವಿಕವಾಗಿ ಅವರ ಪ್ರತ್ಯಕ್ಷ ದರ್ಶನ, ಸಮಾಗಮ, ಸಂಭಾಷಣೆ ಇವುಗಳ ಸುಸಂಧಿಯನ್ನು ಪಡೆಯಬೇಕೆಂಬ ಆಕಾಂಕ್ಷೆ ಆಗಿನ ವಿದ್ಯಾವಂತ ಯುವಕರಲ್ಲಿ ಹೆಚ್ಚಾಗಿದ್ದಿತು. ಪುಣೆಯ ಫರ್ಗ್ಯುಸನ್ ಹಾಗು ಡೆಕ್ಕನ್

ಕಾಲೇಜುಗಳಲ್ಲಿಯು ತರುಣ ವಿದ್ಯಾರ್ಥಿಗಳಿಗೆ ಆ ಸುಯೋಗವು ಮೇಲಿಂದ ಮೇಲೆ ದೊರೆಯುತ್ತಿದ್ದಿತು. ಅವರಲ್ಲಿ ಕನ್ನಡಿಗರೂ ಇರುತ್ತಿದ್ದರು. ಅಂತಹ ಕನ್ನಡಿಗರಲ್ಲಿ ಒಬ್ಬರಾಗಿದ್ದ ದಿವಂಗತ ಶ್ರೀ ಕಬ್ಬೂರ ಮಧ್ವರಾಯರು ತೇಜಸ್ವಿಯಾದ ರಾಷ್ಟ್ರೀಯ ಮನೋವೃತ್ತಿಯುವರಾಗಿದ್ದುದರಿಂದ ತಮ್ಮ ಮಿತ್ರರೊಂದಿಗೆ ಲೋಕಮಾನ್ಯರನ್ನು ಕಾಣಲು ಗಾಯಕವಾಡ ವಾಡೆಯಲ್ಲಿರುವ ಕೇಸರಿ ಕಾರ್ಯಾಲಯಕ್ಕೆ ಹೋಗುತ್ತಿದ್ದರಂತೆ! ಮಹಾತ್ಮಾ ಗಾಂಧಿಯುವರು ದಕ್ಷಿಣ ಆಫ್ರಿಕೆಯಲ್ಲಿ ಸತ್ಯಾಗ್ರಹಾಸ್ತ್ರ ಪ್ರಯೋಗವನ್ನು ಮಾಡಿ ಜಗತ್ತಿನ ಲಕ್ಷ್ಯವನ್ನು ತಮ್ಮ ಕಡೆಗೆ ಸೆಳೆದುಕೊಂಡಿದ್ದ ಆ ಕಾಲದಲ್ಲಿ ಕುತೂಹಲದಿಂದ ಅನೇಕ ವಿದ್ಯಾರ್ಥಿಗಳು ಮಹಾತ್ಮರ ಬಗೆಗೆ ಲೋಕಮಾನ್ಯರ ಭಾವನೆಯೇನಿರುವದೆಂಬದನ್ನು ಅರಿತುಕೊಳ್ಳಲು ಉತ್ಸುಕರಾಗಿದ್ದರಂತೆ. ಆ ಪ್ರಕಾರ ಒಮ್ಮೆ ಶ್ರೀ ಕಬ್ಬೂರರೂ ಅವರ ಸಂಗಡಿಗರೂ ಲೋಕಮಾನ್ಯರ ದರ್ಶನಕ್ಕೆಂದು ಹೋಗಿದ್ದಾಗ ಲೋಕಮಾನ್ಯ ಟಿಳಕರು ಒಳಗಿನ ಕೋಣೆಗೆ ಅವರನ್ನು ಕರೆದೊಯ್ದರು. ಅಗ ಲೋಕಮಾನ್ಯ ಟಿಳಕರ ಮೇಜಿನ ಮೇಲೆ ಮಹಾತ್ಮಾ ಗಾಂಧಿಯುವರ ಭಾವಚಿತ್ರವು ಮಾತ್ರ ಇದ್ದುದನ್ನು ನೋಡಿದರಂತೆ ! ಇದನ್ನು ನೋಡಿ ಅವರು ಚಕಿತರಾದರೆಂಬ ಸಂಗತಿಯನ್ನು ನಾನು ಕೇಳಿದಾಗ ಇಂತಹ ಇನ್ನೊಂದು ಉದಾಹರಣೆಯೂ ನನ್ನ ನೆನಪಿಗೆ ಬಂದಿತು. ಮುಂಬಯಿಯ ನನ್ನ ಗೆಳೆಯರೊಬ್ಬರು ಡಾ. ಅಂಬೇಡಕರರ ಬಗೆಗೂ ಒಂದು ಸಂಗತಿಯನ್ನು ಕೆಲ ದಿವಸಗಳ ಹಿಂದೆ ನನಗೆ ಅರುಹಿದ್ದರು. ದುಂಡುಮೇಜಿನ ಪರಿಷತ್ತಿನ ಕಾಲಕ್ಕೆ ಡಾ. ಅಂಬೇಡಕರರು ಅಸ್ಪೃಶ್ಯರಿಗೆ (ಆಗ ಅವರಿನ್ನೂ 'ಹರಿಜನ'ರಾಗಿದ್ದಿಲ್ಲ) ಪ್ರತ್ಯೇಕ ಮತದಾರ ಸಂಘವಿರಬೇಕೆಂದು ಪ್ರತಿಪಾದಿಸುತ್ತಿದ್ದರು; ಇದರ ವಿರುದ್ಧವಾಗಿ ಮಹಾತ್ಮಾ ಗಾಂಧಿಯುವರು ಅವರಿಗೆ ಪ್ರತ್ಯೇಕ ಮತದಾರ ಸಂಘವಿರಕೂಡದೆಂದು ವಾದಿಸುತ್ತಿದ್ದರು. ಅಲ್ಲದೆ ಡಾ. ಅಂಬೇಡಕರರು ಗಾಂಧಿಯುವರ ಅಸಹಕಾರ ಸತ್ಯಾಗ್ರಹ ಮೊದಲಾದವುಗಳನ್ನು ಕಾಲಕಾಲಕ್ಕೆ ನಿಷ್ಠುರವಾದ ಶಬ್ದಗಳಲ್ಲಿ ಖಂಡಿಸುತ್ತಿದ್ದರು. ಹೀಗಿದ್ದರೂ ಅವರ ಅಭ್ಯಾಸದ ಕೋಣೆಯಲ್ಲಿ ಮೇಜಿನ ಮೇಲೆ ಯಾವಾಗಲೂ ಗಾಂಧಿಯುವರ ಭಾವಚಿತ್ರವೇ ಕಂಗೊಳಿಸುತ್ತಿರುವದೆಂಬ ಸಂಗತಿಯನ್ನು ಕೇಳಿದ್ದೇನೆ. ಪ್ರಾಮಾಣಿಕವಾದ ರಾಜಕೀಯ ಮತಭೇದಗಳಿದ್ದರೂ ಮಹಾತ್ಮರ ಅದ್ಭುತ ವ್ಯಕ್ತಿತ್ವದ ಬಗೆಗೆ ಇದ್ದ ಗೌರವದ ನಿದರ್ಶನವನ್ನಿಲ್ಲಿ ಅರಿಯಬಹುದು.

ಇಂತಹ ಅನುಭವಗಳಿಂದ ರಾಜಕೀಯ ಧುರೀಣರ ಪರಸ್ಪರ ಸಂಬಂಧ ಸೌಹಾರ್ದಗಳ ಬಗೆಗೆ ಅವರವರ ಅನುಯಾಯಿಗಳು ಮಾಡಿಕೊಳ್ಳಬಹುದಾದ ತಪ್ಪು ತಿಳಿವಳಿಕೆಗಳನ್ನು ನಿವಾರಿಸಬಹುದು. ಇದೇ ಬಗೆಯ ಇನ್ನೊಂದು ಉದಾಹರಣೆಯಿಂದ ಲೋಕಮಾನ್ಯ ಟಿಳಕರು ತಮ್ಮ ಅನುಯಾಯಿಗಳು ಮಹಾತ್ಮರನ್ನು ಸರಿಯಾಗಿ ತಿಳಿದುಕೊಳ್ಳುವಂತೆ ಮಾಡಿದರೆಂದು ನನಗೆ ಗೊತ್ತಾಗಿದೆ. ಅಮೃತಸರ ಕಾಂಗ್ರೆಸ್ಸಿನ ಅಧಿವೇಶನ ಸಮಯದಲ್ಲಿ ಮಹತ್ವದ ಒಂದು ಗೊತ್ತುವಳಿಯ ಬಗೆಗೆ ಲೋಕಮಾನ್ಯರ ಹಾಗು ಮಹಾತ್ಮರ ಅಭಿಪ್ರಾಯಗಳಲ್ಲಿ ಭೇದವುಂಟಾಗಿದ್ದಿತು. ಮಹಾತ್ಮರು ತಮ್ಮ ಭಿನ್ನಾಭಿಪ್ರಾಯವನ್ನು ಸೂಚಿಸಲು ಸಭಾತ್ಯಾಗ ಮಾಡಿ ಹೋದರಂತೆ! ಲೋಕಮಾನ್ಯರ ಕೆಲ ಶಿಷ್ಯರು ಈ ಘಟನೆಯನ್ನು ನೋಡಿ ಮಹಾತ್ಮರು ಹೋದರೆ ಹೋಗಲೆಂದು ಲೋಕಮಾನ್ಯರಿಗೆ ಸೂಚಿಸಿದರಂತೆ. ಲೋಕಮಾನ್ಯರು ತಮ್ಮ ಅನುಯಾಯಿಗಳ ಈ ಅಭಿಪ್ರಾಯಕ್ಕೆ ಅಸಮ್ಮತಿಯನ್ನು ಪ್ರದರ್ಶಿಸುತ್ತ "India can do without a hundred Tilaks but it cannot do without one Gandhi" ಅಂದರೆ "ಭಾರತವು ನೂರು ಟಿಳಕರಿಲ್ಲದೆ ನಡೆಯಬಹುದು; ಆದರೆ ಒಬ್ಬ ಗಾಂಧಿಯಿರದಿದ್ದರೆ ನಡೆಯದು" ಎಂದರಂತೆ! ಬೇರೊಬ್ಬ ಮುಂದಾಳಿನ ಬಗೆಗೆ ತೋರಿದ ಲೋಕಮಾನ್ಯರ ಈ ಔದಾರ್ಯ ಇಂದು ಎಷ್ಟು ಜನ ಧುರೀಣರಲ್ಲಿದೆ? ಹಾಗೆಯೆ ಧುರೀಣರ ಸರಿಯಾದ ಯೋಗ್ಯತೆಯನ್ನು ಕಂಡುಹಿಡಿವ ದೂರದೃಷ್ಟಿಯು ಈಗೆಲ್ಲಿದೆ?

ದಿವಂಗತ ಲಾಲಾ ಲಜಪತರಾಯರು ಒಂದು ಸಂದರ್ಭದಲ್ಲಿ ಮಹಾತ್ಮಾ ಗಾಂಧಿಯವರ ಬಗೆಗೆ ವ್ಯಕ್ತಪಡಿಸಿದ ಗೌರವಾದರದಿಂದಲೂ ಕಾರ್ಯಕರ್ತರ ವ್ಯಕ್ತಿತ್ವವನ್ನು ಅಳೆಯಬಲ್ಲ ಮುಂದಾಳಿನ ಮುನ್ನೋಟವನ್ನು ಚೆನ್ನಾಗಿ ಗುರುತಿಸಬಹುದು. ಆ ಸಂಗತಿಯು ಹೀಗಿದೆ. ಸ್ವಾತಂತ್ರ್ಯದ ಹೋರಾಟದಲ್ಲಿ ಲಾಲಾಜಿಯವರು ವಹಿಸಿದ್ದ ಉಗ್ರವಾದ ಧುರೀಣತೆಗೆ ಉಡುಗರೆಯೆಂದು ಆಗಿದ್ದ ಬ್ರಿಟಿಷ ಸರಕಾರವು ಅವರನ್ನು ಹಿಂದುಸ್ಥಾನದಿಂದ ಹೊರಗೆ ಅಟ್ಟಿದ್ದಿತು. ಅನೇಕ ವರ್ಷಗಳ ವರೆಗೆ ಅವರು ಪರದೇಶಗಳಲ್ಲಿಯೆ ಇದ್ದರು. ಮೌಂಟಫರ್ಡ ಸುಧಾರಣೆಗಳು ಬಳಕೆಯಲ್ಲಿ ಬರುವ ಸಮಯಕ್ಕೆ ಅವರ ಮೇಲಿನ ಆಜ್ಞೆಯನ್ನು ಹಿಂತೆಗೆದುಕೊಂಡು ಅವರಿಗೆ ಭಾರತದಲ್ಲಿ ಬರಲು ಅನುಮತಿಯೀಯಲಾಗಿದ್ದಿತು. ಆದರೆ ಅದೇ ಸಮಯಕ್ಕೆ ಮೌಂಟಫೋರ್ಡ ಸುಧಾರಣೆಗಳ ವಿರುದ್ಧ ತೀಕ್ಷ್ಣವಾದ ಆಂದೋಲನವೂ ಆರಂಭವಾಗಿದ್ದಿತು. ಮ. ಗಾಂಧಿಯವರು ಅಸಹಕಾರದ ಕಹಳೆಯನ್ನು ಊದಿದ್ದರು. ಆ ವೀರ ಪ್ರಸಂಗದಲ್ಲಿ ಲಾಲಾಜಿಯವರು ಮ. ಗಾಂಧಿಯವರ ವ್ಯಕ್ತಿತ್ವದ ಬಗೆಗೆ ಆಡಿದ ಮಾತುಗಳಲ್ಲಿ ಅಡಗಿದ್ದ ಆಹ್ವಾನವಿನ್ನೂ ಹಾಗೆಯೆ ಜಗತ್ತಿನ ಮುಂದಿದೆ. "I challenge the whole world to produce another Gandhi" ಅಂದರೆ "ಇನ್ನೊಬ್ಬ ಗಾಂಧಿಯನ್ನುಹಡೆಯಲು ಜಗತ್ತಿಗೇ ನನ್ನ ಆಹ್ವಾನವಿದೆ" ಎಂದು ಅವರು ನುಡಿದ ನುಡಿ ಇನ್ನೂ ಒಂದು ಆಹ್ವಾನವಾಗಿಯೆ ಉಳಿದಿದೆ. ಮಹಾತ್ಮರ ಉದಾತ್ತವೂ ಉನ್ನತವೂ ಆದ ಆ ಅದ್ಭುತ ವ್ಯಕ್ತಿತ್ವನನ್ನು ಕಂಡುಹಿಡಿದ ಲಾಲಾಜಿಯ ನೋಟವೆಷ್ಟು ದೂರ ಮತ್ತು ದೊಡ್ಡದು! ಇದನ್ನು ಸಂಪಾದಿಸಿದ ಅಂದಿನ ಧುರೀಣರೆತ್ತ ವ್ಯಕ್ತಿತ್ವದ ವಿಕಾಸಕ್ಕೆದೀರ್ಘಕಾಲದ ಸಂಸ್ಕಾರ, ಬುದ್ಧಿಪುರಸ್ಸರವಾದ ಆತ್ಮಕೃಷಿ ಬೇಕೆಂಬ ಶ್ರದ್ಧೆಯಿಲ್ಲದೆ ಮುಂದಾಳುಗಳಾಗಬೇಕೆಂದು ಬಯಸುವ ಹುಲುಮಂದಿಯೆತ್ತ! ಪಾರತಂತ್ರ್ಯದಲ್ಲಿದ್ದು ಅನೇಕ ಅನನುಕೂಲತೆಗಳಿಗೆ ಆಹುತಿಯಾಗಿದ್ದ ಅಂದಿನ ಮುಂದಾಳುಗಳು ಆ ಬಗೆಯ ಮುನ್ನೋಟವನ್ನು ಪಡೆದು ನಮ್ಮ ನಾಡಿಗೆ ಮಾರ್ಗದರ್ಶನವನ್ನು ಮಾಡಿ ಧ್ಯೇಯಸಿದ್ಧಿಯನ್ನು ಪಡೆವಂತೆ ಜನತೆಯನ್ನು ಪ್ರೇರೇಪಿಸಿದರು. ಇದಕ್ಕೆ ಅವರು ಅರ್ಜಿಸಿದ್ದ ದೈವಿಸಂಪತ್ತೇ ಮುಖ್ಯ ಕಾರಣ. ಸ್ವತಂತ್ರ ಭಾರತದ ಭವಿತವ್ಯಕ್ಕೂ ಮುಂದಾಳುಗಳಲ್ಲಿ ಅಂತಹ ದೈವೀಸಂಪತ್ತಿರಬೇಕಾದುದವಶ್ಯ.

---

ಅಲ್ಪಜ್ಞನಾದ ಅಹಂಕಾರಿಯನ್ನು ಬ್ರಹ್ಮನೂ ತೃಪ್ತಿಪಡಿಸಲಾರ.

— ಭರ್ತೃಹರಿ.

# ನಮ್ಮ ರೂಪಾಯಿಯ ಇತಿಹಾಸ

ರೂಪಾಯಿಯೆಂಬ ಭಾರತೀಯ ನಾಣ್ಯ ನಮಗಿಂದು ಎಷ್ಟು ಪರಿಚಿತವಾಗಿದೆಯೆಂದರೆ ಅದಕ್ಕೊಂದು ಇತಿಹಾಸವಿದ್ದೀತೆಂಬ ವಿಚಾರವೇ ನಮಗೆ ಹೊಳೆಯುವದಿಲ್ಲ. ಆದರೂ ರೂಪಾಯಿ ಈ ದೇಶದ ನಾಣ್ಯದ ದೀರ್ಘ ಇತಿಹಾಸದಲ್ಲಿ ಸ್ವಲ್ಪ ಈಚೆಗಿನದೇ. ಅಲಮ್ ಶಹಾ ಪ್ರವರ್ತಿಸಿದ್ದ ಬೆಳ್ಳಿಯ ನಾಣ್ಯವೇ ರೂಪಾಂತರ ಹೊಂದುತ್ತ ಬ್ರಿಟಿಶರ ಕಾಲದಲ್ಲಿ ಅಖಿಲ ಭಾರತ ನಾಣ್ಯವಾಯಿತು. ಅಂದಿನಿಂದೀಚೆಗೆ ಅದರ ಹಣೆಬರಹ ಬ್ರಿಟಿಶರ ಸ್ವಂತ ಹಿತಕ್ಕನುಸಾರವಾಗಿ ಏರಿಳಿತಗಳನ್ನು ಕಂಡು ಚಿನ್ನದ "ಪ್ರಮಾಣ"ದಿಂದ ಬ್ರಿಟಿಶ ಸ್ಟರ್ಲಿಂಗ್ ಪ್ರಮಾಣಕ್ಕೆ ಜೋತುಬೀಳಬೇಕಾಯಿತು. "ರೂಪ್ಯ" ಅಂದರೆ ಬೆಳ್ಳಿಯೆಂಬ ಹೆಸರಿಂದ ಹೊರಟ ನಮ್ಮ ನಾಣ್ಯ ಇಂದು ಕೇವಲ ನಿಕ್ಕಲ್‌ಮಯ ಅಥವಾ ಕಾಗದಮಯ ಕೂಡ ಆಗಿಬಿಟ್ಟಿದೆ.

ಲೇಖಕರು : ಶ್ರೀ. ಧೀರೇಂದ್ರ ಕೃಷ್ಣ ಗುಂಜೀಕರ,
ಬಿ. ಕಾಮ್.

ನಿತ್ಯವೂ ನಾವು ಉಪಯೋಗಿಸುತ್ತಿರುವ ರೂಪಾಯಿಯ ಇತಿಹಾಸ, ಅದರ ಕುಲಗೋತ್ರಗಳು ಅನೇಕರಿಗೆ ಅರಿಯದ ವಿಷಯ. "ಅತಿ ಪರಿಚಯಾದನಾದರೋ ಭವತಿ" ಎಂಬಂತೆ ನಮಗೆ ಆ ಕುತೂಹಲವೇ ಅನಿಸುವದಿಲ್ಲ. ವಿಷಯವು ಮಾತ್ರ ಬಲು ಸ್ವಾರಸ್ಯವಿದೆ. ಇಂದು ಬಳಕೆಯಲ್ಲಿರುವ ನಮ್ಮ ರೂಪಾಯಿಯು ಎಂದು ಹುಟ್ಟಿತು, ಯಾವ ರೂಪದಲ್ಲಿ ಹುಟ್ಟಿತು, ಅದರ ಬೆಳವಣಿಗೆ ಹೇಗೆ ನಡೆಯಿತು ಎಂಬದನ್ನು ವಿವೇಚಿಸುವ ಮೊದಲು ಸಂಪ್ರದಾಯದಂತೆ.

### ಕಿಂಚಿತ್ ಪೂರ್ವಕಥಾನುವಾದಃ

ರೂಪಾಯಿ ಒಂದು ನಾಣ್ಯ. ನಮ್ಮ ಜೀವನವು ಸುಲಭವಾಗಿ, ಸರಾಗವಾಗಿ ಸಾಗಲು ಒಂದು ಸಾಧನ. ಈ ಸಾಧನವು ಎಲ್ಲ ಕಾಲದಲ್ಲಿಯೂ ಅಗತ್ಯವಾದದ್ದು. ಆದರೆ ಬೇರೆ ಬೇರೆ ಕಾಲಗಳಲ್ಲಿ ಆಯಾ ಕಾಲಧರ್ಮಕ್ಕನುಸರಿಸಿ ಅದು ಬೇರೆ ಬೇರೆ ಮಾದರಿಯಲ್ಲಿ, ಆಕಾರಗಳಲ್ಲಿ, ವಸ್ತುಗಳಲ್ಲಿ ರೂಪಗೊಳ್ಳುತ್ತ ಬಂದಿದೆ.

ವೇದಕಾಲದಿಂದಲೂ ಭಾರತದಲ್ಲಿ ನಾಣ್ಯಗಳಿದ್ದವೆಂಬ ಬಗ್ಗೆ ಆಧಾರಗಳು ಸಿಗುತ್ತವೆ. ಆ ಕಾಲದಲ್ಲಿ ಶತಮಾನವೆಂಬ ಒಂದು ಚಿನ್ನದ ನಾಣ್ಯದ ಉಲ್ಲೇಖವು ಕಂಡುಬರುವದು. ಅದರ ತೂಕವನ್ನು ಕೃಷ್ಣಳವೆಂಬ ಒಂದು ಬೀಜದಿಂದ ಮಾಡುತ್ತಿದ್ದರು. ನೂರು ಕೃಷ್ಣಳಗಳೆಂದರೆ ಒಂದು ಶತಮಾನವೆಂಬ ಪ್ರಮಾಣವಿತ್ತು. ನಿಷ್ಕವೆಂಬ ಚಿನ್ನದ ನಾಣ್ಯವೂ ಇತ್ತು. ಸಿಂಧು ಸಂಸ್ಕೃತಿಕಾಲದ ಮೋಹೆಂಜೋದಾರೋದಲ್ಲಿ ಅನೇಕ ತಾಮ್ರದ ನಾಣ್ಯಗಳು ಸಿಕ್ಕಿವೆ. ಮಹಾಭಾರತದಲ್ಲಿ ತಾಮ್ರ ಮತ್ತು ಚಿನ್ನದ ನಾಣ್ಯಗಳ ಉಲ್ಲೇಖವಿದೆ. ಮನುಸ್ಮೃತಿಯಲ್ಲಿ ಅಂದಿನ ತಾಮ್ರ, ಬೆಳ್ಳಿ ಮತ್ತು ಚಿನ್ನದ ನಾಣ್ಯಗಳ ವರೆ, ತೂಕ ಮತ್ತು ಬೆಲೆಗಳ ವಿವೇಚನೆಯಿದೆ.

ಬೌದ್ಧ ಕಾಲದಲ್ಲಿ ಪಣ, ಕಾರ್ಷಾಪಣಗಳೆಂಬ ಬೆಳ್ಳಿಯ ನಾಣ್ಯಗಳು ಬಳಕೆಯಲ್ಲಿದ್ದವು. ಚಾಣಕ್ಯನ ಅರ್ಥಶಾಸ್ತ್ರದಲ್ಲಿ ಟಂಕಸಾಲೆಯ ವಿವರಣೆಯೂ ಲಕ್ಷಣಾಧ್ಯಕ್ಷ, ರುಪ್ರಕರ್ಷ ಎಂಬ ಅಧಿಕಾರಿಗಳ ವರ್ಣನೆಯೂ ಇದೆ. ಮೌರ್ಯರ ಪೂರ್ವಕಾಲದಲ್ಲಿ ದರಿಕವೆಂಬ ಚಿನ್ನದ ನಾಣ್ಯವಿತ್ತು. ಸಿಗ್ಲೋಯಿ ಎಂಬ ಬೆಳ್ಳಿಯ ನಾಣ್ಯವೂ ಇತ್ತು. ೨೦ ಸಿಗ್ಲೋಯಿಗಳಿಗೆ ಒಂದು ದರಿಕವೆಂಬ ಪ್ರಮಾಣವೂ ಇತ್ತು. ಇವು ಗ್ರೀಕ ನಾಣ್ಯಗಳಿದ್ದು ಇವುಗಳ ಮೇಲೆ ಭಾರತದ ವರ್ತಕರ ಅಚ್ಚಿನ ಗುರುತುಗಳಿದ್ದವು. ನಂದರ ಕಾಲದಲ್ಲಿ ಚಲನದಲ್ಲಿದ್ದ ನಾಣ್ಯಗಳ ತೂಕ ಮತ್ತು ಆಕಾರಗಳನ್ನು ಪ್ರಮಾಣಿತಗೊಳಿಸುವ ಪ್ರಥಮ ಪ್ರಯತ್ನವು ನಡೆಯಿತು. ಅಲ್ಲಿಯ ವರೆಗೆ ತಾಮ್ರ, ಬೆಳ್ಳಿ ಮತ್ತು ಚಿನ್ನದ ನಾಣ್ಯಗಳು ಚೌಕಾಗಿ, ಉದ್ದವಾಗಿ ಬೇರೆ ಬೇರೆ ಆಕಾರಗಳಲ್ಲಿರುತ್ತಿದ್ದವು. ದುಂಡಗಿನ ನಾಣ್ಯಗಳು ವಿರಳವಾಗಿದ್ದವು. ಚಂದ್ರಗುಪ್ತನು ತಾಮ್ರ ಮತ್ತು ಬೆಳ್ಳಿಯ ಹೊಸ ನಾಣ್ಯಗಳನ್ನು ಬಳಕೆಯಲ್ಲಿ ತಂದನು. ಗುಪ್ತರ ಕಾಲದ ನಾಣ್ಯಗಳು ಸುಂದರವಾಗಿದ್ದವು. ಗ್ರೀಸ, ರೋಮ, ಇಜಿಪ್ತ ಮೊದಲಾದ ಪರದೇಶಗಳ ಕೂಡ ಭಾರತದ ವ್ಯಾಪಾರವು ದೊಡ್ಡದಿತ್ತು ಮತ್ತು ಗ್ರೀಕರು ಸುಂದರವಾದ ನಾಣ್ಯಗಳನ್ನು ತಯಾರಿಸುವಲ್ಲಿ ಹೆಸರು ಪಡೆದಿದ್ದರು. ವ್ಯಾಪಾರದ ನಿಮಿತ್ತವಾಗಿ ಇವರಗೂಡ ಬಂದ ಸಂಪರ್ಕದ ಪ್ರಭಾವವಾಗಿ ಭಾರತದ ನಾಣ್ಯಗಳೂ ಆಕಾರದಲ್ಲಿ ಮತ್ತು ರೂಪದಲ್ಲಿ ಉತ್ತಮಗೊಳ್ಳಹತ್ತಿದವು. ಅಖಂಡ ಭಾರತವು ಏಕಚಕ್ರಾಧಿಪತ್ಯದಲ್ಲಿ ಎಂದೂ ಇರಲಿಲ್ಲ. ಹೀಗಾಗಿ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಆಕಾರ, ರೂಪಗಳುಳ್ಳ ನಾಣ್ಯಗಳು ಚಲನದಲ್ಲಿದ್ದವು. ಪ್ರತಿಯೊಬ್ಬ ರಾಜನೂ ತನ್ನ ಅರಸೊತ್ತಿಗೆಯ ಕುರುಹೆಂದು ಹೊಸ ನಾಣ್ಯಗಳನ್ನು ಮುದ್ರಿಸುತ್ತಿದ್ದನು.

ಈ ಮಾದರಿಯ ಬೆಳವಣಿಗೆ ನಡೆದುಬಂದಾಗ ಅಲ್ತಮ್‌ಶಹಾನು "ಟಂಕ"ವೆಂಬ ೧೭೫ ಗ್ರೇನಿನ ಒಂದು ಬೆಳ್ಳಿಯ ಪ್ರಮಾಣನಾಣ್ಯವನ್ನು ಚಲನದಲ್ಲಿ ತಂದನು. ಇದೇ ನಮ್ಮ ಇಂದಿನ ರೂಪಾಯಿಯ ಮೂಲವೆಂದು ಹೇಳಬಹುದು. ಆದರೆ ಚಲನದ ವಿಷಯವಾಗಿ ಹೊಸ ವಿಚಾರಗಳ ಕ್ರಾಂತಿಕಾರಕ ಪ್ರಯೋಗಗಳನ್ನು ಪ್ರಥಮವಾಗಿ ಮಾಡಿದ ಸಾಹಸದ ಶ್ರೇಯಸ್ಸು ಹುಚ್ಚನೆಂದು ಹೆಸರಾದ ಮುಹಮ್ಮದ ತಘಲಕನಿಗೆ ಮುಟ್ಟುವದು. ಅವನು ಸಾಂಕೇತಿಕ ತಾಮ್ರದ ನಾಣ್ಯಗಳನ್ನು ಚಲನದಲ್ಲಿ ತರುವ ಪ್ರಯತ್ನ ಮಾಡಿದನು. ಆದರೆ ನಾಣ್ಯಗಳನ್ನು ಮುದ್ರಿಸುವ ಅಧಿಕಾರ ಕೇವಲ ಸರಕಾರದ್ದೆಂದೂ ಬೇರೆಯವರು ಯಾರಾದರೂ ಹಾಗೆ ಮಾಡಿದ್ದಾದರೆ ಶಾಸ್ತಿಗೊಳಗಾಗುವರೆಂದೂ ಏರ್ಪಾಡು ಮಾಡುವದನ್ನು ಮರೆತುಬಿಟ್ಟನು. ಇದೂ ಅಲ್ಲದೆ ಈ ಮಾದರಿಯ ಪ್ರಯೋಗಗಳಿಗೆ ಕಾಲವೂ ಅನುಕೂಲವಿರಲಿಲ್ಲ. ಹೀಗಾಗಿ ಅವನ ಪ್ರಯೋಗವು ಯಶಸ್ವಿಯಾಗಲಿಲ್ಲ. ಅವನ ತರುವಾಯ ಭಾರತದಲ್ಲಿ ಆಡಳಿತಗಾರರಲ್ಲಿ ಅಗ್ರಗಣ್ಯನೆಂದು ಹೆಸರಾದ ಶೇರಶಹಾನು ತನ್ನ ರಾಜ್ಯದಲ್ಲಿದ್ದ ಪೂರ್ವಕಾಲದ ಎಲ್ಲ ನಾಣ್ಯಗಳನ್ನು ಕಿತ್ತೊಗೆದು ೧೭೨.೫ ಗ್ರೇನಿನ ಬೆಳ್ಳಿಯ ರೂಪಾಯಿಯನ್ನು ಪ್ರಾರಂಭಿಸಿದನು. ಅದರಗೂಡ 'ದಾಮ' ಎಂಬ ತಾಮ್ರದ ನಾಣ್ಯವನ್ನೂ ಚಲನದಲ್ಲಿ ತಂದನು. ಮುಂದೆ ಮೊಗಲ ಬಾದಶಹರು ಇವೇ ನಾಣ್ಯಗಳನ್ನು ಒಪ್ಪಿಕೊಂಡರು. ಆದರೆ ಚಿಕ್ಕ ವ್ಯವಹಾರಗಳಿಗೆ ಅನುಕೂಲವಾಗಲೆಂದು ದಮಡಿ ಎಂಬ ಇನ್ನೊಂದು ತಾಮ್ರದ ನಾಣ್ಯವನ್ನು ಮುದ್ರಿಸಿದರು. ಎಂಟು ದಮಡಿಗಳಿಗೆ ಒಂದು ದಾಮ ಎಂಬ ಪ್ರಮಾಣ

ವಿತ್ತು. ರೂಪಾಯಿಯನ್ನು ಶುದ್ಧ ಬೆಳ್ಳಿಯಲ್ಲಿ ಮುದ್ರಿಸುತ್ತಿದ್ದರು. ದಾಮು ತಾಮ್ರದ ನಾಣ್ಯವಿದ್ದು ಅದರ ತೂಕ ೩೨೩.೫ ಗ್ರೇನ ಇತ್ತು. ಬೇರೆ ಬೇರೆ ಬೆಲೆಯ ಚಿನ್ನದ ನಾಣ್ಯಗಳನ್ನೂ ಮುದ್ರಿಸಲಾಗಿತ್ತು. ಮತ್ತು ಟಂಕಸಾಲೆಯಲ್ಲಿ ಪ್ರಮಾಣಕ್ಕನುಸರಿಸಿ ನಾಣ್ಯಗಳನ್ನು ವಿನಿಮಯ ಮಾಡಲು ಅನುಕೂಲವಿತ್ತು. ಮೊಗಲರ ಆಳಿಕೆಯಲ್ಲಿ ಅಕಬರನ ನಂತರ ನಾಣ್ಯಗಳಲ್ಲಿ ವಿಶೇಷ ಬದಲಾವಣೆಯಾಗಲಿಲ್ಲ. ಸುಮಾರು ೧೬೧೬ ರ ವರೆಗೆ ೪೦ ದಾಮಿಗೆ ಒಂದು ರೂಪಾಯಿಯ ಪ್ರಮಾಣವಿತ್ತು. ೧೬೨೭ ರಿಂದ ಅದು ೩೦ ದಾಮಿಗೆ ಇಳಿಯಿತು. ದಕ್ಷಿಣದಲ್ಲಿ ಬಂಗಾರದ ನಾಣ್ಯಗಳಾದ ಹೊನ್ನು, ವರಹಗಳ ಪ್ರಾಬಲ್ಯವು ಹೆಚ್ಚಾಗಿತ್ತು. ಭಾರತದಲ್ಲಿ ಇಸ್ಲಾಮು ರಾಜ್ಯಗಳು ಬೆಳ್ಳಿಯ ನಾಣ್ಯಗಳನ್ನು ಹೆಚ್ಚಾಗಿ ಮುದ್ರಿಸಿದವು. ಆದರೆ ಹಿಂದು ರಾಜರುಗಳೆಲ್ಲರೂ ಸಾಮಾನ್ಯವಾಗಿ ಚಿನ್ನದ ನಾಣ್ಯಗಳನ್ನೇ ಮುದ್ರಿಸಿದರೆಂಬದೊಂದು ವಿಶೇಷ ಸಂಗತಿ.

ವಿಜಯನಗರದ ಕಾಲದಲ್ಲಿ ದಕ್ಷಿಣದಲ್ಲಿ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳೆಲ್ಲವೂ ಇದ್ದವು. ಚಿನ್ನದ ನಾಣ್ಯಗಳೆಂದರೆ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತಿದ್ದ ಗಡ್ಯಾಣ, ವರಹ, ಪೊನ್ನ ಇಲ್ಲವೇ ಪಗೋಡಾ. ಈ ಎಲ್ಲ ಹೆಸರುಗಳು ಒಂದೇ ನಾಣ್ಯವನ್ನು ಸೂಚಿಸುತ್ತಿದ್ದವು. ವರಹದಲ್ಲಿಯೂ ಮೂರು ಮಾದರಿಯ ವರಹಗಳಿದ್ದವು. ಘಟ್ಟವರಹ, ದೊಡ್ಡ ವರಹ ಮತ್ತು ಶುದ್ಧ ವರಹ. ಇದಲ್ಲದೆ ಪ್ರತಾಪ, ಕಾಟಿ, ಪಣ, ಮತ್ತು ಹಾಗಗಳೆಂಬ ಬೇರೆ ಚಿನ್ನದ ನಾಣ್ಯಗಳೂ ಇದ್ದವು. ಇವುಗಳ ಸಾಮಾನ್ಯ ಪ್ರಮಾಣವು ಇಂತಿತ್ತು: ೨ ಪ್ರತಾಪವೆಂದರೆ ೧ ಪಗೋಡಾ. ೨ ಕಾಟಿಗೆ ೧ ಪ್ರತಾಪ. ೪ ಕಾಟಿಗೆ ೧ ವರಹ. ೧೦ ಪಣಗಳೆಂದರೆ ೧ ವರಹ. ತಾರ ಎಂಬುವ ಒಂದು ಬೆಳ್ಳಿಯ ನಾಣ್ಯವೂ ಇತ್ತು. ೬ ತಾರಗಳಿಗೆ ೧ ಪಣ ಇತ್ತು. ಇದಲ್ಲದೆ ಪಣ, ಜಿತಲ ಮತ್ತು ಕಾಸುಗಳೆಂಬ ತಾಮ್ರದ ನಾಣ್ಯಗಳೂ ಬಳಿಕೆಯಲ್ಲಿದ್ದವು.

ಭಾರತದಲ್ಲಿ ಮೊಗಲರ ಆಳಿಕೆಯು ಅಳಿದು ಆಂಗ್ಲರ ಆಳಿಕೆಯು ಪ್ರಾರಂಭವಾಗುವ ಹೊತ್ತಿಗೆ ಚಲನದ ಪರಿಸ್ಥಿತಿಯು ಹದಗೆಟ್ಟಿತ್ತು. ದೇಶದ ತುಂಬೆಲ್ಲ ಬೇರೆ ಬೇರೆ ಮಾದರಿಯ ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಬಳಿಕೆಯಲ್ಲಿ ಇದ್ದವು. ಇವಕ್ಕೆ ನಿಶ್ಚಿತ ಪ್ರಮಾಣಗಳಿದ್ದಿಲ್ಲ, ಲೆಕ್ಕವಿದ್ದಿಲ್ಲ. ಹೀಗಾಗಿ ಪರಪೇಟೆಯ ವ್ಯಾಪಾರಕ್ಕೆ ಬಹಳ ಅನಾನುಕೂಲತೆ ಉಂಟಾಗುತ್ತಿತ್ತು. ಇಂಗ್ಲೀಷರು ವ್ಯಾಪಾರದ ಸಲುವಾಗಿ ಇಲ್ಲಿ ಬಂದು ತಳವೂರಿದ ಮೇಲೆ ಚಲನದಲ್ಲಿದ್ದ ನಾಣ್ಯಗಳ ಅನಾನುಕೂಲತೆಯು ಅವರನ್ನು ವಿಶೇಷವಾಗಿ ಬಾಧಿಸಿತು. ಮುಂದೆ ಅವರು ಭಾರತದಲ್ಲಿ ರಾಜಕೀಯ ಮಹತ್ವವನ್ನು ಸಂಪಾದಿಸಿಕೊಂಡ ಮೇಲೆ ಒಂದೇ ಮಾದರಿಯ ನಾಣ್ಯವನ್ನು ಚಲನದಲ್ಲಿ ತರಬೇಕೆಂದು ನಿಶ್ಚಯಿಸಿದರು. ಆಗ್ಗೆ ತಾಮ್ರ, ಬೆಳ್ಳಿ ಮತ್ತು ಬಂಗಾರದ ಬೇರೆಬೇರೆ ಆಕಾರದ, ತೂಕದ ಮತ್ತು ಪರೆಯ ಸುಮಾರು ೯೪೪ ನಾಣ್ಯಗಳು ಚಲನದಲ್ಲಿದ್ದವೆಂದು ಉಲ್ಲೇಖವಿದೆ. ಈ ಪರಿಸ್ಥಿತಿಯನ್ನು ತಪ್ಪಿಸಲು ಈಸ್ಟ ಇಂಡಿಯಾ ಕಂಪನಿಯವರು ೧೮೧೮ ರಲ್ಲಿ ಮೊದಲು ಮುಂಬಯಿಯಲ್ಲಿ ಮತ್ತು ಆ ಮೇಲೆ ೧೮೨೩ ರಲ್ಲಿ ಮದ್ರಾಸದಲ್ಲಿ ೧೪ ಅಣೆ ೮ ಪೈ ಪರೆಯ ರೂಪಾಯಿಯ ನಾಣ್ಯವನ್ನು ಪ್ರಾರಂಭಿಸಿದರು. ಮುಂದೆ ೧೮೨೫ ರ ಕಾನೂನಿನಂತೆ ಇದನ್ನು ಸ್ಥಿರಗೊಳಿಸಿದರು. ಚಿನ್ನದ ನಾಣ್ಯಗಳನ್ನು ಚಲನದಿಂದ ಹೊರಗಿಟ್ಟರು. ಆದರೆ ಅವುಗಳನ್ನು ಮುದ್ರಿಸುತ್ತಿದ್ದರು.

ಚಲನದಲ್ಲಿ ಇರದಂಥ ನಾಣ್ಯಗಳನ್ನು ಮುದ್ರಿಸುವದು ಒಂದು ವಿಚಿತ್ರದ ಸಂಗತಿಯಾದರೂ ಇಂಥ ವೈಚಿತ್ರ್ಯವು ಆಂಗ್ಲರ ರಾಜ್ಯದ ವೈಶಿಷ್ಟ್ಯವಾಗಿತ್ತು. ೧೮೪೧ ರ ಘೋಷಣೆಯಂತೆ ಚಿನ್ನದ ನಾಣ್ಯಗಳನ್ನು ಎಲ್ಲ ಸರಕಾರಿ ಖಜಾನೆಗಳಲ್ಲಿ ಅವುಗಳ ಮುಖಬೆಲೆಗೆ ಸ್ವೀಕರಿಸಲು ಸರಕಾರದವರು ಒಪ್ಪಿಕೊಂಡರು. ಆದರೆ ಮುಂದೆ ಜಗತ್ತಿನಲ್ಲಿ ಹೊಸ ಹೊಸ ಚಿನ್ನದ ಗಣಿಗಳ ಶೋಧವಾಗಿ ಚಿನ್ನದ ಬೆಲೆಯು ವಿಪರೀತವಾಗಿ ಇಳಿಯತೊಡಗಲು ಈ ಸಂಪ್ರದಾಯವನ್ನು ನಿಲ್ಲಿಸಿಬಿಟ್ಟರು. ಹೀಗೆ ಚಲನದಿಂದ ಚಿನ್ನವನ್ನು ಹೊರಗೆ ಹಾಕಿದ್ದು ಜನೇವರಿ ೧, ೧೮೫೩ ರಲ್ಲಿ. ಆದರೆ ಜನರಿಂದ ಅವುಗಳಿಗೆ ಬೇಡಿಕೆ ಬಹಳ ಇದ್ದ ಕಾರಣ ಅವುಗಳನ್ನು ಮುದ್ರಿಸುವ ಕಾರ್ಯವು ಮಾತ್ರ ನಿಲ್ಲಲಿಲ್ಲ. ಇದರಿಂದ ಜನರಲ್ಲಿ ಅಸಂತೋಷವು ಹಬ್ಬಿ ಚಿನ್ನದ ನಾಣ್ಯವನ್ನು ಚಲನದಲ್ಲಿ ತರುವ ಸಮಸ್ಯೆಯು ಪುನರ್ವಿಚಾರಣೆಯಾಗಿ ಇಂಗ್ಲಂಡದಲ್ಲಿ ಮುದ್ರಿತವಾದ ಪವನ ಮತ್ತು ಅರ್ಧ ಪವನಗಳನ್ನು ಎಲ್ಲ ಸರಕಾರೀ ಖಜಾನೆಗಳಲ್ಲಿ ೧೦ ಮತ್ತು ೫ ರೂಪಾಯಿಗಳಿಗೆ ತೆಗೆದುಕೊಳ್ಳುವಂತೆ ಮತ್ತು ತಮಗೆ ಅನುಕೂಲವಿದ್ದಾಗ ಅದೇ ಬೆಲೆಗೆ ಸಾರ್ವಜನಿಕರಿಗೆ ಮಾರುವಂತೆ ಸರಕಾರದವರು ಆಜ್ಞಾಪಿಸಿದರು. ಆದರೆ ಈ ನಾಣ್ಯಗಳಿಗೆ ಚಲನದಲ್ಲಿ ಮಾತ್ರ ಸ್ಥಾನವಿರಲಿಲ್ಲ. ಹೀಗಾಗಿ ಈ ಪ್ರಯೋಗವು ವಿಫಲವಾಯಿತು. ೧೮೬೬ ರಲ್ಲಿ ನಿಯಮಿಸಲಾದ ಸಮಿತಿಯು ೧೫ ರೂಪಾಯಿ ಮತ್ತು ೫ ರೂಪಾಯಿಗಳ ಚಿನ್ನದ ನಾಣ್ಯಗಳನ್ನು ಮುದ್ರಿಸಿ ಚಲನದಲ್ಲಿ ಬೆಳ್ಳಿ ಮತ್ತು ಚಿನ್ನದ ನಾಣ್ಯಗಳೆರಡನ್ನೂ ಇಡಬೇಕೆಂದು ಸೂಚಿಸಿತು. ಆದರೆ ಈ ಸೂಚನೆ ವರದಿಯಲ್ಲಿಯೇ ಉಳಿಯಿತು.

೧೮೭೩ ರ ಮುಂದೆ ಬೆಳ್ಳಿಯ ಲೋಹದ ಬೆಲೆ ಕ್ರಮೇಣ ಕಡಿಮೆಯಾಗುತ್ತ ನಡೆಯಿತು. ಇಂಗ್ಲಂಡದ ವ್ಯಾಪಾರಕ್ಕೆ ಇದರಿಂದ ದೊಡ್ಡ ಪೆಟ್ಟು ಬಿತ್ತು. ಭಾರತದಲ್ಲಿದ್ದ ಆಂಗ್ಲ ವರ್ತಕರು ಮತ್ತು ಅಡಳತೆಗಾರರು ಇದರಿಂದ ಹಾನಿಗೊಳಗಾದರು. ಇಲ್ಲಿಂದ ಅವರು ಕಳುಹಿಸಿಕೊಡುವ ರೂಪಾಯಿಗಳನ್ನು ಚಿನ್ನದಲ್ಲಿ ಪರಿವರ್ತಿಸಿದರೆ ಬೆಳ್ಳಿಯ ಬೆಲೆ ಇಳಿತದ ಪರಿಣಾಮವಾಗಿ ಚಿನ್ನವು ಕಡಿಮೆ ಸಿಕ್ಕುತ್ತಿತ್ತು. ಕಾರಣ ಇದೆಲ್ಲವನ್ನೂ ತಪ್ಪಿಸಲು ಟಂಕಸಾಲೆಗಳಲ್ಲಿ ಬೆಳ್ಳಿಯನ್ನು ಅನಿರ್ಬಂಧವಾಗಿ ಬೇಡಿದವರಿಗೆ ರೂಪಾಯಿಗಳಲ್ಲಿ ಮುದ್ರಿಸಿಕೊಡುವ ಸಂಪ್ರದಾಯವನ್ನು ನಿಲ್ಲಿಸಬೇಕೆಂದೂ ಇಂಗ್ಲಂಡಿನ ಗೂಡ ರೂಪಾಯಿಯ ವಿನಿಮಯ ದರವನ್ನು ನಿಶ್ಚಿತಗೊಳಿಸಬೇಕೆಂದೂ ಭಾರತೀಯ ಆಂಗ್ಲರ ಆಂದೋಲನವೇ ಪ್ರಾರಂಭವಾಯಿತು. ಭಾರತೀಯರಿಗೆ ಮಾತ್ರ ಹಳೇ ಪದ್ಧತಿಯಿಂದಲೇ ಲಾಭವಿತ್ತು. ಆದರೆ ಭಾರತೀಯರ ಸಲುವಾಗಿ ಅಂದು ಆಡಳತೆ ಸಾಗಿದ್ದಿಲ್ಲ. ಕಾರಣ ೧೮೯೨ ರಲ್ಲಿ ನಿಯಮಿಸಿದ ಸಮಿತಿಯವರು ಭಾರತದಲ್ಲಿ ರೂಪಾಯಿಗಳನ್ನು ಅನಿರ್ಬಂಧವಾಗಿ ಮುದ್ರಿಸುವದನ್ನು ನಿಲ್ಲಿಸಬೇಕೆಂದೂ ರೂಪಾಯಿಯ ವಿನಿಮಯ ದರವನ್ನು ೧೬ ಪೆನ್ನಿಗೆ ಗೊತ್ತುಮಾಡಬೇಕೆಂದೂ ಸೂಚಿಸಿದರು. ವರದಿಗೆ ಸದಸ್ಯರು ಅಂಕಿತ ಹಾಕಿದ ದಿನ ಪೇಟೆಯಲ್ಲಿ ವಿನಿಮಯ ದರವು ೧೪.೬೨೫ ಪೆನ್ನಿನಷ್ಟಿತ್ತು. ಇಷ್ಟಾಗಿ ಕೂಡ ವಿನಿಮಯ ದರವು ಇಳಿಯುವದು ತಡೆಯದೆ ೧೩ ಪೆನ್ನಿಗೆ ಬಂದು ನಿಂತಿತು. ಪ್ರತೀಕಾರೋಪಾಯವೆಂದು ರೂಪಾಯಿಗಳ ಮುದ್ರಣವನ್ನು ನಿಲ್ಲಿಸಿದರು. ಚಲನದಲ್ಲಿದ್ದ ರೂಪಾಯಿಗಳನ್ನು ಹಿಂತೆಗೆದುಕೊಂಡರು. ಹೆಚ್ಚಿನ ರೂಪಾಯಿಗಳನ್ನು ಕರಗಿಸಿದರು. ದೇಶದಲ್ಲಿ ರೂಪಾಯಿ ನಾಣ್ಯದ ಅಭಾವವನ್ನು ಕಲ್ಪಿಸಿದರು. ಈ ಎಲ್ಲ ಕ್ರಮಗಳ ಪರಿಣಾಮವಾಗಿ ರೂಪಾಯಿಯ ವಿನಿಮಯ ದರವು ಕ್ರಮೇಣ ಏರತೊಡಗಿ ೧೮೯೮ ರಲ್ಲಿ ೧೩ ರಿಂದ ೧೫.೯ ಪೆನ್ನಿಗೆ ಬಂದು ನಿಂತಿತು. ಇದು ಅಂದಿನ ಸರಕಾರದ ಕಲ್ಪನೆಗೆ ಸರಿಹೋಗುತ್ತಿತ್ತು.

ಈ ಪರಿಸ್ಥಿತಿಯಲ್ಲಿ ಮುಂದಿನ ಧೋರಣೆಯನ್ನು ನಿಶ್ಚಯಿಸಲು ೧೮೯೮ ರಲ್ಲಿ ಮತ್ತೊಂದು ಸಮಿತಿಯು ನೇಮಕವಾಯಿತು. ಅವರು ಚಿನ್ನವೇ ನಾಣ್ಯದ ಪ್ರಮಾಣವಾಗಬೇಕೆಂದೂ ಚಿನ್ನದ ನಾಣ್ಯಗಳು ಚಲನದಲ್ಲಿರಬೇಕೆಂದೂ ಇದನ್ನು ಸಾಧಿಸಲು

೧] ರೂಪಾಯಿಯ ವಿನಿಮಯ ದರವು ೧೬ ಪೆನ್ಸ ಚಿನ್ನಕ್ಕೆ ಸರಿ ಹೋಗಬೇಕು.

೨] ಇಂಗ್ಲಂಡದ ಪವನವು ಭಾರತದಲ್ಲಿ ಪ್ರಮಾಣನಾಣ್ಯವಾಗಬೇಕು ಮತ್ತು ಚಲನದಲ್ಲಿರಬೇಕು.

೩] ಭಾರತದ ಟಂಕಸಾಲೆಗಳು ಚಿನ್ನದ ನಾಣ್ಯಗಳನ್ನು ಅನಿರ್ಬಂಧವಾಗಿ ಮುದ್ರಿಸಬೇಕು.

೪] ಬೆಳ್ಳಿಯ ರೂಪಾಯಿ ಮುದ್ರಣದಿಂದ ಆಗುವ ಲಾಭವನ್ನು ಒಂದು ವಿಶೇಷ ನಿಧಿಯಲ್ಲಿ ಶೇಖರಿಸಿ ಅದನ್ನು ರೂಪಾಯಿ ಬೆಲೆಯ ನಿಯಮನಕ್ಕೆ ಉಪಯೋಗಿಸಬೇಕು.

೫] ರೂಪಾಯಿಯು ಚಲನದಲ್ಲಿ ಅನಿರ್ಬಂಧ ನಾಣ್ಯವಾಗಬೇಕು.

೬] ಸರಕಾರದವರು ಚಿನ್ನಕ್ಕೆ ರೂಪಾಯಿಗಳನ್ನು ಕೊಡಬೇಕು. ಆದರೆ ರೂಪಾಯಿಗ

ಚಿನ್ನ ಕೊಡುವ ಹೊಣೆ ಇರಬಾರದು ಎಂದು ಸೂಚಿಸಿದರು.

ಇಂಗ್ಲಂಡದ ಸರಕಾರದವರು ಹವನವನ್ನು ಭಾರತದಲ್ಲಿ ಮುದ್ರಿಸಲು ಎಂದಿಗೂ ಒಪ್ಪುವದಿಲ್ಲವೆಂದು ಹೇಳಿದರು. ಭಾರತದ ಸ್ವತಂತ್ರ ಚಿನ್ನದ ನಾಣ್ಯ ಮಾಡಲೂ ಇಷ್ಟಪಿದ್ದಿಲ್ಲ. ರೂಪಾಯಿಗೆ ಚಿನ್ನ ಕೊಡುವ ಹೊಣೆ ಹೊತ್ತಿದ್ದಿಲ್ಲ. ಹೀಗಾಗಿ ಮೇಲಿನ ಸೂಚನೆಗಳೆಲ್ಲವೂ ಮೂಲೆಗುಂಪಾದವು. ರೂಪಾಯಿ ಮುದ್ರಣದ ಲಾಭವು ಲಂಡನ್ನಿನಲ್ಲಿ ಬಂಗಾರದ ರೂಪದಿಂದ ಉಳಿಯಿತು. ಬಂಗಾರವೆಂದರೆ ಬಂಗಾರಕ್ಕೆ ಪರಿವರ್ತಿಸಬಹುದಾದ ವಸ್ತುಗಳೆಂದು ವ್ಯಾಖ್ಯೆ ಮಾಡಿ ಈ ನಿಧಿಯಿಂದ ಇಂಗ್ಲಿಶ್ ಸರಕಾರದ ಸಾಲಗಳನ್ನು ಕೊಂಡಿದ್ದರು. ಈ ಕ್ರಮದಿಂದ ಚಿನ್ನವೇ ನಾಣ್ಯದ ಪ್ರಮಾಣವಿರಬೇಕೆಂಬ ನಿರ್ಣಯವು ಕ್ರಮೇಣ ಬದಲಾವಣೆ ಹೊಂದಿ ಚಿನ್ನಸಮಾನ ಇಲ್ಲವೆ ಚಿನ್ನ ಪರಿವರ್ತನಪ್ರಮಾಣವೆಂದು ಮಾರ್ಪಟ್ಟಿತು. ೧೯೨೩ ರಲ್ಲಿ ನಿಯಮಿಸಲ್ಪಟ್ಟ ಸಮಿತಿಯವರು ಒಳನಾಡಿನ ಚಲನದಲ್ಲಿ ಚಿನ್ನದ ನಾಣ್ಯಗಳಿರಬೇಕೆಂದು ಭಾರತೀಯರ ಅಭಿಪ್ರಾಯವಿಲ್ಲವೆಂದೂ ಅದರಿಂದ ಭಾರತದ ಅಹಿತವೇ ಆಗುವದೆಂದೂ ಹೇಳಿ ಚಲನನಿಧಿಯನ್ನು ಲಂಡನ್ನಿನಲ್ಲಿಯೇ ಇಡಬಹುದೆಂದು ಅಭಿಪ್ರಾಯಪಟ್ಟರು. ಆದರೆ ಈ ಸಮಿತಿಯ ಒಬ್ಬ ಸದಸ್ಯರು ಮಾತ್ರ ಭಾರತೀಯರು ಬೆಳ್ಳಿಗಿಂತ ಬಂಗಾರದ ನಾಣ್ಯಗಳನ್ನೇ ಒಪ್ಪುವರೆಂದು ಹೇಳಿದರು. ೧೯೦೯—೧೯೧೩ ರಲ್ಲಿ ೯ ಕೋಟಿ ಬೆಳ್ಳಿಯ ರೂಪಾಯಿ ಮತ್ತು ೧೧ ಕೋಟಿ ರೂಪಾಯಿಯ ಚಿನ್ನದ ನಾಣ್ಯಗಳು ದೇಶದಲ್ಲಿ ಜನರಿಂದ ಬಚ್ಚಿಡಲ್ಪಟ್ಟವೆಂಬ ಸಂಗತಿಯು ಇದಕ್ಕೆ ಪುಷ್ಟಿ ಕೊಡುವದು.

೧೯೧೪ ರಲ್ಲಿ ಪ್ರಾರಂಭವಾದ ಯುದ್ಧದಿಂದ ಪರಿಸ್ಥಿತಿಯು ಮತ್ತಿಷ್ಟು ಹದಗೆಟ್ಟಿತು. ಯುದ್ಧಪೂರ್ವದಲ್ಲಿಯ ೬೬ ಕೋಟಿ ರೂಪಾಯಿ ಚಲನವು ೧೯೧೯ ರಲ್ಲಿ ೧೮೩ ಕೋಟಿ ರೂಪಾಯಿಗೇರಿತು. ಇದಕ್ಕೆ ಯಾವ ಲೋಹದ ಆಧಾರವೂ ಇರಲಿಲ್ಲ. ಇಂಗ್ಲಿಶ್ ಸರಕಾರದ "ಪರಮೇಶ್ವರಿ" ಆಧಾರವಾಗಿತ್ತು. ಈ ಸಮಯಕ್ಕೆ ಬೆಳ್ಳಿಯ ಬೆಲೆ ಏರತೊಡಗಿತು. ಬೆಳ್ಳಿ ರೂಪಾಯಿಯ ವಿನಿಮಯ ದರವು ಏರಹತ್ತಿ ೧೯೧೯ ರಲ್ಲಿ ೨೮ ಪೆನ್ಸಿಗೆ ನಿಂತಿತು.

೧೯೧೯ರಲ್ಲಿ ನೇಮಕವಾದ ಸಮಿತಿಯವರು ಇದನ್ನು ಸರಿಪಡಿಸಲು ರೂಪಾಯಿಯ ವಿನಿಮಯ ದರವನ್ನು ೨೪ ಪೆನ್ಸ ಚಿನ್ನಕ್ಕೆ ಸರಿಪಡಿಸಬೇಕೆಂದು ಸೂಚಿಸಿದರು. ಇದರ ಪರಿಣಾಮವಾಗಿ ರೂಪಾಯಿಯ ವಿನಿಮಯ ದರವು ೩೪ ಪೆನ್ಸ ಸ್ಟರ್ಲಿಂಗಿಗೆ ಏರಿ ನಿಂತಿತು. ಬೆಳ್ಳಿಯಿಂದ ಚಿನ್ನ, ಚಿನ್ನದಿಂದ ಚಿನ್ನಸಮಾನ, ಅಲ್ಲಿಂದ ಮತ್ತೆ ಬೆಳ್ಳಿ ಮತ್ತು ಬೆಳ್ಳಿಯಿಂದ ಮತ್ತೆ ಚಿನ್ನ, ಹೀಗೆ ನಮ್ಮ ನಾಣ್ಯ ಆಧಾರದ ಪರಿವರ್ತನೆಯಾಯಿತು. ಇದರ ಪರಿಣಾಮವಾಗಿ ಸ್ಟರ್ಲಿಂಗ ಬೆಲೆ ಇಳಿದು ರೂಪಾಯಿ ಬೆಲೆ ಏರಿತು. ರೂಪಾಯಿಗಳಿಗೆ ೨೪ ಪೆನ್ಸ ಚಿನ್ನದಂತೆ ಸ್ಟರ್ಲಿಂಗ ಪೂರೈಸುವದು ಅಸಾಧ್ಯವಾಗಲು ವಿನಿಮಯ ಪ್ರಮಾಣವನ್ನು ೨೪ ಪೆನ್ಸ ಚಿನ್ನದ ಬದಲು ೨೪ ಪೆನ್ಸ ಸ್ಟರ್ಲಿಂಗೆಂದು ಸಾರಿದರು. ೧೯೨೦ರಲ್ಲಿ ಇದೂ ಸಾಗದೆ ವಿನಿಮಯ ದರವನ್ನು ಪೇಟಿಗೆ ಬಿಟ್ಟುಕೊಟ್ಟರು. ಇದರಿಂದ ಭಾರತಕ್ಕೆ ವಿಪರೀತ ಹಾನಿಯಾಯಿತು. ಬೆಳ್ಳಿಯ ಬೆಲೆ ಬಿದ್ದು ರೂಪಾಯಿಯ ವಿನಿಮಯ ದರವು ಮತ್ತೆ ೧೬ ಪೆನ್ಸಿಗೆ ನಿಂತಿತು. ೧೯೨೫ರಲ್ಲಿ ವಿನಿಮಯ ದರವು ೧೮ ಪೆನ್ಸಿಗೆ ಏರಿತು. ೧೯೨೫ರಲ್ಲಿ ನೇಮಕವಾದ ಸಮಿತಿಯವರು ೧೮ ಪೆನ್ಸ ವಿನಿಮಯ ದರವನ್ನು ಸೂಚಿಸಿದರು. ಭಾರತೀಯರ ಅಭಿಪ್ರಾಯದ ವಿರುದ್ಧವಾಗಿ ಇದು ಅಮಲಿನಲ್ಲಿ ಬಂತು. ಮುಂದೆ ಇಂಗ್ಲಂಡದ ಸ್ಥಿತಿ ಹದಗೆಟ್ಟು ಅದು ತನ್ನ ಚಿನ್ನ ಪ್ರಮಾಣವನ್ನು ೧೯೩೧ರಲ್ಲಿ ಬಿಟ್ಟುಕೊಟ್ಟಿತು. ಆಗ ಸ್ಟರ್ಲಿಂಗದಂತೆ ರೂಪಾಯಿಯ ವಿನಿಮಯ ದರವನ್ನು ಪೇಟಿಗೇ ಬಿಟ್ಟುಕೊಡಬಹುದಿತ್ತು. ಆದರೆ ಹಾಗೆ ಮಾಡದೆ ಅದನ್ನು ೧೮ ಪೆನ್ಸ ಸ್ಟರ್ಲಿಂಗಿಗೆ ಅಂಟಿಸಿದರು. ಇದೇ ವಿನಿಮಯ ಪ್ರಮಾಣವು ಇಂದಿಗೂ ಅಮಲಿನಲ್ಲಿದೆ.

ಚಲನದಲ್ಲಿರತಕ್ಕ ನಾಣ್ಯ ಚಿನ್ನದ್ದಿರಬೇಕೋ ಬೆಳ್ಳಿಯದಿರಬೇಕೋ, ಚಲನದ ಆಧಾರ ನಾಣ್ಯವೇನಿರಬೇಕು, ಅದರ ವಿನಿಮಯ ದರವೆಷ್ಟಿರಬೇಕು ಎಂಬ ಬಗ್ಗೆ ಮೇಲಿಂದ ಮೇಲೆ ಬದಲಾವಣೆಯಾಗುತ್ತ ಬಂದರೂ ರೂಪಾಯಿ ನಾಣ್ಯದಲ್ಲಿ ಮಾತ್ರ ೧೯೪೦ರ ವರೆಗೆ ಯಾವ ಬದಲಾವಣೆಯೂ ಆಗಲಿಲ್ಲ. ಹೊಸ ರಾಜರ ಆಡಳಿತೆ ಪ್ರಾರಂಭವಾಗಲು ಅವರ ಕಾಲದ ಪ್ರಾರಂಭವೆಂದು ಅವರ ಚಿತ್ರದ ಹೊಸ ನಾಣ್ಯಗಳು ಮುದ್ರಿತವಾಗುತ್ತಿದ್ದವು. ೧೯೪೦ರಲ್ಲಿ ಬೆಳ್ಳಿಯ ಸಂಗ್ರಹವನ್ನು ಕಾಯ್ದುಕೊಂಡು ಹೋಗಲು ಮತ್ತು ಪರಕೀಯರಿಂದ ಕಡತಂದ ಬೆಳ್ಳಿಯನ್ನು ಮರಳಿ ಕೊಡಲು ಅನುಕೂಲವಾಗಲೆಂದು, ರೂಪಾಯಿ ನಾಣ್ಯದಲ್ಲಿಯ ಬೆಳ್ಳಿಯನ್ನು ಕಡಿಮೆ ಮಾಡಲು ನಿಶ್ಚಯಿಸಿದರು. ಈ ನಿರ್ಣಯದ ಪ್ರಕಾರ ೧-೪-೧೯೪೧ರಿಂದ ರೂಪಾಯಿ, ಅರ್ಧ ರೂಪಾಯಿ ಮತ್ತು ಕಾಲು ರೂಪಾಯಿ ನಾಣ್ಯಗಳಲ್ಲಿ ಅರ್ಧ ಬೆಳ್ಳಿ ಮತ್ತು ಅರ್ಧ ಬೇರೆ ಲೋಹವಿರಬೇಕೆಂದು ನಿಶ್ಚಯಿಸಿ ಆ ದಿನದಿಂದ ಕೆಲವು, ಮತ್ತು ೩೧-೫-೧೯೪೨ರಿಂದ ಮತ್ತೆ ಕೆಲ ಹಳೇ ನಾಣ್ಯಗಳನ್ನು ಚಲನದಿಂದ ಹಿಂತೆಗೆದುಕೊಂಡರು. ೧-೫-೧೯೪೩ರಲ್ಲಿ ಉಳಿದೆಲ್ಲ ಬೆಳ್ಳಿಯ ನಾಣ್ಯಗಳನ್ನೂ ಚಲನದಿಂದ ಹಿಂತೆಗೆದರು. ಇಲ್ಲಿಯ ವರೆಗೆ ಚಲನದಲ್ಲಿದ್ದ ಪೂರ್ಣ ಬೆಲೆಯ ಬೆಳ್ಳಿಯ ನಾಣ್ಯಗಳ ಯುಗವು ಮಾಯವಾಗಿ ಸಾಂಕೇತಿಕ ನಾಣ್ಯಗಳ ಯುಗವು ಪ್ರಾರಂಭವಾಯಿತು. ಆದರೆ ಈ ಹೊತ್ತಿಗೆ ಬೆಳ್ಳಿಯ ಬೆಲೆ ಏರಿದ ಕಾರಣ ಚಲನದಲ್ಲಿದ್ದ ಬೆಳ್ಳಿಯ ನಾಣ್ಯಗಳು ಪೂರ್ಣ ಮರಳಿ ಸರಕಾರದವರ ಕಡೆಗೆ ಬರದೆ, ಜನರು ತಾವೇ ಅವನ್ನು ಕರಗಿಸಿ ನಾಣ್ಯಕ್ಕೆ ಸಿಗಬಹುದಾದ ೧೬ ಆಣೆಗಿಂತ ಹೆಚ್ಚಿನ ಬೆಲೆಯನ್ನು ದೊರಕಿಸಿದರು.

೧೮೩೫ರಿಂದ ೧೯೪೬ರ ವರೆಗೆ ಭಾರತೀಯ ಟಂಕಸಾಲೆಗಳಲ್ಲಿ ಮುದ್ರಿತವಾದ ರೂಪಾಯಿ ನಾಣ್ಯಗಳ ಸಂಖ್ಯೆಯು ೭೫೫,೨೯,೯೦,೧೩೦.

ಮುಂದೆ ೧೯೪೭ರಲ್ಲಿ ಬೆಳ್ಳಿಯ ಎಲ್ಲ ನಾಣ್ಯಗಳನ್ನು ರದ್ದುಮಾಡಿ ಕೇವಲ ನಿಕೆಲ್ಲಿನ ನಾಣ್ಯಗಳನ್ನು ಚಲನದಲ್ಲಿ ತಂದರು. ಈ ನಾಣ್ಯಗಳು ಚಲನದಲ್ಲಿ ಬಂದದ್ದು ೨—೬–೧೯೪೭ನೇ ದಿನ. ೧೯೪೭-೪೮ರಲ್ಲಿ ಇಂಥ ರೂಪಾಯಿಗಳು ಮುದ್ರಿತವಾದದ್ದು ಒಟ್ಟು ೧೧,೫೧,೩೯,೦೦೦.

ಈ ನಾಣ್ಯಗಳಲ್ಲದೆ ಕಾಗದದ ರೂಪಾಯಿ ನೋಟುಗಳೂ ಚಲನದಲ್ಲಿ ಬಂದವು. ಮೊದಲನೇ ಮಹಾಯುದ್ಧದ ನಂತರ ಈ ನೋಟುಗಳನ್ನು ಚಲನದಲ್ಲಿ ತರಲಾಯಿತು. ಮುಂದೆ ಅವನ್ನು ರದ್ದು ಮಾಡಲಾಗಿತ್ತು. ಕಳೆದ ಯುದ್ಧ ಕಾಲದಲ್ಲಿ ಮತ್ತೆ ಅವನ್ನು ಚಲನದಲ್ಲಿ ತರಲಾಗಿದೆ. ಆದರೆ ಅವು ನೋಟುಗಳಲ್ಲದೆ ಕಾಗದದ ರೂಪಾಯಿ ನಾಣ್ಯಗಳೆಂದೇ ಗಣಿಸಲಾಗುತ್ತಿದೆ.

ಏಕಾಂಕ

# ಗಣ-ಗಣ-ರಾಜ್ಯ

ಬರೆದವರು: ಶ್ರೀರಂಗ

ವಿ. ಸೂ.:— ಈ ದೃಶ್ಯದ ಎಲ್ಲ ಹಕ್ಕುಗಳನ್ನು ಕಾದಿರಿಸಲಾಗಿದೆ. ಇದನ್ನು ಪ್ರಯೋಗಿಸುವವರು ಮುಂಚಿತವಾಗಿ ಶ್ರೀಮತಿ ಅದ್ಯ ಶಾರದಾದೇವಿಯವರು, ಬಿ. ಎ., ಸಪ್ತಾಪುರ, ಧಾರವಾಡ ಇವರಿಂದ ಬರೆಹದಲ್ಲಿ ಅನುಮತಿಯನ್ನು ಪಡೆಯತಕ್ಕದ್ದು.

ಪಾತ್ರವರ್ಗ:

೧. ನಾರದ
೨. ಗಣೇಶ
೩. ೧ನೆಯ ನಾಗರಕ
೪. ೨ನೆಯ ನಾಗರಕ
೫. ೩ನೆಯ ನಾಗರಕ

---

## ದೃಶ್ಯ ೧

[ಅಂತರಿಕ್ಷ ಲೋಕದಲ್ಲಿಯ ಒಂದು ತಪೋವನದ ದೃಶ್ಯ. ಅಲ್ಲಲ್ಲಿ ಗಿಡ-ಗುಡ್ಡಗಳ ನೋಟ. ರಂಗದ ಮಧ್ಯದಲ್ಲಿ ಒಂದು ಉನ್ನತವಾದ ಪ್ರದೇಶ. ಅದರ ತುದಿಯಲ್ಲಿ ಗಿಡಗಳದೊಂದು ಗುಂಪು. ಅವುಗಳ ನಡುವೆ, ಉಚ್ಚ ಶಿಲಾಸನದ ಮೇಲೆ ಶ್ರೀ ಗಣೇಶನು ವಿರಾಜಮಾನನಾಗಿದ್ದಾನೆ; ತಪಸ್ಸಿನಲ್ಲಿಯೋ ಸಮಾಧಿಯಲ್ಲಿಯೋ ಮಗ್ನನಾಗಿದ್ದಾನೆ; ಮುಚ್ಚಿದ ಎರಡು ಕಣ್ಣುಗಳು; ಮುಗಿದ ನಾಲ್ಕು ಕೈಗಳು; ಪದ್ಮಾಸನವನ್ನು ತೊಡಗಿದ ಕಾಲ್ಗಳು; ನಯನಗಂಭೀರವಾದ ಸೊಂಡಿಲವು ಬಲಮಗ್ಗಲಿಗೆ ತಲೆವಾಗಿಸಿ ನಿಂತವನಂತೆ ನಮ್ರವಾಗಿ ತಟಸ್ಥವಾಗಿ ನಿಂತಿದೆ. ಕೆಲ ಹೊತ್ತು ನಿಃಶಬ್ದತೆ. ಆ ಮೇಲೆ ತೆರೆಯ ಹಿಂದಿನಿಂದ ಸ್ತವನಪದ್ಯವೊಂದು ಹೀಗೆ ಕೇಳಬರುವುದು:—

"ಜಯ ರಾಯಾ ಜಯ ರಾಯಾ ಜಯ ವೇಂಕಟೇಶಾ।
ಸಂಕಟಹಾರಕ ಸರ್ವೇಸತಾರಕ ಕಾಯೊ ಗಣೇಶಾ ‖ಪ‖

ಶ್ರೀ ಗಣೇಶನು ಮೆಲ್ಲನೆ ಕಣ್ದೆರೆಯುತ್ತ ಸುತ್ತಲೂ ನೋಡುವನು. ಅಷ್ಟರಲ್ಲಿ ಅದೇ ದನಿಯಲ್ಲಿ ಇನ್ನೊಂದು ಪದ್ಯ ಹೀಗೆ ಕೇಳಬರುವುದು:—

"ಕಣ್ದೆರೆ, ನೀ ದಂಗಾ-। ಗಿರುವೆಯೊ। ಯಾಕೆ, ಮೂಷ ರಂಗಾ ‖ಪ‖
ಆರತಿಯನು ಶೃಂಗಾ-। ರಿಸುವೆನು। ಕಣ್ದೆರೆ ಶ್ರೀರಂಗಾ ‖೧‖"

ಶ್ರೀ ಗಣೇಶನು ತುಸು ಕಕ್ಕಾವಿಕ್ಕಿಯಾಗಿಯೆ ಸುತ್ತಲು ನೋಡುವನು. ಆ ಮೇಲೆ ತೀರ ಹತ್ತಿರದಲ್ಲಿಯೆ, ಅದೇ ದನಿಯಲ್ಲಿ, "ನಾರಾಯಣ, ನಾರಾಯಣ—" ಎನ್ನುತ್ತ "ನಾರಾಯಣಾ ನರಪಾವನಾ। ಆರಾಧಿಪರ। ದೂರೀಸು ದುರಿತವ" ಎಂದು ರಾಗವಾಗಿ ನುಡಿಯುತ್ತ ಒಂದು ವ್ಯಕ್ತಿಯು ಬರುವುದು. ತೊಟ್ಟಿದ್ದು ಶುಭ್ರ ಖಾದಿಯ ಇಸ್ತ್ರಿಯ ಪೈಜಾಮಾ; ಅದೇ ಸೆಟವಿನ ಇಸ್ತ್ರಿಯ ಖಾದಿಯ ನೆಹರು ಶರ್ಟು; ಶರ್ಟಿನಿಂದ ತುಸು ಮೇಲ್ಗಡೆಯಲ್ಲಿ ಅಷ್ಟೆ ಬಿಳಿದಾದ ಮೀಸೆ, ತರುವಾಯ ಬಿಳಿ ಕಣ್ಣೆವೆಗಳು; ಅದಕ್ಕೂ ಮೇಲೆ ದೃಷ್ಟಿಸಿ ಜರೆ ಖಾದಿಯ ಗಾಂಧೀ ಟೊಪ್ಪಿಗೆ, ಅದರಿಂದ ಮೂರೂ ಕಡೆ ಶಿವನ ಜಡೆಯಿಂದ ಹರಿಯುವ ಸುರಗಂಗೆಯಂತೆ ಶುಭ್ರವಾದ ಜಟಾಪ್ರವಾಹ. ವ್ಯಕ್ತಿಯು ತುಸು ಮುಂದಕ್ಕೆ ಬಂದು ಗಣೇಶನನ್ನು ನೋಡುತ್ತ "ನಾರಾಯಣ, ನಾರಾಯಣ" ಎಂದು ನಿಲ್ಲುವುದು.]

* * *

ಗಣೇಶ:— (ವ್ಯಕ್ತಿಯನ್ನು ದಿಟ್ಟಿಸುತ್ತ, ಚಕಿತನಾಗಿ) ಏನು? ಯಾರಿದು?

ವ್ಯಕ್ತಿ:— (ಗಹಗಹಿಸಿ ನಗುತ್ತ) ವಿನಾಯಕಾ, ವಿಘ್ನರಾಜಾ, ತಪಸ್ಸಿನಿಂದ ಸ್ಮೃತಿಶಕ್ತಿಯನ್ನು ಕಳೆದುಕೊಂಡೆಯಾ? ತ್ರೈಲೋಕ್ಯಸಂಚಾರಿಯಾದ ಈ ನಾರದನನ್ನು ಗುರುತಿಸದೆ ಹೋದೆಯಾ?

ಗಣೇಶ:— (ತಡವರಿಸುತ್ತ) ನಾರದ! ಹೇ ಮುನಿಪುಂಗವಾ, ಕ್ಷಮೆ ಇರಲಿ; ಈ ಗಣನಾಥನು ವಂದಿಸುತ್ತಾನೆ. (ಕೈಗಳನ್ನು-ಎರಡನ್ನೆ-ಎತ್ತಿ ಮುಗಿಯುವನು).

ನಾರದ:— (ಆಶ್ಚರ್ಯದಿಂದ) ಎಲೈ, ಗಣಾನಾಂ ಪತೇ, ಇದೇನಾಶ್ಚರ್ಯ? ನೀನೂ ಮರ್ತ್ಯರಂತೆ ಎರಡೇ ಕೈಗಳಿಂದ ನಮಸ್ಕರಿಸುವೆಯಲ್ಲ? ಯಾಕೆ? ನಿನ್ನ ಸೊಂಡಿಲು ಮತ್ತೆಲ್ಲಿಯಾದರೂ ಅವತಾರವನ್ನು ತಾಳಿರುವನೆ?

ಗಣೇಶ:— ಹೇ ಮುನಿವರ್ಯಾ, ನಿನಗೆ ಈ ಆಸನವನ್ನು ಕೊಡಬೇಕೆಂದರೆ—(ಏಳಲು ಯತ್ನಿಸುವನು).

ನಾರದ:— ಎಲೈ, ಲಂಬೋದರನೆ, ವ್ಯರ್ಥ ಶ್ರಮ ಯಾಕೆ? ಇಷ್ಟಸಿದ್ಧಿಗಳು ನಾವು. ನಿಂತಲ್ಲಿಯೆ ನಮ್ಮ ಆಸನ. ಇದಲ್ಲದೆ ಇದೇ ಭೂಲೋಕದಲ್ಲಿ ಸಂಚರಿಸಿ ಬಂದಿರುವೆವು. ಆಸನದ ಅನುಭವ ನಮಗಿದೆ.

ಗಣೇಶ:— (ಎಲ್ಲವೂ ಹೊಳೆದಂತೆ) ಓಹೊ! ಭೂಲೋಕದಿಂದ ಬಂದಿರಾ? ಅದಕಾಗಿ ಈ ವೇಷವೆ? (ಒಮ್ಮೆಲೆ ವಿಚಾರಕ್ಕೆ ಸಿಲುಕಿದವನಂತೆ) ಮುನಿವರ್ಯನೆ, ಭೂಲೋಕದ ವರ್ತಮಾನವೇನು? ಇಷ್ಟರಲ್ಲಿಯೆ ಅಲ್ಲಿಂದ ನನಗೆ ಆಹ್ವಾನ ಬರಬೇಕಿತ್ತು. ಆದರೆ ಇದುವರೆಗೂ ಯಾವ ಕರೆಯೂ ಬಂದಿಲ್ಲ. ನಾಳಿನ ದಿನವೆ ನನ್ನ ಚತುರ್ಥಿ. ಮನೆಮನೆಯಲ್ಲಿ ನಾನು ಇಷ್ಟರಲ್ಲಿಯೇ ಆಸೀನನಾಗಬೇಕಿತ್ತು. ಆದರೂ—

ನಾರದ:— ವಿನಾಯಕಾ, ಆಸನದ ಅನುಭವ ನಮಗಿದೆ ಎಂದು ಹೇಳಿದೆನಲ್ಲ? ಅದರ ಅರ್ಥ ಏನೆಂದು ತಿಳಿದಿರುವೆ? ಇಂದು ಭೂಲೋಕದಲ್ಲಿ ಒಂದೂ ಆಸನವು ಬರಿದಾಗಿಲ್ಲ—

ಗಣೇಶ:— (ಚಕಿತನಾಗಿ, ನಡುವೆಯೆ) ಏನೆಂದಿರಿ? ಒಂದೂ ಆಸನ— ?

ನಾರದ:— ಒಂದೂ ಆಸನ ಬರಿದಾಗಿಲ್ಲ. ಒಮ್ಮೆ ಒಂದು ಆಸನವನ್ನು ಅಧಿರೂಢನಾದ ಮಾನವನು ಅದನ್ನೆಂದಿಗೂ ಬಿಡದಂತಹ ವಿದ್ಯೆಯನ್ನು ಸಾಧಿಸಿಕೊಂಡಿದ್ದಾನೆ.

ಗಣೇಶ:— ಓಹೊ! ಅದೇನೊ ಗಣರಾಜ್ಯ ಸ್ಥಾಪಿತವಾಗಿದೆಯಂತೆ? ಇದೇ ಏನು?

ನಾರದ:— (ನಕ್ಕು) ಗಣರಾಜ್ಯ? ನಿನಗೆ ಯಾರೊ ತಪ್ಪು ಸುದ್ದಿಯನ್ನು ಕೊಟ್ಟಿದ್ದಾರೆ. ಅಲ್ಲಿ ರೂಢಿಯಲ್ಲಿ ಬಂದದ್ದು ಗಣರಾಜ್ಯವಲ್ಲ, ರಾಜ್ಯಗಳ ಗಣ. ಒಂದೊಂದು ರಾಜ್ಯವೂ ಒಂದೊಂದು ತರವಾಗಿದೆ; ಮಾತು ಬೇರೆ, ರೀತಿ ಬೇರೆ, ದಂಡ ಬೇರೆ, ಶಿಕ್ಷೆ ಬೇರೆ—

ಗಣೇಶ:— ಹಾಗೆಂದರೆ? ಅಲ್ಲ—ಎಂದರೆ—ನನ್ನ ಚತುರ್ಥಿ— ?

ನಾರದ:— ಅದಕ್ಕೆ ನಾರಾಯಣನೆ ಗತಿ!

ಗಣೇಶ:— ಎಂದರೆ?

ನಾರದ:— ಎಂದರೇನು? ವಿನಾಯಕಾ, ನಾರಾಯಣನಿಗೆ ಕೂಡ ಇನ್ನು ಭೂಲೋಕದಲ್ಲಿ ಗತಿ ಇದೆಯೆ ಇಲ್ಲವೆ ಎಂಬುದೆ ಸಂದೇಹ. ಹೀಗಿರುವಾಗ—

ಗಣೇಶ:— (ತುಸು ಗಾಬರಿಯಿಂದ) ಆಂ?

ನಾರದ:— (ತಲೆತೂಗುತ್ತ) ಹಾಂ; ನಾರಾಯಣನಿಗೆ ಕೂಡ ಗತಿ ಇಲ್ಲ ಎಂದೆ. ನೀನು ಯಾವ ರಾಜ್ಯದಲ್ಲಿ ಹೋಗಬೇಕಾದರೂ ನಿನಗೆ ಅಲ್ಲಿಯ ಪಾಸ್ ಬೇಕು.

ಗಣೇಶ:— (ಚಕಿತನಾಗಿ) ಪಾಶ?

ನಾರದ:— (ನಕ್ಕು) "ಪಾಶ" ಅಲ್ಲ, ಪಾಸ್. ಅದಿಲ್ಲದೆ ನಿನ್ನನ್ನು ಒಳಗೆ ಬಿಡುವುದಿಲ್ಲ, ಅಲ್ಲಿ ಇರಗೊಡುವುದಿಲ್ಲ; ಇದಲ್ಲದೆ ನಿನಗೆ ನಿನ್ನದು ರೇಶನ್ ಕಾರ್ಡು ಬೇಕು, ನಿನಗಂತೂ ಸಾಕಾಗುವಷ್ಟು ಆಹಾರಕ್ಕಾಗಿ ಪರ್ಮಿಟ್ ಬೇಕು—

ಗಣೇಶ:— (ಗಾಬರಿಯಾಗಿ) ಋಷಿಕುಲೋತ್ತಮಾ, ಇದೇನು ಒಂದೂ ಅರ್ಥವಾಗುವುದಿಲ್ಲ ನನಗೆ! ನನಗೇನೊ ಭೂಲೋಕ ತುಸು ಬದಲಾಗಿದೆ,

ಕೈಯಿಂದ ದುಡಿಯುವುದಕ್ಕೆಯೆ ಅಲ್ಲಿ ಸನ್ಮಾನವಿದೆ ಎಂದು ಯಾರೊ ಹೇಳಿದರು. ಅದಕಾಗಿ ನಾನು ಸೊಂಡಿಲದ ಅಭ್ಯಾಸವನ್ನು ಬಿಟ್ಟು ಕೈಗಳಿಂದ ಕೆಲಸ ಮಾಡುವದನ್ನು ಸಾಧಿಸಲು ತಪಸ್ಸಿಗೆ ಕುಳಿತೆ—

**ನಾರದ:—** (ಹೊಳೆದು) ಓಹೊ! ಅದಕ್ಕೆಂದೇ ನನಗೆ ಕೈಮುಗಿದು ನಮಸ್ಕರಿಸಿದೆಯಲ್ಲವೆ? ಹಾಗಾದರೆ ನಿನಗೆ ತಪಸ್ಸಿದ್ಧಿಯಾದಂತಾಯಿತಲ್ಲ! ಹಹಹ!

**ಗಣೇಶ:—** (ಸಂಶಯದ ಧ್ವನಿಯಲ್ಲಿ) ಎಂದರೆ- ನಾನು ಭೂಮಿಗೆ ಅವತರಿಸಬಹುದಲ್ಲವೆ?

**ನಾರದ:—** (ತುಸು ಹೊತ್ತು ವಿಚಾರಮಗ್ನನಂತೆ ನಟಿಸಿ) ಹುಂ-. ಹೀಗೆ ಮಾಡು. ಇಂದು ಯಾವುದಕ್ಕೂ ನವಸ್ವರೂಪವನ್ನು ಕೊಡುವ ರೂಢಿಯಾಗಿದೆ ಭೂಲೋಕದಲ್ಲಿ. ನವ- ನವ- ನವ- (ಒಮ್ಮೆಲೆ ಹೊಳೆದು) ಹಾಂ·· ಅದಕ್ಕೆ "ನಿಯೊ" (neo-) ಎನ್ನುವರು! ನೀನು "ನಿಯೊ-ಗಣೇಶ" ನಾಗಿ ಭೂಮಿಗೆ ಅವತರಿಸಿದರೆ ಮಾತ್ರ—

**ಗಣೇಶ:—** (ನಗುತ್ತ) ಹಹ! ಎಂದರೆ ಈಗಿನ ನಿಮ್ಮ ವೇಷ—ನಿಯೊ ನಾರದ ವೇಷ—ಎನ್ನಿರಿ.

**ನಾರದ:—** (ತಲೆತೂಗುತ್ತ) ಚೌಸಷ್ಟಿ ವಿದ್ಯೆಗಳ ವೇತ್ತಾರನಾದ ನಿನಗೆ ಹೇಳುವುದೇನು? ಅದರೆ ಇಷ್ಟೆ, "ನಿಯೊನಾರದ" ಎನ್ನದೆ "ನಿಯೊನಾರದಿಜಂ" ಎಂದರೆ ಎಲ್ಲರೂ ಚಪ್ಪಾಳೆ ತಟ್ಟುವರು.

**ಗಣೇಶ:—** (ಹುಡುಗತನದ ಉತ್ಸಾಹದಿಂದ) ಹಾಗಾದರೆ ನಿಮ್ಮ ಈ ವೇಷ ನಿಯೊನಾರದೀಜಂ!

**ನಾರದ:—** ಹೌದು: ವಿಘ್ನರಾಜಾ, ಈ ವೇಷದಿಂದ ನನ್ನ ಎಲ್ಲ ವಿಘ್ನಗಳೂ ದೂರಾದುವು.

**ಗಣೇಶ:** (ಮೊದಲಿನಂತೆ) ಹಾಗಾದರೆ ನಾನೂ ನಿಯೊವಿನಾಯಕೀಜಂ ಮಾಡುವೆ.

**ನಾರದ:—** ಸರಿ.

**ಗಣೇಶ:—** ಸೊಂಡಿಲವನ್ನು ಸ್ವರ್ಗದಲ್ಲಿಯೆ ಬಿಟ್ಟುಬಿಡುವೆ.

**ನಾರದ:—** ಭಲೆ!

**ಗಣೇಶ:—** ಮರ್ತ್ಯವೇಷದಲ್ಲಿ ಭೂಲೋಕಕ್ಕಿಳಿಯುವೆ.

**ನಾರದ:—** ಭಾಪು!

**ಗಣೇಶ:—** (ತಡೆದು, ಒಮ್ಮೆಲೆ ವಿಷಾದದಿಂದ) ಅದರೆ ನೀವು ಹೇಳುವಂತೆ ಪಾಶ್—ಅಲ್ಲಲ್ಲ, ಪಾಸ್—?

[ಎಂದು ಉಪಾಯಗಾಣದೆ ನಾರದನನ್ನು ಮಿಕಿಮಿಕಿ ನೋಡುವನು]

**ನಾರದ:—** (ಹೆಮ್ಮೆಯನ್ನು ಬೀರುವ ನಗೆಯಿಂದ) ಹಹ! (ಎಂದು ಮುಂದೆ ಮಾತನಾಡದೆ ತಲೆಯನ್ನಲ್ಲಾಡಿಸುವನು. ಗಣೇಶನ ಮುಖವು ಇನ್ನಿಷ್ಟು ಪೆಚ್ಚಾದುದನ್ನು ನೋಡಿ) ನನ್ನ ಮಾತು ಬೇರೆ. ಎಲೈ, ಮೂಷಿಕವಾಹನಾ, ನನಗೆ ನನ್ನದೆಂಬುದು ಇಲ್ಲ, ಆದ್ದರಿಂದ ಎಲ್ಲವೂ ನನ್ನದು. ಇಂತಹ ದೇಶ ನನ್ನದಲ್ಲ, ಆದ್ದರಿಂದ ಎಲ್ಲ ದೇಶಗಳಲ್ಲಿ ಸಂಚರಿಸಬಲ್ಲೆ. ನನಗಾಗಿ ಮಾಡಬೇಕಾದುದು ಯಾವುದಿದೆ? ಆದ್ದರಿಂದ ಮಿಕ್ಕವರಿಗೆ "ಹೀಗೆ ಮಾಡು" ಎಂದು ಹೇಳುವ ಅಧಿಕಾರ ನನಗಿದೆ. ಅಂತೂ ಬೇಕಾದಲ್ಲಿ ನುಗ್ಗಿ ಪಾರಾಗಬಲ್ಲೆ ನಾನು. ಕೆಲವರು ನನಗೆ ಮುನಿಶ್ರೇಷ್ಠ ಎನ್ನುವರು, ಬೇರೆ ಕೆಲವರು ಕಮ್ಯೂನಿಷ್ಟ ಎನ್ನುವರು.

**ಗಣೇಶ:—** (ದೀನನಾಗಿ) ಕಮ್ಯೂ— ಅಲ್ಲ- ಮುನಿಶ್ರೇಷ್ಠಾ, ನನಗೂ ಒಂದು ಉಪಾಯವನ್ನು ಸೂಚಿಸಿಕೊಟ್ಟರೆ ನಾನೂ ಭೂಲೋಕಕ್ಕಿಳಿದು—

[ದೂರದಿಂದ ಶಂಖಸ್ವರ ಕೇಳಬರಲು]

**ಗಣೇಶ:—** (ತಡೆದು) ಏನೆಂದಿರಿ?

**ನಾರದ:—** ಯಾರು? ನಾನು? ನಾನು ಮಾತಾಡಿಯೆ ಇಲ್ಲವಲ್ಲ?

**ಗಣೇಶ:—** (ಬೆರಗಿನಿಂದ) ಅಲ್ಲ- ಏನೊ ಕೇಳಿಸಿದಂತಾಯಿತು—

**ನಾರದ:—** ಓಹೋ! ಅದುವೆ? ಅದು ಭೂಲೋಕದಿಂದ ಏರಿ ಬರುತ್ತಿದ್ದ ಶಂಖನಾದ.

[ಮತ್ತೆ ಶಂಖಸ್ವರ ಕೇಳಬರುವುದು]

**ನಾರದ:—** ಹಾ- ಕೇಳಿದೆಯಾ ಅದನ್ನು?

[ಶಂಖಸ್ವರದೊಡನೆ ಜಾಗಟೆಗಳ ನಿನಾದವೂ ಕೇಳಬರುವುದು]

**ಗಣೇಶ:—** ಏನಿರಬಹುದು? (ಆಶಾಯುಕ್ತನಾಗಿ) ಅಥವಾ·· ನಾಳೆಗಾಗಿ ನನ್ನನ್ನೆ—?

[ಇಷ್ಟರಲ್ಲಿ ಮೇಲಿನ ಸದ್ದಿನ ನಡುನಡುವೆ ಸ್ತವನಪದ್ಯಭಾಗವು ಕೇಳಬರುವದು. ಅದು ಹೀಗಿರುವುದು:—"ಜಯ ರಾಯಾ, ಜಯ ರಾಜಾ, ಗಣ-ಗಣ- ರಾಯಾ। ಮಂಗಳ ಮೂರುತಿ ನಮೋ ರಾಯಾ॥ ನಮೋ ರಾಯಾ ನಮೋ ರಾಯಾ." ಕೊನೆಕೊನೆಗೆ "ಮೋರಯಾ ಮೋರಾಯಾ" ಎಂದಿಷ್ಟೇ ಕೇಳಿಸುವುದು.]

**ಗಣೇಶ:—** (ಉಲ್ಲಸಿತನಾಗಿ) ಅದೊ, ಅದೊ! ಕೇಳಿದಿರಾ, ಮುನಿವರ್ಯರೆ? ಭೂಲೋಕದ ಜನತೆ ನನ್ನನ್ನೆ ಕೂಗಿ ಕೂಗಿ ಕರೆಯುತ್ತಿದೆ.

[ಒಳಗಿನಿಂದ ಮತ್ತೆ ಸ್ತವನ:—

"ಮತ್ತೊಮ್ಮೆ ಬಾರಯ್ಯ ವಿಘ್ನವ ಸರಿಸಿ
ಒತ್ತಿ ಬರುವ ಪಾಪಗಳನು ಸಂಹರಿಸಿ
ಕುತ್ತು-ಕೊರತೆಗಳಿಂದ ಭಕ್ತರುದ್ಧರಿಸಿ
ನಿತ್ಯ ರಕ್ಷಿಸು ಭಾರತ-ಡೆಮೊಕರಸಿ॥
ಜಯ ರಾಯ ಜಯ ರಾಯ, ಗಣ-ಗಣ-ರಾಯಾ।
ಮಂಗಳಮೂರುತಿ ನಮೋ ರಾಯಾ॥"]

**ನಾರದ:—** (ಸದ್ದು ಶಾಂತವಾದ ಮೇಲೆ) ಓಹೊ! ಅದಕ್ಕಾಗಿ ವಿನಾಯಕನಿಗೆ ಮೊರೆ!

**ಗಣೇಶ:—** (ತಿಳಿಯದೆ) ಏನೆಂದಿರಿ? ಯಾವುದಕ್ಕಾಗಿ?

**ನಾರದ:—** (ಶಬ್ದಗಳನ್ನು ನೆನೆಯುತ್ತ) "ಭಾರತ-ಡೆಮೊಕರಸಿ".. ಸರಿ- ವಿನಾಯಕತ್ವದ ಅವತಾರ ಅಗತ್ಯವಿದೆ.

**ಗಣೇಶ:—** (ಅಭಿಮಾನದಿಂದ) ಅಹುದಲ್ಲವೆ? ಮುನಿಪುಂಗವಾ, ಭೂಲೋಕದ ಜನತೆಗೆ ನನ್ನ ಅವತಾರ ಅಗತ್ಯ ಎಂದು ನೀವೂ ಅಭಿಪ್ರಾಯ ಪಡುವಿರಲ್ಲವೆ?

ನಾರದ:— (ತಲೆಯನ್ನಲ್ಲಾಡಿಸುತ್ತ) ಉಹುಂ-ವಿನಾಯುಕನ ಅವತಾರ ವಲ್ಲ, ವಿನಾಯುಕತ್ವದ ಅವತಾರ ಅಗತ್ಯ ಎಂದೆ. ಯಾಕೆಂದರೆ, ಇದು ದೆಮಾಕ್ರಸಿ—

ಗಣೇಶ:— (ಒಮ್ಮೆಲೆ) ಯಾವ ರಕ್ಕಸಿ ?

ನಾರದ:— (ನಕ್ಕು) ಯಾವ ರಕ್ಕಸಿಯೂ ಅಲ್ಲ, ಡೆಮಾಕ್ರಸಿ; ವಿನಾಯ ಕತ್ವವು ಅದರ ಸಸಿ.

ಗಣೇಶ:— (ಒಮ್ಮೆಲೆ ಏನೊ ಹೊಳೆದವನಂತೆ) ಓಹೊ! ಈಗ ತಿಳಿಯಿತು! ನೀವು ಹೇಳುವುದು ಆ ನಯೋ-ಅಲ್ಲ ಆ ನಿವ-ಅಲ್ಲ-ಆ—

ನಾರದ:— ನಿಯೊ—

ಗಣೇಶ:— ಹಾಂ-ಆ ನಿಯೊವಿನಾಯಕ ಎಂಬ ಅಸಮ—

ನಾರದ:— (ನಡುವೆಯೆ) ಅಲ್ಲ-ಇಸಮ—

ಗಣೇಶ:— ಹಾಂ-ನಿಯೋ ವಿನಾಯಕ ಇಸಂ-ಎಂಬುದೆ ವಿನಾಯಕತ್ವ ಅಲ್ಲವೆ ? (ನಾರದನು ತಲೆತೂಗುವನು). ಅಗಲಿ. ಹಾಗಾದರೆ ನಿಯೊ ವಿನಾಯಕ ಇಸಮ ಆಗಿಯೆ ಅವತರಿಸುವೆ. (ಅಧಿಕಾರದಿಂದ) ಎಲೊ, ಯಾರಲ್ಲಿ ?

ನಾರದ:-- (ಚಕಿತನಾದವನಂತೆ) ನಾನು, ನಾರದ. ಯಾಕೆ ?

ಗಣೇಶ:— ಅಲ್ಲಲ್ಲ-ಎಲೊ, ನಾರದರ ಹೊರತು ಯಾರಲ್ಲಿ ? ನನ್ನ ಗಣ ಗಳೆಲ್ಲಿ ? (ಕೇಳಿದಂತೆ ಮಾಡಿ) ಏನೆಂದಿರಿ ? ಅವರೆಲ್ಲ ಈಗಾಗಿಯೆ— ಏನೆಂದಿರಿ ? ಏನಾಗಿ ಹೋಗಿದ್ದಾರೆ ? ಏನು ? "ಇಲೆಕ್ಟ್" ಆಗಿ ? ಅಂದರೆ ? ನನ್ನನ್ನು ಕೇಳದೆಯೆ ಹಾಗಾಗಿ ಹೋದರೆ ? (ವಿಚಾರಿಸಿ) ಓಹೊ! ಇರಬಹುದು. ನನ್ನ ಅವತಾರದ ಪೂರ್ವಸಿದ್ಧತೆಗಾಗಿ ಹೋಗಿರ ಬಹುದು. (ನಾರದನಿಗೆ) ಮುನಿಸತ್ತಮಾ, ನನ್ನನ್ನು ಆಶೀರ್ವದಿಸಿರಿ.

ನಾರದ:— (ಕೈಎತ್ತಿ) ಜಯ ಗಣರಾಯಾ!

[ತೆರೆ]

## ದೃಶ್ಯ ೨

[ಈ ದೃಶ್ಯವು ಹಿಂದಿನ ದೃಶ್ಯದ ಕೊನೆಯಿಂದಲೆ ಮುಂದರಿಸಬೇಕು. ತೆರೆ ಏಳುವ ವರೆಗೆ ನಾರದನು ಉಚ್ಚರಿಸಿದ "ಜಯ ಗಣರಾಯಾ" ಎಂಬ ಶಬ್ದಗಳು ಕ್ರಮೇಣ "ಜಯ ಗಣರಾಯಾ, ಜಯ ಗಣರಾಯಾ। ಜಯಾ, ಜಯ ಜಯ ಗಣಗಣರಾಯಾ ಸಂಗರಹಿತನೆ, ಭವ ಭಂಗಚರಿತನೆ, ಮಂಗಳ ಮೂರುತಿ ನಮೋ ರಾಯಾ" ಎಂದು ಶಂಖ ಜಾಗಟೆಗಳ ಸದ್ದಿನೊಡನೆ ಮೇಳದಲ್ಲಿ ಹಾಡಲ್ಪಡಬೇಕು. ಮುಂದೆ ಕ್ರಮೇಣ ಈ ಸದ್ದು ದೂರ ದೂರ ಹೋದಂತಾಗಿ ಶಾಂತವಾಗ ಬೇಕು. ಆ ಮೇಲೆ ತೆರೆ ಏಳುವುದು. ಇದೀಗ ರಂಗಸ್ಥಲದಲ್ಲಿ ನಾವು ಕಾಣು ವುದು ಭಾರತದ ಬೇಕಾದ ನಗರದಲ್ಲಿಯ ಬೇಕಾದ್ದೊಂದು ಬೀದಿಯ ಭಾಗ. ಒಂದೆರಡು ನಿಮಿಷಗಳಲ್ಲಿ ಗಣೇಶನು ಬರುತ್ತಾನೆ. ಸದ್ಯಕ್ಕೆ ಅವನ ಹೊರತು ರಂಗಸ್ಥಲದಲ್ಲಿ ಬೇರೆ ಯಾರೂ ಇಲ್ಲ. ಗಣೇಶನೂ ನಾರದನಂತೆ ವೇಷವನ್ನು ಬದಲಾಯಿಸಿದ್ದಾನೆ. ಆದರೆ ಶರೀರಸ್ಥಿತಿ— ಅರ್ಥಾತ್ ಬೊಜ್ಜು— ಹಾಗೇ ಇದೆ. ಈಗ ಅವನ ಹಣೆಯಿಂದ ಬೆವರು ಧಾರೆಯಾಗಿ ಸುರಿಯುತ್ತಿದೆ. ಮುಖದಲ್ಲಿ ದಣಿವಿನ ಕಳೆಯೂ ಇದೆ. ಕಣ್ಣುಗಳಲ್ಲಿ ದಿಗ್‌ಭ್ರಾಂತನಾದ ಲಕ್ಷಣ ವಿದೆ. ಬೆವರನ್ನೊರೆಸಿಕೊಳ್ಳಬೇಕೆಂದು ಕೆಳಗೆ ಕೈಯಿಂದ ಪೈಜಾಮಾ ಮುಟ್ಟಿ—]

ಗಣೇಶ:— ಈ ಹಾಳು ವೇಷ ಬೇರೆ! ಪಂಚೆ ಇಲ್ಲವೆ ಧೋತರವನ್ನುಟ್ಟದ್ದರೆ ಬೆವರನ್ನು ಒರೆಸಿಕೊಳ್ಳಲು ಎಷ್ಟು ಅನುಕೂಲ! ಹುಂ- (ದೀರ್ಘವಾದ ಉಸಿರು) ಮಾಡುವುದೇನು? (ತಲೆಯ ಟೊಪ್ಪಿಗೆಯಿಂದ ಮುಖದ ಬೆವರ ನ್ನೊರಸಿಕೊಂಡು) ನಾರದರು ನನ್ನನ್ನು ಮೋಸದಲ್ಲಿ ನೂಕಿದರೆ? ಆಶ್ಚರ್ಯ! ಮಾನವನ ಸ್ವಭಾವವೆ ಬದಲಾಯಿಸಿದೆ! ಒಬ್ಬನಾದರೂ ನನ್ನನ್ನು ಸೌಜನ್ಯದಿಂದ ಮಾತನಾಡಿಸಿರುವನೆ? (ಉಸುರ್ಗರೆದು) ಒಂದಿಷ್ಟು ವಿಶ್ರಾಂತಿಯನ್ನಾದರೂ ಪಡೆಯೋಣ (ಎನ್ನುತ್ತ ಅತ್ತಿತ್ತ ನೋಡಲು-- ಬೀದಿಯ ಬದಿಗೆ ಒಂದು ಬೆಂಚ್ ಇದ್ದುದು ಕಂಡುಬರುವುದು). ಓಹೊ! ಆಸನ! ಬಂದವರನ್ನು ಮನೆಗೆ ಕರೆಯದಿದ್ದರೂ ಬೀದಿಯಲ್ಲಾ ದರೂ ಆಸನ ಇದೆಯಲ್ಲ? (ಎಂದು ಆ ಕಡೆ ಹೊರಟು- ಇದಿರು ನೋಡಿ, ತಡೆದು) ಅಥವಾ ಯಾವನೊ ಒಬ್ಬ ಬರುತ್ತಿದ್ದಾನೆ. ವೇಷದಲ್ಲಿ ಸೌಜನ್ಯ ವಿದೆ, ನಡಿಗೆಯಲ್ಲಿ ಗಾಂಭೀರ್ಯವಿದೆ; ಇವನನ್ನಾದರೂ ಮಾತನಾಡಿಸಿ ನೋಡೋಣ.

[೧ ನೆಯ ನಾಗರಕ ಬರುವನು: ಧೋತರ ಉಟ್ಟದ್ದು, ನೆಹರು ಶರ್ಟು, ಒಂದು "ಭಾರೀ" ಉಪ್ಪರಣಿ, ಕೈಯಲ್ಲಿ ವಾಕಿಂಗ ಸ್ಟಿಕ್ಕು].

ಗಣೇಶ:— ಭೋ— ಮಾನವಾ—

೧ ನೆ ನಾಗರಕ— (ಗಣೇಶನನ್ನು ದಾಟಿದ್ದು, ತಿರುಗಿ ನಿಂತು) Eh? what's that?

ಗಣೇಶ:— (ತಡವರಿಸುತ್ತ) ನಾನು—ಅಂ—ಶ್ರೀಗಣೇಶ.

೧ ನೆ ನಾ.—(ಹರಿತನದ ನಗೆಯಿಂದ) Oh! "Shri Ganesh"! That's right. Every man must prefix " Shri " to his name. That's real equality in the new republic.

ಗಣೇಶ:—(ಮೇಲಿನಂತೆ) ಅಲ್ಲ-ಅಂದರೆ-ನನ್ನ ಜಾಗೆ—

೧ನೆ ನಾ:—You better go to the office and see my head-clerk. He knows if there are any "jaga"s (ಉಚ್ಚಾರ:— "ಜಗಾ)" vacant. (ಹೋಗುವನು.)

ಗಣೇಶ:—(ಅವನನ್ನೆ ನೋಡುತ್ತ) ಅಬ್ಬ! ಏನೋ ಹೇಳಿದನಲ್ಲ? ಚೌಸಷ್ಟಿ ವಿದ್ಯೆಗಳ, ಛಪ್ಪನ್ನ ಭಾಷೆಗಳ ಅಧಿದೇವನಾದ ನನಗೂ ತಿಳಿಯದಂತೆ ಮಾತಾಡಿ ಹೋದನಲ್ಲ? (ಟೊಪ್ಪಿಗೆಯಿಂದ ಗಾಳಿಯನ್ನು ಹಾಕಿಕೊಳ್ಳುತ್ತ) ನಾರದರು ಹೇಳಿದ್ದೇ ನಿಜ. ಇದು ಆ ದಂ-ರಕ್ಕಸಿಯ ಪ್ರಭಾವವೆ ಇರಬೇಕು. (ಮೆಲ್ಲಗೆ ಬೆಂಚಿನ ಕಡೆ ನಡೆದು ಅದರ ಮೇಲೆ ಕೂಡ್ರಬೇಕೆನ್ನುವಷ್ಟರಲ್ಲಿ-"ಏ-ಹಾಂಹಾಂ-ಕೂಡಬ್ಯಾಡ" ಎನ್ನುತ್ತ ಎರಡನೆಯ ನಾಗರಕನು ಬರುವನು. ಆ ದನಿಯನ್ನು ಕೇಳಿ ಗಣೇಶನು ಪೆಚ್ಚಾಗಿ ನಿಲ್ಲುವನು.)

೨ ನೆಯ ನಾಗರಕ:— ಏ, ಯಾರಪಾ ನೀನು? ಪರವೂರಿಂದ ಬಂದ್ಹಾಂಗ ಕಾಣತೀ?

ಗಣೇಶ:— ಅಹುದು, ನಾನು ಇಲ್ಲಿಯವ ಅಲ್ಲ.

೨ನೆ. ನಾ.:— ಎಲ್ಲಿಂದ ಬಂದೆ?

ಗಣೇಶ:— ದೇವಲೋಕದಿಂದ.

೨ ನೆ. ನಾ.:— (ಆಶ್ಚರ್ಯದಿಂದ ಪುಟಿದು) ಏನಂದೆ? ಎಲ್ಲಿಂದ?

ಗಣೇಶ:— ದೇವಲೋಕದಿಂದ.

೨ ನೆ. ನಾ.:— (ಅವನನ್ನು ಪೂರ್ತಿಯಾಗಿ ನೋಡುತ್ತ) ಹುಂ—ಅಲ್ಲಿಂದಲೂ Refugee (ನಿರಾಶ್ರಿತರು) ಬರಲಿಕ್ಕೆ ಹತ್ತಿದರೇನು ನಂ ದೇಶಕ್ಕ? ಹುಂ—ಎಲ್ಲಿಯವನೆ ಇದ್ದೀಯಂತ. ಆದರೆ ಆ ಬೆಂಚಿಗೆ ಹೊಸತಾಗಿ ಬಣ್ಣ ಹಚ್ಚಿದೆ, ಅದಕ್ಕ ಕೂಡಬ್ಯಾಡ ಅಂದೆ.

ಗಣೇಶ:— (ಸಂದರ್ಭ ತಿಳಿಯದೆ) ಹೊಸತಾಗಿ ಬಣ್ಣ—?

೨ ನೆ. ನಾ.:— ಅದಕೇ ಹೇಳಿದೆ ನೀ ಪರವೂರಿಂದ ಬಂದಿರಬೇಕು ಅಂತ. ಯಾಕಂದರ ನಿನ್ನಿನ ದಿವಸ ನಾವು ಈ ಊರೊಳಗ ರಂಗಮಹೋತ್ಸವ ದಿನ ಅಂತ ಆಚರಿಸಿದಿವಿ. ನಾವೇ ಯಾಕ? ಇಡೀ ದೇಶನೆ ಆಚರಿಸಿತು. ಸ್ವತಂತ್ರ ಆದಿವಿ, ಇನ್ನು ಎಲ್ಲಾದರ ಬಣ್ಣ ಬದಲಾಯಿಸಬೇಕು ಅಂತ ಸರಕಾರ ಆಜ್ಞಾ ಹೊರಡಿಸಿತ್ತು.

ಗಣೇಶ:— (ತುಸು ಧೈರ್ಯದಿಂದ) ನಾನು ಯಾರು ಗೊತ್ತಾಗಲಿಲ್ಲವೆ? ನಾನು ಶ್ರೀ ಗಣೇಶ.

೨. ನೆ. ನಾ.:— (ಎಳ್ಳಷ್ಟೂ ಚಕಿತನಾಗದೆ) ನಮ್ಮೂರಿಗೇನು ಚಹಾದ ಅಂಗಡಿ ತಗೀಲಿಕ್ಕೆ ಬಂದೀರೇನು?

ಗಣೇಶ:— (ತಿಳಿಸುವವನಂತೆ) ಹಾಗಲ್ಲ—ಈ ಹೊತ್ತು ನನಗೆ ಭೋಜನ ಆಗ್ಬೇಕು, ನೈವೇದ್ಯ ಆಗಬೇಕು.

೨ ನೆ. ನಾ.:— (ನಕ್ಕು) ನಿನಗೊಬ್ಬಗೇ ಯಾಕ? ಎಲ್ಲಾರಿಗೂ ಆಗ್ಬೇಕಾದದ್ದೇ ಅದು. ನಿಮಗ ಯಾವ ಹೊಟೆಲ್ ಬೇಕಾಗಾದೇನು ಊಟ ಮಾಡ್ಲಿಕ್ಕೆ?

ಗಣೇಶ:— (ತುಸು ಹಟದಿಂದ) ಅದಲ್ಲ—ಮನೆಯಲ್ಲಿ.

೨ ನೆ. ನಾ.:— (ನಡುವೆಯೆ) ಅಬ್ಬ! ಮನೆಯ ಊಟನೆ ಆಗ್ಬೇಕೇನು

ನಿನಗೆ? ಹಹ! ಸ್ವರ್ಗದೊಳಗೆ ರೇಶನ್ ಇಲ್ಲ ಕಾಣ್ತದ! (ಎನ್ನುತ್ತ ಅವನನ್ನು ಮತ್ತೊಮ್ಮೆ ದಿಟ್ಟಿಸಿ ನೋಡುವನು).

ಗಣೇಶ:— (ಹತಾಶನಾಗಿ) ನಿಮ್ಮ ಮಾತಿನ ಅರ್ಥವೆ ಆಗುವದಿಲ್ಲವಲ್ಲ?

೨ ನೆ. ನಾ.:— ಹಿಂಗೇನು ? ಮೊದಲೇ ಹೇಳ್ಬೇಕಾಗಿತ್ತು ? ನಾಯೆಲ್ಲಿ ಮಾತಾಡತಾ ನಿಲ್ಲತಿದ್ದೆ? ಜೈ ಹಿಂದ. (ಹೋಗುವನು).

ಗಣೇಶ:— (ಅವನು ಹೋದತ್ತ ನೋಡುತ್ತ) ಹೊಟೆಲ್! ರೇಶನ್! ಬಣ್ಣ ಬದಲಾಯಿಸಿದ್ದೇನು ಸುಳ್ಳಲ್ಲ.

೩ ನೆ. ನಾ:— (ಬಂದು) ಹೆಲೋ ಎನ್ನಲು ಗಣೇಶನು ತಿರುಗಿ ನಿಂತು ಅವನನ್ನು ನೋಡುವನು. ಜಾಂಬಳಿ ಬಣ್ಣದ ಪ್ಯಾಂಟು, ನೀಲೀ ಬಣ್ಣದ ಅರ್ಧ ತೋಳಿನ ಬುಶ್ ಕೋಟು, ತಲೆಗೆ ಬಿಳಿಯ ಗಾಂಧಿ ಟೋಪಿ, ಕಾಲಲ್ಲಿ ಪಠಾಣೀ ಸ್ಯಾಂಡಲ್ಸ. ಇಂತಹ ವ್ಯಕ್ತಿಯನ್ನು ನೋಡಿ ಗಣೇಶನು--ಒಮ್ಮೆ ತನ್ನ ವೇಷ, ಒಮ್ಮೆ ಆ ವ್ಯಕ್ತಿಯ ವೇಷ--ನೋಡುತ್ತ ನಿಲ್ಲುವನು). ಯಾಕ? ಹೀಂಗ್ಯಾಕ ನೋಡ್ತೀರಿ ನನ್ನ?

ಗಣೇಶ:— ಅಲ್ಲ--ಈಗ ಒಬ್ಬರು ಹೇಳಿದರು--ಅದಕಾಗಿ ವಿಚಾರ ಬಂದಿತು-ನಿನ್ನೆ ನೀವು ಉಟ್ಟ ವಸ್ತ್ರಗಳ ಬಣ್ಣವನ್ನೂ ಬದಲಾಯಿಸಿದರೇನು ಎಂದು?

೩ ನೆ. ನಾ:— (ಗಣೇಶನನ್ನು ದಿಟ್ಟಿಸಿ, ಹುಸಿನಗೆಯಿಂದ) ಕ್ಷಮಿಸಬೇಕು, ರಾಯ್ರು. ಈಗ ನೀವು ಇಷ್ಟು ತಿದ್ದಿ ಆದ್ರೂ ಇಷ್ಟು ಸಹಜ ಮಾತಾಡಿದ ಮ್ಯಾಲೆ ಹೊಳೀತು ನನ್ಗ. ಮ್ಯಾಲೆ ಈ ನಿಂ ವೇಷ, ಇಂಥಾ ಆಕೃತಿ. ಅದ್ದರಿಂದ ನೀವು ದೊಡ್ಡ ಮುಂದಾಳು ಆಗಿರಬೇಕು.

ಗಣೇಶ:— (ತಿಳಿಯದೆ) ಛೆ-ಛೆ- ಹಾಗಲ್ಲ, ನಾನು—

೩ ನೆ. ನಾ:— (ನಡುವೆಯೆ) ಇರ್ಲಿ, ರಾಯ್ರು, ಕ್ಷಮಿಸಬೇಕು ಅಂದೆನಲ್ಲ? Please excuse me, ಅಂ? ಮಾಡಬೇಕೇನು ಹೇಳ್ರಿ. ನಿಮ್ಮಂಥೋರ ಕೃಪಾದೃಷ್ಟಿ ಇದ್ದರೇನೇ ನಾವು ಹಾದಿಗೆ ಹತ್ತೋದು. ಹೌದಂತೀರೊ ಇಲ್ಲೊ? ನಾನು ಬೇಕಾದ ಕೆಲಸಕ್ಕ ತಯಾರಿದ್ದೀನಿ; ಇಂಗ್ಲೀಶ ಬರ್ತದ, ಹಿಂದೀ ತಿಳೀತದ, ಕನ್ನಡ ಅಂತೂ ಆಯ್ತೇ ಆಯ್ತಲ್ಲ? ಇನ್ನು ಯಾವ ಭಾಷಾ ಆದ್ರೂ ಅವಶ್ಯ ಬಿದ್ದರ ಎರಡು ತಿಂಗಳದಾಗ ಕಲೀತೀನಿ. ಮ್ಯಾಲೆ, ಮಾತು ಕಡಮೆ ನನ್ಗ. ಮನುಷ್ಯ ಅಂದಮ್ಯಾಲೆ ಹೆಚ್ಚು-ಕಡಮೆ ಆಗೋದೆ. ಅಲ್ಲೇನ್ರಿ? ಆದ್ರೆ ನಿಂ ಎಲ್ಲಾ ರಹಸ್ಯ ನನ್ನ ಕೂಡೇ ಸುಟ್ಟು ಹೋಗ್ತಾವ ಅನ್ನೋ ಗ್ಯಾರಂಟೀ ಕೊಡ್ತೀನಿ.

ಗಣೇಶ:— (ಸೆಚ್ಚಾಗಿ) ನೀವು ಅನ್ನೋದಾದ್ರೂ ಏನು ?

೩ ನೆ. ನಾ:— ( ಹುಸಿನಗೆಯಿಂದ ) ನನಗೊಂದು ನೋಕರಿ ಕೊಡಿಸಿದರೆ ಬಹಾಳ—

ಗಣೇಶ:— (ಚಕಿತನಾಗಿ) ಏನಂದಿರಿ ?

೩ ನೆ. ನಾ— (ತಡವರಿಸುತ್ತ) ಬೇಕಾದ್ರ ನಿಮ್ಮದೆ ಸೆಕ್ರೆಟರಿ ಅಂತ ಇಟ್ಟ-ಗೊಂಡು ಬಿಡ್ರಿ. ನಿಂ ಕಡೆ ಬಂದುಹೋಗೋ ಜನಾ ಬಹಳಿದ್ದಿರಬೇಕು. ಅವರಿಂದ-- ಅಲ್ಲ, ಅಂದ್ರ-- ಅವರಿಂದ ನಿಮಗ ತ್ರಾಸ ಕಡಮೆ, ನನಗ ಜವಾಬ್ದಾರಿ ಹೆಚ್ಚು ಆಗೋ ಹಾಂಗ ನೋಡಿಕೋತೀನಿ.

ಗಣೇಶ:— (ಹಣೆಗೆ ಕೈಯಿಟ್ಟು) ಆಶ್ಚರ್ಯ !

೩ ನೆ. ನಾ:— ಅಲ್ಲ-- ಕಡೆಗೆ ನಿಂ ಬದಲೀ ಕೆಲವು ಕಮೀಟಿ ಮೀಟಂಗಿಗೆ ಕಳಿಸಿಕೊಡ್ರಿ, ಯಾಕಂದ್ರ ನೀವು ಎಲ್ಲಾ ಕಡೆ ಮೆಂಬರ ಇದ್ದಿರಬೇಕು—

ಗಣೇಶ:— (ಹಟದ ಧ್ವನಿಯಲ್ಲಿ) ನಾನು ಇಲ್ಲಿಯವ ಅಲ್ಲ.

೩ನೆ. ನಾ:— ಹಾಗಿದ್ರ ಇಲ್ಲಿಯವರೀಗ್ಯಾರಿಗಾದ್ರೂ ಒಂದು ಚೀಟಿ ಕೊಟ್ಟರ-

ಗಣೇಶ:— (ದನಿಯಲ್ಲಿ ಹಟ ಹೆಚ್ಚಾಗುತ್ತ) ನಾನು ದೇವಲೋಕದಿಂದ ಬಂದವ.

೩ ನೆ. ನಾ:— ಅಲ್ಲ-ಅಂದ್ರ- (ಒಮ್ಮೆಲೆ ಹೊಳೆದು, ಒಂದು ಹೆಜ್ಜೆ ಹಿಂದೆ ಸರಿದು, ದಿಟ್ಟಿಸುತ್ತ) ಏನಂದ್ರಿ ?

ಗಣೇಶ:— (ಮೇಲಿನಂತೆ) ನಾನು ದೇವಲೋಕದಿಂದ ಬಂದವ.

೩ ನೆ. ನಾ:— (ಹುಸಿನಗೆಯಿಂದ) ತಿಳೀತು ಬಿಡ್ರಿ. ನಿಂ ಹೊರ್ತು ನಡೆಯೋದಿಲ್ಲ ಅಂತ ಮತ್ತೆ ನಿಮ್ಮನ್ನ ತಿರುಗಿ ಕರೆಸಿರಬೇಕು. ಹಹ! ಅಂತೂ ದೇವಲೋಕವನ್ನು ತ್ಯಾಗಮಾಡಿ ಬಂದಿರಲ್ಲ ? ಇದರ್ಮುಂದ ಇನ್ನು ಎಂಥಾ ತ್ಯಾಗ! ಜನ್ಮಜನ್ಮಾಂತರ ಗುತ್ತಿಗೆ ಅನ್ನಿರಿನ್ನು.

ಗಣೇಶ:— (ಹೆಚ್ಚಾದ ಹಟದಿಂದ) ನಾನು ದೇವಲೋಕದಿಂದ ಬಂದವ!

೩ ನೆ. ನಾ:— (ತುಸು ಹೆದರಿ ಹಿಂದೆ ಸರಿಯುತ್ತ, ತನ್ನಷ್ಟಕ್ಕೆ) ಸಾಯೋತನಕ ಚಾನ್ಸ ಹತ್ತಲಿಲ್ಲ ಅಂದ್ರ ನಮ್ದೂ ಇದೇ ಸ್ಥಿತಿಯಾಗ್ತದೊ ಏನ್ಮಣ್ಣೊ!

ಗಣೇಶ:— (ಹಟ ತಡೆಯದೆ) ನಾನು ದೇವಲೋಕದಿಂದ ಬಂದವ, ಇಲ್ಲಿ ಜಾಗೆಯನ್ನು ಹುಡುಕುತ್ತಿದ್ದೇನೆ.

೩ ನೆ. ನಾ:— (ಬೆರಗಾಗಿ) ಏನಂದ್ರಿ ? ಏನು ಹುಡುಕ್ತೀರಿ ?

ಗಣೇಶ:— (ಮೇಲಿನಂತೆ) ನನಗಾಗಿ ಕಾದಿರಿಸಿದ ಜಾಗೆಯನ್ನು ಹುಡುಕುತ್ತಿದ್ದೇನೆ. ತಿಳಿಯಿತೆ ?

೩ ನೆ. ನಾ:— (ಉಸಿರೆಳೆದು) ಹುಂ—ತಿಳೀತು ಬಿಡ್ರಿ. "ಹುಡುಕುತ್ತಿದ್ದೇನೆ" ಮುಖ್ಯ ಕ್ರಿಯಾಪದ; "ಜಾಗೆಯನ್ನು" ನನ್ನ ಕರ್ಮ; "ನನಗಾಗಿ" ಸ್ವಾರ್ಥವಾಚಕ ಕ್ರಿಯಾವಿಶೇಷಣ; "ಕಾದಿರಿಸಿದ", ವಶೀಲೀ ವಾಚಕ ವಿಶೇಷಣ. ಹಂ! ತಿಳೀತೇನು ಅಂತ ? ದೇಶದಾಗ ನಾವೇ ತಿರುಗಾಡ್ತೀವಿ ನೋಕರಿ ಇಲ್ದೆ, ಇನ್ನು ಇವನ ಸಲುವಾಗಿ ಕಾದಿರಿಸಿದ್ದು ಅಂತ! ಅಬ್ಬ! ಮ್ಯಾಲೆ "ದೇವಲೋಕ" ದಿಂದ ಬಂದವ ಅಂತ! ಯಾವ ದೇವರ ಚೀಟಿ ತಂದೀದಿ ವಶೀಲಿ ಹಚ್ಚಲಿಕ್ಕೆ ?

ಗಣೇಶ:— (ತಲೆ ಹಿಡಿದುಕೊಂಡು) ಥೂ! ಯಾರಿಗೂ ನನ್ನ ಮಾತಿನ ಅರ್ಥವೇ ಆಗುವುದಿಲ್ಲ.

೩ ನೆ. ನಾ.:— (ಅಣಕಿನ ದನಿಯಲ್ಲಿ) ಹ್ಯಾಂಗ ಆದೀತಪ ಅರ್ಥ? ಹೀಂಗ ಹೊರಗಿನವರು ಬಂದು ನೋಕರಿ ಹೊಡೆದುಕೊಂಡು ಹೋಗೋದಾದ್ರ, ನಾ ಹೇಳ್ತೀನಿ ಕೇಳು, ಅನರ್ಥ—ಪೂರಾ ಅನರ್ಥ ಆಗೋದು ಮಾತ್ರ ಖಾತ್ರಿ. ನೀ ಹೇಳೋದು ಖರೆ ಇದ್ದರ, ಮೊದಲು ನಮ್ಮೂರ ಬಿಡು.

ಗಣೇಶ:— ಅಲ್ಲ— ನಾನು ಸಾಕ್ಷಾತ್ ಶ್ರೀಗಣೇಶ.

೩ ನೆ. ನಾ.:— (ನಡುವೆಯೆ) ನಾನೂ ಅದೇ ಹೇಳ್ತೀನಿ. ನಮಗ ಹೆದರಿಕೆ ಇದ್ದದ್ದು ಈ ಶ್ರೀಗಣೇಶದ ಮಟ್ಟಿನವರದೆ. ಒಂದು ಮಾತಿನಾಗ ಹೇಳ್ತೀನಿ, ನಾನು ಇನ್ನೊಮ್ಮೆ ಈ ಹಾದಿಗೆ ಹಾಯೋದರಾಗ ನೀನು ಈ ಊರನ್ನ ಬಿಟ್ಟಿರಬೇಕು ನೋಡು. (ಎನ್ನುತ್ತ ಹೊರಡುವನು).

ಗಣೇಶ:— ಎಲೈ- (ಒಮ್ಮೆಲೆ ಹೊಳೆದು, ತನ್ನಷ್ಟಕ್ಕೆ) ಹಾಂ- ಹೀಗೆ ಮಾಡುವೆ. (೩ ನೆ. ನಾ. ನಿಗೆ) ನಾನು ನಿಯೊ-ಗಣೇಶ.

೩ ನೆ. ನಾ.:— (ತಡೆದು, ಒಮ್ಮೆಲೆ ತಿರುಗಿ ನಿಂತು) ನಿಯೊ? ಹಿಡಿ ನಿನ್ನ ಮನಿಯೊ! (ಹೋಗುವನು.)

[ಗಣೇಶನು ಅತ್ತಿತ್ತ ತಿರುಗಾಡುತ್ತ ಸುತ್ತಲು ನೋಡುತ್ತ]

ಗಣೇಶ:— ಏನಿದು ಆಶ್ಚರ್ಯ? (ಹಿಂದಿನಿಂದ ಸುತ್ತಲಿನಿಂದಲೂ "ಗಣಪತಿ ಗಣಪತಿ-ಮೋರಾಯಾ" ಎಂಬ ಕೂಗು ಜಾಗಟೆಗಳ ಸದ್ದು ಕೇಳ ಬರುವುದು. ಅದನ್ನು ಕೇಳಿ, ಸುತ್ತಲು ನೋಡುತ್ತ) ಮೂರ್ಖ ಮಾನವರು! ಸಾಕ್ಷಾತ್ತಾಗಿ ಬಂದ ನನ್ನನ್ನು ಕಡೆಗಣಿಸಿ ನನ್ನ ಗೊಂಬೆಯನ್ನು ಸತ್ಕರಿಸುತ್ತಿದ್ದಾರೆ! ಮೂರ್ಖರು! [ಒಮ್ಮೆಲೆ ಒಳಗಿನಿಂದ "ನವಜವಾನ ಝಿಂದಾಬಾದ" ಎಂಬ ಅಸಂಖ್ಯ ಜನರ ಕೂಗು ಕೇಳಬರುವುದು. ಚಕಿತನಾಗಿ] ಎಲ; ಇದೇನಿದು ಗಲಾಟೆ? ಇಲ್ಲಿ ಸಾಕ್ಷಾತ್ತಾಗಿ ನಿಂತ ನನ್ನನ್ನು ಮಾತನಾಡಿಸಲು ಒಂದು ಹುಳು ಕೂಡ ಇಲ್ಲ, ಆದರೆ ನನ್ನ ಗೊಂಬೆಯ ಸತ್ಕಾರಕ್ಕಾಗಿ ಪ್ರಚಂಡ ಮೆರವಣಿಗೆ. [ "ನವಜವಾನ ಝಿಂದಾಬಾದ", "ಹಿಂದುಸ್ತಾನ ಹಿಂದೀಯರಿಗೆ", "ಕರ್ನಾಟಕ ಕನ್ನಡಿಗರಿಗೆ", "ಹೊರಗಿನವರನ್ನು ಹೊರದೂಡಿರಿ", "ಚಂದ್ರಲೋಕದವರಿಗೆ ಅರ್ಧಚಂದ್ರ" ಮುಂತಾಗಿ ಜನರು ಆವೇಶದಿಂದ ಘೋಷಿಸುತ್ತಿರುವ ಕೂಗುಗಳು ಕೇಳಬರುವುವು.] ಏನಿದು? ನಾರದರು ಹೇಳಿದ ಪಾಸ್-ಅಲ್ಲಲ್ಲ-ಪಾಸ್ ನನ್ನ ಹತ್ತಿರ ಇಲ್ಲವಲ್ಲ?

[ಇಷ್ಟರಲ್ಲಿ ಎರಡನೆಯ ನಾಗರಕನು ಧಾವಿಸುತ್ತ ಬರುವನು. ಗಣೇಶನನ್ನು ನೋಡಿ ತಡೆಯುವನು.]

೨ ನೆ. ನಾ:— ಏ- ಯಾರು- (ನೋಡಿ) ಇಲ್ಲೇ ಓಹೋ! ನಿಂತೀದೆಯಾ? ಓಡು, ಲಗೂ ಓಡು.

ಗಣೇಶ:— ನಾನು ಶ್ರೀ ಗಣೇಶ, ದೇವಲೋಕದಿಂದ-

೨ ನೆ. ನಾ:— (ನಡುವೆಯೆ) ಹಾಳಾಯ್ತು ದೇವಲೋಕ! ಇಲ್ಲಿಯುವ ಅಲ್ಲ ಅಂದ್ರ ಮೊದಲು ಓಡಿಹೋಗು.

ಗಣೇಶ:— ನಾನು ಇಲ್ಲಿಯುವನೆ.

೨ ನೆ. ನಾ:— Domicile certificate (ಡೊಮಿಸೈಲ್ ಸರ್ಟಿಫಿಕೀಟ್) ಅದ ಏನು? ಇಲ್ಲೇ ಹುಟ್ಟದವ ಏನು ?

ಗಣೇಶ:— ನಾನು ಹುಟ್ಟದ್ದು ಸ್ವರ್ಗಲೋಕದಲ್ಲಿ.

೨ ನೆ. ನಾ:— ಹಾಂಗಿದ್ದರ ಅಲ್ಲಿ ಹೋಗೋದು ಖಂಡಿತ.

ಗಣೇಶ:— (ತಿಳಿಸಿ ಹೇಳುವ ಹಟದಿಂದ) ನಾನು ಸಾಕ್ಷಾತ್ ಶ್ರೀಗಣೇಶ. ಇಂದು ನನ್ನ ಚತುರ್ಥಿ. ಮನೆಮನೆಯಲ್ಲಿ ನನಗೆ ಪಕ್ವಾನ್ನದ ನೈವೇದ್ಯ ದೊರೆಯುವುದು. (ಒಮ್ಮೆಲೆ ಒಳಗೆ ಫಟ್-ಫಟ್ ಎಂದು ಒಂದೇ ಸವನೆ ಸದ್ದಾಗುವುದು.) ನೋಡಿದೆಯಾ? ಕೇಳಿದೆಯಾ? ನನ್ನ ಸತ್ಕಾರಕ್ಕಾಗಿ ಪಟಾಕ್ಷಿಗಳನ್ನು ಹಾರಿಸುತ್ತಿದ್ದಾರೆ ಜನರು !

೨ ನೆ. ನಾ:— ( ತುಸು ದೂರ ನೋಡಿ ) ಪಟಾಕ್ಷಿಯಲ್ಲ, ಮೆರವಣಿಗೆಯ ಮೇಲೆ ಗುಂಡು ಹಾರಿಸುತ್ತಿದ್ದಾರೆ ಪೋಲೀಸರು! ಹುಂ- ಓಡುವುದು ಶಕ್ಯವಿದ್ದರೆ ಓಡು- ಅಥವಾ-ಸ್ವರ್ಗವೇ ನಿನ್ನ ಜನ್ಮಭೂಮಿಯೆಂದೆಯಲ್ಲ? ಹಾಗಿದ್ರ ನಿನಗೇನು ಹೊಸತಲ್ಲ- ನಾ ಮಾತ್ರ- (ಎನ್ನುತ್ತ ಅವಸರದಿಂದ ಓಡಿ ಹೋಗುವನು).

ಗಣೇಶ:— (ದಿಗ್‌ಭ್ರಾಂತನಾಗಿ) ಏನಿದು? ಪೋಲೀಸರು? ಗುಂಡು ?

[ಒಳಗೆ ಮತ್ತೆ ಫಟ್—ಫಟ್ ಸದ್ದು]

ಗಣೇಶ:— (ಉಸಿರೆಳೆದು) ಹುಂ ಗಣರಾಜ್ಯವಲ್ಲ—

[ಒಳಗೆ ಅಗ್ನಿನಾಶಕ ವಾಹನದ ಗಣ—ಗಣ ಸದ್ದು]

ಗಣೇಶ:— ಗಣರಾಜ್ಯವಲ್ಲ- ಗಣ-ಗಣ-ರಾಜ್ಯ. ಸಾಕ್ಷಾತ್ತನ್ನು ಬಿಟ್ಟು ಗೊಂಬೆಯ ಮುಂದೆ ಗಣ-ಗಣ ಗಂಟೆ ಬಾರಿಸುವ ರಾಜ್ಯ-. ಅಥವಾ- ಗಣ-ಗಣಗಳು ತಂತಮ್ಮೊಳಗೆ ಘರ್ಷಣೆ ನಡೆಸಿದ ರಾಜ್ಯ. ಹುಂ... ಆ ಘರ್ಷಣೆಯಿಂದ ಹುಟ್ಟದ ಬೆಂಕಿಯುನ್ನು ನಂದಿಸುವ ಯಂತ್ರವಿದೆಯೆ?

[ತೆರೆಯಲ್ಲಿ "ನಾರಾಯಣ, ನಾರಾಯಣ" ಎಂಬ ನಾರದರ ದನಿಯನ್ನು ಕೇಳಿ ಗಣೇಶನು ಮುಗುಳ್ನಗೆಯ ಮುಖದಿಂದ ಮೇಲೆ ನೋಡುತ್ತ ನಿಂತಾಗ ಮತ್ತೆ ಫಟ್-ಫಟ್ ಸದು — ಅದೇ ತಾಳಕ್ಕೆ.]

[ತೆರೆ]

[ಮುಗಿದುದು]

## ಜೀವನದ ಪರಿ

ಜೀವನದ ಪರಿ ಏನಿದೈ
ಚಣಕೊಂದು ಬಗೆಯಾಗಿಲ್ಲವೆ?
ಬೇವುಜೇನಿನ ಹಾಲುಹೆಂಡದ
ಸರಿಬೆರಕೆ ತಾನಲ್ಲವೆ?
ಬೇವನರಗಿಸಿ ಜೇನ ಸವಿಯುತ
ಹಾಲನೇ ಪಡೆದುಂಬೆಯಾ?
ಜೀವನದ ಏರಾಟದಲಿ ನನ-
ಗಿಂಥ ಕೆಚ್ಚೇನೆಂಬೆಯಾ?

—ದಲಕೆ



# ಹೃದಯ ಸ್ಪಂದನ

ಲೇಖಕರು: ವರಗಿರಿ ಮಾರ್ತಾಂಡರಾಯರು



೧

ಬೆಳ್ಳಿಯ ಚಿಕ್ಕಿ ಮೊದಲು ಮೂಡಿತ್ತೋ, ತಳವಾರ ಹನುಮ ಮೊದಲು ಎದ್ದಿದ್ದನೋ ಹೇಳುವದು ಕಠಿಣ. ಆದರೆ, ಬೆಳ್ಳಿ ಮೂಡದಿದ್ದರೂ ಹನುಮ ಆ ವೇಳೆಗೆ ಸರಿಯಾಗಿ ಏಳುತ್ತಿದ್ದುದು ಇದೊಂದೇ ದಿನವಲ್ಲ. ಅದು ಆತನ ನಿತ್ಯಕ್ರಮ.

ಹನುಮ ತೋಟದ ಮೂಲೆಯೊಂದರಲ್ಲಿ ನಟ್ಟು ಕಡಿಯುತಲಿದ್ದ. ಇಡಿಯ ತೋಟವೆಲ್ಲ-ಎಲೆ-ಬಳ್ಳಿಗಳನ್ನು ಸುತ್ತಿಕೊಂಡು ಮುಗಿಲ ವರೆಗೆ ಬೆಳೆದು ನಿಂತ ನುಗ್ಗಿಯ ಸಾಲುಗಳ ವರೆಗೂ-ಆಗಲೇ ಮಣ್ಣಿನ ಹೆಂಟೆಗಳನ್ನು ಅಳವಡಿಸಿ ಇಟ್ಟಂತೆ ಆಗಿತ್ತು. ಇನ್ನು ನಾಲ್ಕಾರು ಮೊಳ ಕಡಿದುಬಿಟ್ಟರೆ ಆಯಿತು. ಅಂತೆಯೇ ಹನುಮ ಹಿಗ್ಗಿನಲ್ಲಿದ್ದ. ಮೈ-ಮುರಿಯೆ ದುಡಿಯುತಲಿದ್ದ. ಆತನ ಬರಿಯ, ಕರಿಯ ಮೈ ಆ ನಸುಕಿನ ತಂಪಿನಲ್ಲಿಯೂ ಬೆವರೊಡೆದಿತ್ತು. ಬೆಳ್ಳಿಯ ಚಿಕ್ಕಿ ಸಾಕಷ್ಟು ತೇಜಃಪುಂಜವಾಗಿದ್ದರೆ, ಬೆವರಿನ ಪ್ರತಿಯೊಂದು ಹನಿಯೂ ಒಂದೊಂದು ಚಿಕ್ಕಿಯಂತೆಯೇ ಕಾಣಬಹುದಿತ್ತು. ಆತನ ನೀಳವಾದ ದೇಹ, ಹುರಿಕಟ್ಟಾದ ತೋಳು ಆ ಬಿರುಸು ನೆಲವನ್ನು ಹದನಗೊಳಿಸುವದರಲ್ಲಿ ಲೀನವಾಗಿದ್ದರೆ, ಆ ನಿರ್ಜನ ಪ್ರದೇಶದಲ್ಲಿ, ಆ ತಂಪಾದ ಪ್ರಶಾಂತ ವಾತಾವರಣದಲ್ಲಿ, ಆ ಬೆಳ್ಳಿಯ ಚಿಕ್ಕಿಯ ಮಂದವಾದ ಬೆಳ್ದಿಂಗಳಿನಲ್ಲಿ, ಅದೇ ತಾನೆ ಒಂದೊಂದಾಗಿ ಮಾಯವಾಗುತಲಿದ್ದ ಆ ನಕ್ಷತ್ರ-ಗಳ ಹಂದರದಲ್ಲಿ, ಆತನ ಮನಸ್ಸು ಗಾಳಿಗಿಂತ ಹಗುರಾಗಿ, ಅಂತರ್ಮುಖಿಯಾಗಿ ಅಲೆದಾಡಹತ್ತಿದ್ದಿತು:

...ಜೋಯಿಸರ ಭಾಗಮ್ಮನವರಿಂದ ಆ ತೋಟವನ್ನು ಲಾವಣಿ ಹಿಡಿದಂದಿನಿಂದ ಇಂದಿನ ವರೆಗೆ ಈ ಇಪ್ಪತ್ತು ವರ್ಷಗಳ ಅವಧಿಯಲ್ಲಿ - ಅಂದಿನ ಆ ಕಗ್ಗು ನೆಲವನ್ನು ಇಂದಿನ ಈ ಮಲನುಲಿಸುವ ತೋಟವನ್ನಾಗಿ ಪರಿವರ್ತಿಸಿದ್ದ. ಅದೆಂತಹ ದೀರ್ಘಾವಧಿ! ಅದೆಂತಹ ದುಡಿತ! ಅಂತೆಯೇ ಆ ಒಣಮಣ್ಣು ನಯವಾಗಿ, ಮಿದುವಾಗಿ, ಗೊಬ್ಬರಗೂಡಿ, ನೀರುಣಲಿಲ್ಲವೇ? ಅದೇ ಬಂಜೆ ನೆಲ ನಾನಾಬಗೆಯ ಸಸಿಯಾಗಿ ಚಿಗುರಿ, ಬೆಳೆದು, ಬಲಿದು, ಹಚ್ಚಹಸಿರಾಗಲಿಲ್ಲವೇ? ಹೂತು, ಕಾತು, ಫಲವನ್ನು ಕೊಡಲಿಲ್ಲವೇ? ಗಡ್ಡೆ-ಗೆಣಸುಗಳನ್ನು ಸೂರೆ ಮಾಡಲಿಲ್ಲವೇ? ಎಲೆ-ಬಳ್ಳಿ, ಕಾಯಿ-ಪಲ್ಲೆಗಳನ್ನು ತೂರಲಿಲ್ಲವೇ?

...ಅಂದಿನ ಆ ಬಡತನದ ಸ್ಥಿತಿಯೆಲ್ಲಿ, ಮುಂದಿಯ ಕಣ್ಣಲ್ಲಿ ಒತ್ತುವ ಸುಖಮಯವಾದ ಇಂದಿನ ಸ್ಥಿತಿಯೆಲ್ಲಿ? ತಂದೆ - ತಾಯಿಗಳನ್ನು ಕಳೆದುಕೊಂಡು ಅನಾಥನಾಗಿ ಹಗಲು ಹನ್ನೆರಡು ತಾಸೂ ವರ್ಷಾನುಗಟ್ಟಲೆ ಜಂಗಳಿದನ ಕಾಯ್ದರೂ ಹೊಟ್ಟೆತುಂಬ ರೊಟ್ಟಿ ಸಿಕ್ಕುತಿರಲಿಲ್ಲ, ಮರ್ಯಾದೆ ಮುಚ್ಚುವಷ್ಟು ಬಟ್ಟೆ ಸಿಕ್ಕುತಿರಲಿಲ್ಲ. ಈಗ ತನ್ನನ್ನು ಹಿಡಿದವರಾರು? ಈ ತೋಟ ಕೈಯಲ್ಲಿರುವ ವರೆಗೆ ತಿಂದುತೇಗಿದರೂ ಹೆಚ್ಚಾಗುವಷ್ಟು ಅನ್ನವಿದೆ. ಕೈಯಲ್ಲಿ ದುಡ್ಡಿಲ್ಲದಿದ್ದರೇನಾಯಿತು? ಆನೆಯಂಥ ಜೋಡು ಎತ್ತುಗಳಿವೆಯಲ್ಲ! ರಂಟೆ ಕುಂಟೆ ಚಕ್ಕಡಿಗಳಿವೆಯಲ್ಲ! ಎರಡು ನೂರು ಕುರಿಗಳೂ ಆಡು-ಟಗರುಗಳೂ ಇವೆಯಲ್ಲ! ತನಗಿನ್ನೂ ಮೂವತ್ತೆಂಟು ವರುಷ. ಹತ್ತು ವರುಷದ ಮಗನಿದ್ದಾನೆ. ವಯಸ್ಸು ಮಾಗುವ ವರೆಗೂ ದುಡಿಯಬಲ್ಲ. ಆ ಮೇಲೆ ತೋಟ ಕೈಬಿಟ್ಟರೇನು? ಶಕ್ತಿ ಕುಂದಿದರೇನು? ಜೋಪಾನ ಮಾಡಲು, ಮನೆತನದ ದೀಪ ನಂದದಂತೆ ನೋಡಿಕೊಂಡು ಹೋಗಲು, ಮಗ ಇರುವನಲ್ಲ?

...ದಿನಗಳು ಎಷ್ಟು ಬೇಗನೆ ಉರುಳಿದವು! ಸಣ್ಣ ಮಗನನ್ನು ಬಿಟ್ಟು ಗಂಗೆ (ಹನುಮನ ಹೆಂಡತಿ) ತೀರಿಕೊಂಡು ಆಗಲೇ ಎರಡು ವರುಷಗಳು ಆದವಲ್ಲ! ದೇವರಿಗೆ ಅದು ಹೇಗೆ ಕರುಣೆ ಬರಲಿಲ್ಲವೋ! ಎಲ್ಲ ದೃಷ್ಟಿಯಿಂದಲೂ ಸುಖಮಯವಾಗಿ ಸಾಗಿದ ಸಂಸಾರವನ್ನು ಮುಕ್ಕು ಮಾಡಿಬಿಡಲು ತಾನೇನು ಅಂಥ ಪಾಪ ಮಾಡಿದ್ದನು? ವೈದ್ಯರ ಮನೆಗೆ ತನ್ನಲ್ಲಿದ್ದ ಹಣವೆಲ್ಲ ಹೊಳೆಯಾಗಿ ಹರಿದರೂ ಗಂಗೆ ಉಳಿಯಲಿಲ್ಲ. ಎಂಥ ಒಳ್ಳೆಯ ಹೆಂಗಸು ಗಂಗೆ! ಬಡತನದಲ್ಲಿಯೂ ಕೈಹಿಡಿದಳು. ಆದರೂ ತನ್ನ ಮೇಲಿನ ಪ್ರೀತಿ ಮುಕ್ಕಾಗಲಿಲ್ಲ. ಮಳೆಯೆನ್ನದೆ, ಚಳಿಯೆನ್ನದೆ, ಬೇನೆ ಬೇಸರಿಕೆಯೆನ್ನದೆ, ತನ್ನೊಡನೆ ಭುಜಕ್ಕೆ ಭುಜ ಹೊಂದಿಸಿ ದುಡಿದಳು. ಆಕೆ ತನ್ನೊಡನೆ ತಂದ ನಾಲ್ಕೇ ಕುರಿಗಳು ಆಕೆಯ ಪುಣ್ಯದಿಂದಲೇ ಇಮ್ಮಡಿಯಾಗಿ ನಾಲ್ಕುಮಡಿಯಾಗಿ ಕೊನೆಗೆ ದೊಡ್ಡ ಹಿಂಡೇ ಆದವು. ಈ ತೋಟ, ಈ ದನ, ಈ ಕುರಿಹಿಂಡು ಒಂದು ತೂಕವಾದರೆ, ಆಕೆಯೇ ಒಂದು ತೂಕ. ಆಕೆಯನ್ನು ನೆನೆದಾಗ ಮನ ಮುದುಡುವದು; ಆಕೆಯನ್ನು ಮರೆತಾಗ ಹೃದಯ ಹಾಳು-ಹಾಳು. ಆಕೆಯ ಚಲ್ವಿಕೆಯಾದರೂ ಕಡಿಮೆ ಇತ್ತೇ?

ಗಂಗೆಯ ನೆನಹು, ಗಂಗೆಯ ರೂಪದ ಚಿತ್ರ, ಹನುಮನ ಮನಸ್ಸಿನಲ್ಲಿ ತೇಲಿದೊಡನೆ ಯಾಂತ್ರಿಕವಾಗಿ ಸಾಗಿದ ಅವನ ಕೈಗಳು ಕೆಲಸವನ್ನು ತಡೆದವು. ಭೂಮಿಯಲ್ಲಿ ಆಳವಾಗಿ ಹುದುಗಿದ್ದ ಗುದ್ದಲಿ ಮೇಲೇಳಲಿಲ್ಲ. ದಣುವಿನಿಂದ ಬಾಡಿದ ಮುಖ ಇನ್ನಷ್ಟು ಬಾಡಿತು. ಆತ ಕುಳಿತುಕೊಂಡ. ದಣುವಾರಿಸಿಕೊಳ್ಳಲು ಎಲೆಯಡಿಕೆ ಹಾಕಿಕೊಂಡ. ಕೈಯಲ್ಲಿಯ ಸುಣ್ಣದ ಡಬ್ಬಿ ಆತನ ಚಿತ್ತವನ್ನು ಬೇರೆಡೆ ಎಳೆಯಿತು; ಮುಖದ ಮೇಲೆ ಮೃದುಹಾಸ ಮೂಡಿತು; ಅರಳಿದ ಕಣ್ಣಗಳಲ್ಲಿ ನಗೆಯ ತೇಜ ಕುಡಿಯೊಡೆಯಿತು.

ನಿನ್ನೆ ಎಲೆ ಕೊಯ್ಯಲು ಬಂದ ಗುಳೆಯಕಾರ ಹೆಂಗಸರಲ್ಲಿ ತನ್ನ ಸುಣ್ಣದ ಡಬ್ಬಿಯನ್ನು ಮುಚ್ಚಿಟ್ಟ ಆ ನಾಗಮ್ಮ ಬಲು ಹರೇಮಿ. ಆಕೆಯ ಚೇಷ್ಟೆಯೇನು? ನಗೆಯೇನು? ಮಾತು-ಮಾತಿಗೊಮ್ಮೆ ಹೊರಹೊಮ್ಮುವ ವಿನೋದದ ಕತೆಗಳೇನು? ಆಕೆಯ ಗಲಿಬಿಲಿ ಏನು? ಆಕೆಯ ಎತ್ತರಕ್ಕೆ ತಕ್ಕಂತೆ ಮೈ ಇನ್ನೂ ಸ್ವಲ್ಪ ಹೆಚ್ಚು ತುಂಬಿಕೊಂಡಿದ್ದರೆ, ಬಣ್ಣ ಇನ್ನಿಷ್ಟು ತಿಳಿಯಾಗಿದ್ದಿದ್ದರೆ, ಗಂಗೆಗಿಂತಲೂ ಆಕೆ ಹತ್ತುಪಟ್ಟು ಚಂದ ಕಾಣು

ತ್ತಿದ್ದಳು. ಗಂಗೆಯ ಕಣ್ಣು ಸ್ವಲ್ಪ ಸಣ್ಣವು; ಈಕೆಯವು ಬೊಗಸೆಗಣ್ಣು. ನಾಗಮ್ಮ ಚೆಲುವೆ. ಆಕೆಯ ತಂಬಲು ತುಂಬಿದ ತುಟಿಗಳಂತೂ ಮುದ್ದುಮುದ್ದು. ಎಲ್ಲ ಜನರು ತನ್ನನ್ನು ಇನ್ನೂ 'ಹನುಮಾ' ಎಂದು ಕರೆಯುತ್ತಿದ್ದರೆ, ಗುಳಿಯಕಾರರ ಉಳಿದ ಹೆಂಗಸರು 'ಹನುಮಪ್ಪ' ಎಂದು ಕರೆಯುತ್ತಿದ್ದರೆ, ಆಕೆ ಮಾತ್ರ 'ಹನುಮಪ್ಪನೋರೆ' 'ಸಾವಕಾರರೇ' ಎಂದು ಸಂಬೋಧಿಸುವಳು! ಹೌದು. ಕರೆಯಬಾರದೇಕೆ? ಆಕೆ ಹುಡಿಗೆ; ತಾನು ಹಿರಿಯ. ಆಕೆ ಬಡವಿ, ತಾನು ಆಕೆಗಿಂತಲೂ ದೈವುಳ್ಳವ. ಆಕೆ ಆಳು, ತಾನು ಒಡೆಯ.

ಹನುಮನ ಮನಸ್ಸು ಬಹಳ ಸಮಯ ನಾಗಮ್ಮನ ಸ್ಮೃತಿಚಿತ್ರಕ್ಕೇ ಅಂಟಿಕೊಂಡಿತು. ಬೇಲಿಯಲ್ಲಿ, ಬೇಲಿಯ ಬಳಿಯಲ್ಲಿ, ಇಲ್ಲಿ, ಅಲ್ಲಿ-ಎಲ್ಲೆಡೆಗೂ ಅದೇ ತಾನೆ ಅರಳುತಲಿದ್ದ ಅಂದಚಂದದ ಮೊಗ್ಗೆಗಳಂತೆ ಆತನ ಹೃದಯವೂ ಅರಳಹತ್ತಿತು.

ತೋಟದ ಆಚೆಗೆಯೇ ಹನುಮನ ಕುರಿಯ ದೊಡ್ಡಿ. ನಿದ್ರೆಯ ಗುಂಗಿನಲ್ಲಿಯೇ ಮೈಗೆ ಮೈ ಹಚ್ಚಿಕೊಂಡು ಮಲಗಿದ್ದ ಕುರಿಗಳ ಮಧ್ಯದಲ್ಲಿದ್ದ ನಾಯಿ ತನ್ನ ಕಾಲಿನಿಂದ ಕಿವಿಯನ್ನು ಕೆರೆದುಕೊಂಡಿತು; ತೊನಸಿಯ ಕಾಟದಿಂದ ತಲೆಯನ್ನು ಕೊಡಹಿತು. ಅದರ ಪರಿಣಾಮವಾಗಿ ಕಂಠದ ಗಂಟೆ ಬಾರಿಸಿತು. ಆ ನಿನಾದ ಕುರಿಗಳನ್ನು ಒಂದೊಂದಾಗಿ ಎಚ್ಚರಿಸಿತಲ್ಲದೆ, ನಾಗಮ್ಮನ ವಿಷಯದ ಸರಸ ಚಿಂತನೆಯಲ್ಲಿ ಸುಮಧುರವಾದ ಸುಳುಹುಗಳನ್ನು ಹೆಣೆಯುತಲಿದ್ದ ಹನುಮನ ಭಾವನಾ-ತಂತುಗಳನ್ನು ಕತ್ತರಿಸಿತು. ಹನುಮು ನಿದ್ದೆಯಿಂದೆದ್ದಂತೆ ಕೊಡಹಿಕೊಂಡು ಎದ್ದ.

ಮೂಡಣದಲ್ಲಿ ಆಗ ತಾನೆ ಕೆಂಬಣ್ಣ ಪಸರಿಸಿತ್ತು. ಹನುಮು ಲಗುಬಗೆಯಿಂದ ದೊಡ್ಡಿಗೆ ಬಂದ. ಆತನ ವಾಸನೆ ಬಡಿದೊಡನೆ ನಾಯಿ ಆತನೆಡೆಗೆ ಬಂದು, ಹಿಂಗಾಲ ಮೇಲೆ ನಿಂತು, ಮುಂಗಾಲಿನಿಂದ ಆತನ ಮೈಮುಟ್ಟಿ ಚಿನ್ನಾಟವಾಡಹತ್ತಿತು. ಹನುಮು ಸಲುಗೆಯಿಂದ ಅದರ ಕತ್ತನ್ನು ಹಿಡಿದು ಮೇಲೆತ್ತಿ ತೂಗಾಡಿ ಚಿಮ್ಮಿ ಒಗೆದ. ಅದೋ, ಪುಟಿಗೆ ಚಂಡಿನಂತೆ ಮತ್ತೆ ಅವನೆಡೆ ನೆಗೆಯಿತು. ಆತ ಅದರ ಕಣ್ಣು ಮುಚ್ಚಿ, ಬಾಯಿ ಬಿಗಿಹಿಡಿದು, ಅದರ ಮೋತಿಗೆ ತನ್ನ ಗಲ್ಲವನ್ನು ಹಚ್ಚಿ "ಸರಿ ಅತ್ಲಾಗ, ನನಗ ಕೆಲಸ ಐತಿ" ಎಂದು ಮುಂದೆ ಸಾಗಿದ. ಕುರಿಗಳು ಬುದಿ-ಬುದಿ ಮೇಲೆದ್ದವು. ಆಡಿನ ಮರಿಗಳನ್ನು ಬಗಲಲ್ಲಿ ಅವಚಿಕೊಂಡು ದೊಡ್ಡಿಯ ಆ ಬದಿಗಿರುವ ಗುಡಿಸಲ ಕಡೆಗೆ ಹೋದ. "ಕೆಂಚಾ" ಎಂದು ಒದರಿದ.

ಅದೇ ತಾನೆ ಎದ್ದಿದ್ದ ಕೆಂಚ-ಅವನ ಮಗ-ಟಗರುಗಳೊಡನೆ ಹುಡ್ಡಿಯಾಡುವದರಲ್ಲಿ ಮಗ್ನನಾಗಿದ್ದ.

"ಆಡಾಕ ಹತ್ತಿದೇನಲೇ? ಗಡಾನ ನಡಿ, ಸಗಣೇ ಹಿಡಿದು ಎತ್ತಿಗೆ ಮೇವು ಹಾಕಿ ಬಾ. ಆಟರಾಗs ನಾನು ಆಡು ಹಿಂಡಿಕೊಂಡು ಚಾ ಕಾಯ್ಸಿ ಕೊಡತೇನಿ. ಬಾಳ ಮೈಗಳ್ಳ ಅದೀಯೆಲೆ, ನೀ" ಎಂದ ಹನುಮು.

ಹನುಮನ ಮಾತಿನಲ್ಲಿ ಬಿರುಸುತನದ ಹೊದಿಕೆಯಿದ್ದರೂ ಅಚ್ಚೆ ಉಕ್ಕುತ್ತಿತ್ತು. ಗಂಗೆ ಸತ್ತಂದಿನಿಂದ ಕುರಿ ಕಾಯಲು, ಕೆಲಸ ಮಾಡಲು, ಒಂದು ಆಳನ್ನು ಇಟ್ಟುಕೊಂಡಿದ್ದನಾದರೂ ಮೊನ್ನೆಮೊನ್ನೆ ಆ ಆಳನ್ನು ಬಿಡಿಸಿ ಕೆಂಚನಿಗೇ ಹಚ್ಚಿದ್ದ; ತಾನೂ ಸಹಾಯ ಮಾಡುತಲಿದ್ದ.

ಕೆಂಚ ಚಿನ್ನಾಟವನ್ನು ತಡೆದ; ತಂದೆಯ ಮುಖ ನೋಡಿದ; ನಕ್ಕ; ಸೆಗಣಿಯ ಹೆಡಿಗೆಯನ್ನು ಹೆಗಲ ಮೇಲಿರಿಸಿ ತೋಟದ ಕಡೆಗೆ ಓಡಿದ.

೨

ಎರಡು ತಾಸು ಕಪ್ಪಲೆಹೊಡೆದು ಹನುಮು ಅದೇ ತಾನೆ ಗುಡಿಸಲಿಗೆ ಬಂದಿದ್ದ. ಗುಡಿಸಲಿನ ಚಪ್ಪರದಲ್ಲಿ ಹೊಗೆ ಹಾಯುತಿದ್ದುದನ್ನು ನೋಡಿದರೆ, ಆತ ಅಡಿಗೆ ಮಾಡಿಕೊಳ್ಳುತಿದ್ದನೆಂದು ಯಾರಾದರೂ ಹೇಳಬಹುದಿತ್ತು.

ಒಮ್ಮೆಲೇ ನಾಯಿ ಒದರಿತು. ಸಿಡಿದೆದ್ದು ದೊಡ್ಡಿಯ ಬಾಗಿಲ ಕಡೆಗೆ ಓಡಿತು. ಒದರಾಟ ಹೆಚ್ಚಿತು.

ದೊಡ್ಡಿಯ ಬಾಗಿಲಲ್ಲಿ ಹೆಜ್ಜೆ ಇಡುತಿದ್ದ ಹೆಂಗಸೊಬ್ಬಳು ಗಾಬರಿಯಾದಳು, ಹೆಜ್ಜೆಯನ್ನು ಹಿಂದಕ್ಕೆ ತೆಗೆದುಕೊಂಡಳು. ನಾಯಿಯು ಮೈ ಮೇಲೆ ಏರಿಬಂದಾಗ, "ಹಚಾ, ಮೂಳಾ. ನನ್ ಕಂಡರ ಹಿಂಗ್ಯಾಕ ಮಕಾ ಹರಕೊಂತೀ?" ಎಂದು ಕಲ್ಲು ಎಸೆಯಲು ಹೋದಾಕೆ, ನಿನ್ನೆ ಅದರ ಕಡೆಗೆ ಕಲ್ಲು ಒಗೆದದ್ದಕ್ಕೆಯೇ ಅದು ಹೀಗೆ ಮಾಡುವದೇನೋ ಎಂದು ತರ್ಕಿಸಿ, ಕಲ್ಲನ್ನು ಅಲ್ಲಿಯೇ ಚಲ್ಲಿದಳು. ನಾಯಿ ಬೊಗಳುವದನ್ನು ಬಿಡಲಿಲ್ಲ.

"ಸಾವಕಾರರೇ!" ಎಂದು ಒದರಿದಳಾಕೆ.

ಹನುಮು ಗುಡಿಸಲಿನಿಂದ ಹೊರಗೆ ಬಂದ. ನಾಗಮ್ಮನನ್ನು ನಾಯಿ ತರುಬಿ ನಿಂತುದನ್ನು ನೋಡಿ, ಓಡಿಹೋಗಿ ಅದಕ್ಕೆ ಸರಪಳಿ ಹಚ್ಚಿದ.

"ಬಾ, ನಾಗಮ್ಮ, ಯಾಕ ಬಂದಿದ್ದಿ?"

"ರೊಟ್ಟೀ ಬಡಿದು ಇಟ್ಟಿದ್ದೆನ್ರಿ, ಪಲ್ಲೇವು ಏನೂ ಇರಲಿಲ್ಲ. ನಾಕು ಮುಳಗಾಯಿ ಏನಾರs ಸಿಕ್ಯಾವೇನೋ ಅಂತಾ ಬಂದೆ."

"ಕೊಡತೇನಿ, ಬಾ."

ಹನುಮು ಗುಡಿಸಲ ಕಡೆಗೆ ಸಾಗಿದ. ಆಕೆ ಅವನನ್ನು ಹಿಂಬಾಲಿಸಿದಳು. ಹನುಮನ ಎದೆ ಬಡಿಯಹತ್ತಿತು — ತೋಟವೆಲ್ಲ ನಿರ್ಜನವಾಗಿರುವಾಗ ತಾನು, ಆ ಹೆಂಗಸು, ಇಬ್ಬರೇ ಇರುವೆವೆಂಬ ಕಲ್ಪನೆಯಿಂದ. ಆದರೂ ಸಾವರಿಸಿಕೊಂಡು ಗುಡಿಸಲಿನ ಒಳಹೊಕ್ಕ. ಆಕೆ ಹೊರ ಬದಿಗೇ ನಿಂತಳು.

"ಒಳ್ಯಾಕ ಬಾ ಅಲ್ಲ," ಎಂದನಾತ.

ಆಕೆ ಹಿಂದು-ಮುಂದು ನೋಡಲಿಲ್ಲ. ಒಳಗೆ ಹೋಗಿ ಬಾಗಿಲ ಬಳಿ ತಟ್ಟಿಗೆ ಹೊಂದಿ ನಿಂತುಕೊಂಡಳು.

ಹನುಮು ಮೂಲೆಯಲ್ಲಿ ಒಟ್ಟಿದ ಬದನೆಯ ಕಾಯಿಗಳಲ್ಲಿ ನಾಲ್ಕಾರನ್ನು ನಾಗಮ್ಮನ ಉಡಿಯಲ್ಲಿ ಚಲ್ಲಿದ. ಆಕೆ ಗುಡಿಸಲಿನಲ್ಲಿ ದೃಷ್ಟಿ ಹರಿಯಿಸಿ,

"ಮಗಾ ಕಾಣೂದಿಲ್ರಿ?" ಎಂದಳು.

"ಇದs ಈಗ ಚಾ ಕುಡದು, ಕಟಗೀ ಹಿಡಿಯಾಕ ಹೋಗ್ಯಾನ. ಚಾ ಕುಡೀತಿ ಏನು, ನಾಗಮ್ಮ? ಬಾಳ ಉಳದೈತಿ. ಕಾಯ್ಸಿ ಆಗಲೇ ಬಾಳತ್ತು ಆತ್ಯು. ಬಿಸೀಗೆ ಇಟ್ಟೇನಿ."

ಎನ್ನುತಲೆ ಹನುಮು ಒಲೆಯ ಕಡೆಗೆ ಹೋದ. ಆತನ ಹೃದಯದ ಅಂತರಾಳದಲ್ಲಿ ಯಾವದೋ ಒಂದು ಧ್ವನಿ 'ಅವಳಿಗೆ ಚಹವನ್ನು ಕೊಡು' ಎಂದು ಉಸುರಿತು. ತನ್ನ ದೊಡ್ಡಸ್ತಿಕೆಯನ್ನು ತೋರಿಸಬೇಕೆಂಬ ಆತನ ಹೆಮ್ಮೆ ಆ ಪ್ರೇರಣೆಯನ್ನು ಅನುಮೋದಿಸಿತು.

ಸುಡುವ ಚರಿಗೆಯಲ್ಲಿಯ ಚಹವನ್ನು ಒಂದು ವಾಟಿಯಲ್ಲಿ ಹಾಕಿ ಆತ ಆಕೆಯ ಮುಂದಿಟ್ಟಾಗ ಆಕೆ ಅನುಮಾನಿಸಿದಳು.

"ನಾವು ಕುರುಬರ್ರಿ. ನಿಮ್ಮ ಕೈಯಾಗಿನ ಚಾ ಕೂಡೀಲಿ?" ಎಂದಳು.

"ಅಯ್ಯ ಮಾರಾಳೇ! ನಿಂದೇನs ಶೀಲ? ಬಿರ್ರಾಂಬರು ಸೈತಾ ಈಗ ಎಲ್ಲಾರ ಮನಿಯ್ಯಾಗ

ಕುಡಿಯಾಕ ಹತ್ಯಾರ. ಅದರಾಗ ಏನೈತಿ ತೊಗೋ" ಎಂದು ಆತ ಜುಲುಮೆ ಮಾಡಿದಾಗ, ಆಕೆ ಮಂದಹಾಸ ಬೀರುತ್ತ ಅಲ್ಲಿಯೇ ಕುಳಿತು ಕುಡಿಯಹತ್ತಿದಳು. ಆತ ಪಲ್ಲೆ ಹೆಚ್ಚುವ ಕೆಲಸ ಮುಗಿಸಿ, ನೀರಿನ ಎಸರನ್ನು ರೊಟ್ಟಿಯ ಹಿಟ್ಟಿನಲ್ಲಿ ಹಾಕಿ ನಾದಹತ್ತಿದ.

ನಾಗಮ್ಮ ಚಹದ ವಾಟಯನ್ನು ಕೆಳಗಿರಿಸಿ, ಬಾಯಿಯ ಮುಂದೆ ಸೀರೆಯ ಸೆರಗನ್ನು ಹಿಡಿದು ನಗಹತ್ತಿದಳು.

"ನಗತೀ ಅಲ್ಲ ನಾಗಮ್ಮ. ನಾನು ರೊಟ್ಟೀ ಬಡಿಯೋದು ನೋಡಿ ನಕ್ಕೇನು?'' ಎಂದನಾತ.

"ಅಲ್ರೀ, ಅಷ್ಟು ಎಸರು ಹಾಕಿದ್ರ ರೊಟ್ಟಿ ನಾರು ಆಗಾಕಿಲ್ರೇ?" ಎನ್ನುವಾಗ ಆಕೆ ನಗೆಯನ್ನು ತಡೆಯಲು ಯತ್ನಿಸಿದಳು.

"ಮತ್ತೇನು ಮಾಡೂದೈತಿ. ಬಂದಾಂಗ ಬಡಿಯೋದು. ಎಳ್ಡು ವರಸ ಆತ್ಕು ನೋಡು. ಹೀಂಗಃ ನಡದೈತಿ ನನ್ ಬಾಳೇವು.''

"ನಾ ಸುಟ್ಟು ಕೊಡಲೇನ್ರಿ?"

ಹನುಮ ಸ್ವಲ್ಪ ಅನುಮಾನಿಸಿದ.

"ಯಾಕ್ರಿ ದ್ಯಾನಸತೀರಿ? ಅಯ್ಯ ಶಿವನಃ! ಸುಮ್ಮಕಃ ಕುಂತಗೊಳ್ರಿ. ನಾನೆಲ್ಲ ಸುಟ್ಟುಕೊಡುತೇನಿ" ಎಂದು ಆಕೆ ಒಲೆಯ ಬಳಿ ಹೋದಳು; ಹನುಮನ ಕೈಯಿಂದ ಹಿಟ್ಟಿನ ಪರಾತವನ್ನು ಕಸಿದುಕೊಂಡು ಎಸರನ್ನು ಅಳವಡಿಸಹತ್ತಿದಳು. ಹನುಮ ಕೈಗೆ ಅಂಟಿದ ಹಿಟ್ಟನ್ನು ಕೊಡಹಿ ಕುಳಿತಲ್ಲಿಯೇ ಕುಳಿತು ಎಲೆ ಮೆದಿಯಹತ್ತಿದ. ಆಕೆ ಅರೆಕ್ಷಣದಲ್ಲಿ ಹಿಟ್ಟನ್ನು ನಾದಿಕೊಂಡು ರೊಟ್ಟಿಗಳನ್ನು ಬಡಿಯಹತ್ತಿದಳು. ಆತ ಆಕೆಯನ್ನು ಅಡಿಯಿಂದ ಮುಡಿಯವರೆಗೆ ನೋಡಹತ್ತಿದ. ಆಕೆಯ ಹಣೆಯ ಮೇಲಿನ, ಗಲ್ಲ-ಗದ್ದಗಳ ಮೇಲಿನ, ಹಚ್ಚೆಗಳನ್ನು ದಿಟ್ಟಿಸಿದ. ಅವಳ ರೊಟ್ಟಿ ಬಡಿಯುವ ಕೈಸಪ್ಪಳ, ಬಳೆಗಳ ನಿನಾದ, ಇವುಗಳೊಡನೆ ತಾಳ-ಮೇಳವಾಗಿ ಆಕೆಯು ತಲೆ ಹಾಕುತಿದ್ದುದು ಅವನ ಅಸಂಸ್ಕೃತ ಮನಸ್ಸಿಗೂ ರಮ್ಯವೆನಿಸಿತು. ಆಕೆಯ ಬಗೆಗೆ ಕುತೂಹಲ ಕೆರಳಿತು. ಆತ ಕೇಳಿದ:

"ಯಾವ ಊರು ಆತ್ಕು, ನಾಗವ್ವ ನಿಮ್ಮದು?"

"ನಮ್ಮದ್ರೇ? ಆತ್ಲಾಗ ಬಿಡ್ರಿ. ವಿಜಾಪುರದ ಕಡ್ಯಾಕ ಅಲಮೇಲ ಅಂತಾ ಐತಿ."

"ನೀವೂ ಬಾಳ ದಿಟ್ಟಿ ಮಂದಿ. ಆಟು ದೂರದಿಂದ ಬಂದೀರಲ್ಲ?"

"ಹೊಟ್ಟಿ ಐತೆಲ್ರಿ, ಸಾವಕಾರ! ಕೆಟ್ಟ ಹೊಟ್ಟಿ ದಿಟ್ಟರನ ಮಾಡಾಕ ಹಚ್ಚತೈತಿ! ಎಲ್ಲಿ ಇದ್ದೇನ್ರಿ ನನಗ? ತಂದಿ-ತಾಯಿ ಇಲ್ಲ. ಮಕ್ಕಳು-ಮರಿ ಇಲ್ಲ. ಗಂಡಂತೂ ನಾನು ಇಪ್ಪತ್ತು ವರಸದಾಕಿ ಇದ್ದಾಗಃ ತೀರಿಕೊಂಡ. ಈಗ ಆರು ವರುಸ ಆತ್ಕು ನೋಡ್ರಿ, ಹಿಂಗಃ ನಡದೈತಿ, ಕೂಲೀ ಮಾಡಿ ಹೊಟ್ಟೀ ಹೊರಕೊಳ್ಳೋದು. ಕೂಲೀ ಮಾಡೋರಿಗೆ ವಿಜಾಪುರ ಏನ್ರಿ, ದಿಳ್ಳಿ ಏನ್ರಿ? ನಮ್ದು ಬಡದೇಶ; ಹನ್ನೆಳ್ಡು ತಿಂಗಳೂ ಬರಗಾಲ."

ನಾಗಮ್ಮ ಬಹಳ ಮಾತಾಡುವಾಕೆ ಎಂಬುದನ್ನು ಆತ ಮೊದಲೇ ಅರಿತಿದ್ದ. ಆಕೆ ಅಡುಗೆ ಮಾಡುತ್ತಲೇ, ಹನುಮನಿಗೆ ಮಾತಾಡಲು ಅವಕಾಶಗೊಡದಂತೆ, ತಾನೇ ಹಿಂಡುಗಟ್ಟಲೆ ಪ್ರಶ್ನೆ ಕೇಳಿದಳು. ಇಂದಿನವರೆಗೆ ಭಣಗುಟ್ಟುತಲಿದ ಅವನ ಗುಡಿಸಲು ಅವಳ ಮಧುರವಾದ ಹಾಸ್ಯಮಯವಾದ ಹರಟೆಯಿಂದ ರಸಪೂರ್ಣವಾಯಿತು.

ರೊಟ್ಟಿಯನ್ನು ಸುಡುವ ಕೆಲಸ ಮುಗಿದ ಮೇಲೆ "ನಾ ಬರತೇನ್ರಿ, ಸಾವಕಾರ!" ಎಂದು ಆಕೆ ಚಿಗರಿಯಂತೆ ಹೊರಗೆ ಓಡಿದಳು. ಹನುಮನ ಕೃತಜ್ಞತೆಯ ದೃಷ್ಟಿ ಅವಳ ಬೆನ್ನುಹತ್ತಿತು. ಆಕೆ ಬಾಗಿಲಲ್ಲಿ ಒಂದು ಕ್ಷಣ ನಿಂತು, ಹಿಂದೆ ತಿರುಗಿ ಮೃದುವಾಗಿ ಮಧುರವಾಗಿ ಅಂದಳು:

"ಅಲ್ಲರಿ, ಒಂದು ಮಾತು!"

"ಏನು?"

"ನನಗ ನೀವು 'ನಾಗಮ್ಮ' ಅಂತ ಕರೀಬ್ಯಾಡ್ರಿ."

"ಯಾಕ?"

"ಚಂದ ಕಾಣೋದಿಲ್ಲ."

"ಏನನಬೇಕು ಮತ್ತ?"

"'ನಾಗೀ' ಅನ್ನರಿ!"

"ಹಂಗಾರ ನನಗೂ 'ಹನಮಾ' ಅನ್ನು!"

ನಾಗಮ್ಮ ನಕ್ಕಳು. ಹನುಮನ ಮುಖ ಅದೇ ನಗೆಯನ್ನು ಪ್ರತಿಬಿಂಬಿಸಿತು. ಆತ ಆಕೆಯನ್ನು ದಿಟ್ಟಿಸಿದನು; ಈಕೆ ಆತನನ್ನು ದಿಟ್ಟಿಸಿದಳು. ಅವರಿಬ್ಬರ ದೃಷ್ಟಿಗಳು ಮೌನವಾಗಿ ಏನನ್ನೋ ಮಾತಾಡುತ್ತಿರುವಾಗಲೇ, ನಾಗಮ್ಮ ಕಣ್ಮರೆಯಾದಳು.

೩

ನಾಗಮ್ಮ ಪ್ರತಿದಿನವೂ ಹನುಮನ ಮನೆಗೆ ರೊಟ್ಟಿ ಸುಡಲು ಬರಹತ್ತಿದಳು. ಅವರಿಬ್ಬರ ನಡುವಿನ ಪರಿಚಯ ಬೆಳೆದು ತೀವ್ರಗತಿಯಿಂದ, ನಿರ್ಭಯವಾಗಿ, ನಿರಾತಂಕವಾಗಿ, ಸ್ನೇಹರೂಪವಾಗಿ ಪರಿಣಮಿಸಿತು. ಆ ಸಂಬಂಧ ಕೆಲವು ದಿನ ಗುಪ್ತವಾಗಿ ವಿಕಾಸಗೊಂಡಿತಾದರೂ ಅತ್ಯಲ್ಪ ಅವಧಿಯಲ್ಲಿಯೇ ಜನರ ಸಂಶಯಕ್ಕೆ ಗುರಿಯಾಯಿತು. ಆತ ಗಂಡಸು; ಆಕೆ ಸ್ವತಂತ್ರಳು. ಆದುದರಿಂದ ಅವರ ನಡುವೆ ಯಾವ ಬಗೆಯ ಅಡೆ-ತಡೆ ತಲೆದೋರಲಿಲ್ಲ. ಕೆಲವೇ ದಿನಗಳಲ್ಲಿ ಆಕೆ ಅವನನ್ನು ಸಂಪೂರ್ಣವಾಗಿ ತನ್ನ ವರ್ಚಸ್ಸಿನಲ್ಲಿ ಸೆಳೆದುಕೊಂಡಳು. ತೋಟದ ಆಡಳಿತವೆಲ್ಲ ಆಕೆಯ ಸ್ವಾಧೀನವೇ ಆಯಿತು. ಇಲ್ಲಿಯವರೆಗೆ ಗುಳೇಕಾರ ಹೆಂಗಸರೊಡನೆ ಸರಿಜೋಡಿಯಾಗಿ ಕೂಲಿಮಾಡುತಿದ್ದವಳು ಅವರ ಕಣ್ಣಮುಂದೆಯೇ ಒಡತಿಯಾದಳು. ಅವಳ ಮೈಮೇಲಿನ ಹರಕು ಬಟ್ಟೆ ಮಾಯವಾಗಿ ಟೋಪಿನ ಸೆರಗಿನ ಸೀರೆಗಳು ಬಂದವು. ಕೊರಳನ್ನು ಗುಂಡಿನ ಟೀಕಿ, ತೋಳುಗಳನ್ನು ಬೆಳ್ಳಿಯ ಬಂದಿಗಳು ಅಲಂಕರಿಸಹತ್ತಿದವು.

ಎಲ್ಲವೂ ಹೀಗೆಯೇ ಸುಸೂತ್ರವಾಗಿ ಸಾಗಬಹುದಿತ್ತು. ಆದರೆ ನಡುವೆಯೇ ಗಲಭೆ ಎದ್ದಿತು.

ಒಂದು ತಿಂಗಳು ಪೂರ್ಣ ಸಂದಿರಲಿಲ್ಲ. ನಾಗಮ್ಮ ಹನುಮನ ಗುಡಿಸಲಿನಲ್ಲಿಯೇ ವಾಸಿಸಲು ಪ್ರಾರಂಭಿಸಿದಳು. ಅವನಲ್ಲಿಯೇ ಊಟವನ್ನೂ ಮಾಡಹತ್ತಿದಳು. ಇದು ಮೊದಲು ಗುಳೆಯದವರ ಸಹನೆಯನ್ನು ಕೆರಳಿಸಿತ್ತು. ಅವರೆಲ್ಲ ಪ್ರತಿಭಟನೆಯ ದ್ಯೋತಕವೆಂದು ಹನುಮನ ತೋಟಕ್ಕೆ ಕೂಲಿಗೆ ಹೋಗುವದನ್ನು ನಿಲ್ಲಿಸಿದರು. ಊರಲ್ಲಿಯ ಕುರುಬ ಜನಾಂಗದ ಮುಖ್ಯಸ್ಥರನ್ನು ಭೆಟ್ಟಿಯಾಗಿ, ನಾಗಮ್ಮ ಕುಲಗೇಡಿಯೆಂದೂ ಅವಳನ್ನು ದೈವದಿಂದ ಹೊರಗೆ ಇಡಬೇಕೆಂದೂ ಊರು ಬಿಟ್ಟು ಓಡಿಸಬೇಕೆಂದೂ ಕೇಳಿಕೊಂಡರು. ಈ ಸುದ್ದಿ ಹನುಮನ ಕಿವಿಗೆ ಮುಟ್ಟಿದಾಗ ಆತ ಪೇಚಿನಲ್ಲಿ ಬಿದ್ದ.

ಇದೇ ಸಮಯದಲ್ಲಿ ಇನ್ನೊಂದು ತೊಂದರೆ ಹನುಮನನ್ನು ಇರುಕಿನಲ್ಲಿ ಸಿಲುಕಿಸಿತು:

ಹನುಮನ ತೋಟದ ಒಡತಿ — ಭಾಗಮ್ಮ— ಬಡವರು. ಅವರಿಗೆ ಆಧಾರವೆಂದರೆ ಈ ತೋಟವೊಂದೇ. ಒಬ್ಬನೇ ಒಬ್ಬ ಮಗನನ್ನು ಕಷ್ಟನಷ್ಟ

ಪಟ್ಟು ಕಾಲೇಜಿಗೆ ಕಳಿಸಿದ್ದರು. ಅವನ ವಿದ್ಯಾಭ್ಯಾಸದ ವೆಚ್ಚವು ಅವರ ಯೋಗ್ಯತೆಯನ್ನು ಮೀರಿ ಅವನ ಅಭ್ಯಾಸವನ್ನು ಅರ್ಧಕ್ಕೇ ನಿಲ್ಲಿಸುವ ಪ್ರಸಂಗ ಬಂದಿತ್ತು. ಹಾಗೆ ಮಾಡುವದು ವಿಹಿತ ವಲ್ಲವೆಂದು ಮನಗಂಡು ತೋಟವನ್ನು ಮಾರಿ ಬಿಡುವದಾಗಿ ನಿಶ್ಚಯಿಸಿದ್ದರು. ಟಿನೆನ್ಸಿ ಕಾಯಿದೆಯ ಕೆಲವು ತೊಂದರೆಯ ಮೂಲಕ ಅವರು ಆ ತೋಟವನ್ನು ಹನುಮನೇ ಕೊಂಡುಕೊಳ್ಳಬೇಕೆಂದು ದುಂಬಾಲು ಬಿದ್ದರು. ಇಲ್ಲವಾದರೆ ಸ್ವಸಂತೋಷದಿಂದ ಅದನ್ನು ಬಿಟ್ಟುಕೊಡಬೇಕಾಗಿ ಕೇಳಿದರು. ಹತ್ತು ಸಲ ಕರೆಕಳುಹಿದರು. ಅದನ್ನು ಕೊಳ್ಳಬೇಕೆಂದರೆ ಹನುಮನಲ್ಲಿ ದುಡ್ಡಿಲ್ಲ. ಕೈಯ್ಯಲ್ಲಿದ್ದ ಹಣದ ಕೆಲವು ಭಾಗ ನಾಗಮ್ಮನ ಮೈಮೇಲೆ ಕುಳಿತಿದ್ದಿತು. ಉಳಿದ ನೂರಾರು ರೂಪಾಯಿಗಳು ಎದಕ್ಕೆ ಮುಟ್ಟಬೇಕು? ಸಾಲ ತೆಗೆಯಬೇಕೆಂದರೆ, ಅಷ್ಟು ಹಣ ಸಿಗುವದಾದರೂ ಎಲ್ಲಿ? ಹೊಲವನ್ನು ಬಿಟ್ಟುಕೊಡುವದೂ ಅಸಾಧ್ಯ. ಯಾಕಂದರೆ ಆ ತೋಟವೇ ಅವನ ಪಂಚಪ್ರಾಣ. ಆದ್ದರಿಂದಲೇ ಆತ ಇಂದಿನ ವರೆಗೆ ನೆವ ಹೇಳುತ್ತ ಬಂದಿದ್ದ. ಆದರೆ ಈಗ ಯಾವದೊಂದು ನಿರ್ಧಾರಕ್ಕೆ ಬರಲೇಬೇಕಿತ್ತು.

೪

ಅಂತೆಯೇ ಆತಗೆ ಅಂದು ಇಡಿಯ ರಾತ್ರಿ ನಿದ್ರೆ ಬರಲಿಲ್ಲ. ಹಾಸಿಗೆಯಲ್ಲಿ ಆತ ಬಹಳ ಹೊರಳಾಡಿದ; ವಿಚಾರಮಗ್ನನಾಗಿ ಬಹಳ ಪೇಚಾಡಿದ. ಕಡೆಗೂ ಸಮಸ್ಯೆ ಬಗೆಹರಿಯಲಿಲ್ಲ. ಕಾತರದಿಂದ ಬೆಂದು ನಿರಾಶೆಯಲ್ಲಿ ಇದ್ದಾಗಲೇ ಬೆಳಗು ಮುಂಜಾನೆಯ ಜೋಂಪು ಹತ್ತಿತು.

ಆತ ಎದ್ದಾಗ ಮುಂಜಾನೆ ಎಂಟು ಗಂಟೆಯಾಗಿತ್ತು. ಅವನಿಗೆ ಗೊತ್ತಿದ್ದಂತೆ ಬೆಳಗು ಮುಂಜಾನೆ ತೋಟದ ಕೆಲಸ ಮಾಡದೇ ಇದ್ದುದು ಇದೊಂದೇ ದಿನ. ತಡವಾಗಿ ಎದ್ದುದಕ್ಕೆ ಆತನಿಗೆ ಕೆಟ್ಟೆನಿಸಲಿಲ್ಲ. ಬೇಗನೆ ಎದ್ದಿದ್ದರೂ ಈ ದಿನ ಆತ ತೋಟದ ಕೆಲಸ ಮಾಡುತ್ತಿರಲಿಲ್ಲ. ಯಾಕಂದರೆ ಈ ದಿನ ಆತನಿಗೆ ಆಗಲೇ ತೋಟದ ಬಗ್ಗೆ ಪರಕೀಯ ಭಾವನೆ ಮೂಡಿದ್ದಿತು.



ಇಂದು ಆತನಿಗೆ ನಿತ್ಯಕರ್ಮಗಳ ಕಡೆಗೂ ಲಕ್ಷ್ಯವಿರಲಿಲ್ಲ. ನೆಟ್ಟಗೆ ತೋಟದಲ್ಲಿ ಹೊಕ್ಕ; ಎಲೆಯ ಬಳ್ಳಿಗಳಲ್ಲಿ ಓಡಾಡಿದ; ಮೂಲೆಯೊಂದರಲ್ಲಿ ನಡುಸಿದ ನಿಂಬೆಯ ಗಿಡದ ಬಳಿ ಸುಂದನಾಗಿ ನಿಂತ; ಸಂಪಿಗೆಯ ಎಲೆಗಳ ಮೇಲೆ ಕೈಯಾಡಿಸಿದ. ಇವೆಲ್ಲವುಗಳನ್ನು ಹಚ್ಚಿ ಇಂದಿನ ವರೆಗೆ ಜೋಪಾನ ಮಾಡಿದ್ದನು. ತನ್ನವು ಎಂದು ಹೆಮ್ಮೆ ಪಡುತ್ತಿದ್ದನು. ಇನ್ನು ಮೇಲೆ? ತಾನಾರೋ? ಅವು ಯಾರವೋ? ವಿಹ್ವಲನಾಗಿ ಹನುಮ ಮತ್ತೆ ಎಲೆಯ ಬಳ್ಳಿಗಳ ಹಂದರದಲ್ಲಿ ಹೋಗಿ ಕುಳಿತ.

ಹನುಮ ತೋಟದ ತುಂಬ ಮತ್ತೊಮ್ಮೆ ಕಣ್ಣು ಹೊರಳಿಸಿ, ತಾನು ಸಾಕಿದ, ಪೋಷಿಸಿದ, ತನ್ನವೆಂದು ಆತ್ಮೀಯತೆಯಿಂದ ಹೆಮ್ಮೆಪಟ್ಟ ಆ ಅಸಂಖ್ಯಾತ ಸಸ್ಯಜೀವಿಗಳು ಇನ್ನು ಮುಂದೆ ತನ್ನವಲ್ಲ ಎಂದು ಅಂದುಕೊಂಡಾಗ ಆತನ ಕಣ್ಣು ನೀರಿನಿಂದ ಮಿಂಚುತ್ತಿದ್ದವು.

ಅದೇ ಕ್ಷಣದಲ್ಲಿ ಅವನ ಕುತ್ತಿಗೆಯಹಿಂಭಾಗದಲ್ಲಿ ಏನೋ ಗುಳುಗುಳು ಮಾಡಿದಂತೆ ಅನಿಸಿತು. ಕೈಯಾಡಿಸಿದ; ಮುಖವನ್ನು ಹಿಂದೆ ತಿರುಹಿದ. ನಾಗಮ್ಮ ನಗುತ್ತ ನಿಂತಿದ್ದಳು. ವೀಳೆಯ ಎಲೆಯೊಂದನ್ನುಕೊಯ್ದು ಅದರ ತುದಿಯನ್ನು ಆತನ ಕುತ್ತಿಗೆಯಲ್ಲಿ ಆಡಿಸುತ್ತಿದ್ದಳು—ಚೇಷ್ಟೆಗೆಂತಲೇ. ಅಚ್ಚಹಸುರಿನ ಎಳೆಯ ಎಲೆಗಳಲ್ಲಿ ನಿಂತ ಆಕೆ ಅವನಿಗೆ ನಯನಮನೋಹರಳಾಗಿ ಕಂಡಾಗ ಮನಸ್ಸಿನ ದುಗುಡದ ತೀಕ್ಷ್ಣತೆ ಸ್ವಲ್ಪ ಕಡಿಮೆಯಾಯಿತು. ಆಕೆ "ಚಾ ಕುಡಿಯಾಕ ಬಾರಲ್ಲ, ಆರಿ ಅಂಗಾರ ಆಗ್ಯೆತಿ. ನಿನ್ನ ಕರಕೊಂಡು ಬಾ ಹೋಗು ಅಂದ್ರ, ನಿನ್ನ ಮಗಾ ಚಾ ಸೆಂಡಿ, ಹಾಂಗs ಓಡಿಹೋದ," ಎಂದಳು. ಆಕೆಯ ಮಾತಿನಲ್ಲಿ ಹನುಮನ ಮಗನ ವಿಷಯದಲ್ಲಿಯ ಜುಗುಪ್ಸೆ ಒಡೆದು ಕಾಣುತ್ತಿತ್ತು. ಆಕೆಯ ಮುಖದಲ್ಲಿ ಬಗರು ವ್ಯಕ್ತವಾಗಿತ್ತು.

ಹನುಮನಿಗೆ ಈಗೂ ಆಕೆ ಚಂದ ಕಂಡಳು.

"ಯಾಕs ಸುಂದನಂಗ ಕಾಣತೀ?" ಆಕೆ ಕೇಳಿದಳು.

ಹನುಮ ಆಕೆಯನ್ನು ಕೈಹಿಡಿದು ಹತ್ತಿರ ಕುಳ್ಳಿರಿಸಿಕೊಂಡ.

"ನನಗೆ ಈಗ ಇಂತಾ ಪರಸಂಗ ಬಂದೈತಿ. ನನ್ನ ನೀನೂ ಕೈಬಿಡತೀ. ಈ ತೋಟಾನೂ ಕೈಬಿಡತೈತಿ" ಎಂದನಾತ.

"ಅದ್ಯಾಕ?"

"ನಿನ್ನ ನಾ ಕುಲಗೆಡಿಸಾಕ ಹತ್ತೇನಂತ. ಜನ ಹೊಡೀತೇವಿ, ಬಡೀತೇವಿ ಅಂತಾ ಹೆದರಕೀ ಹಾಕಾಕ ಹತ್ಯಾರ. ನಿನ್ನ ಊರಬಿಟ್ಟು ಓಡಸತಾರಂತ."

ನಾಗಮ್ಮನ ಮುಖಕ್ಕೆ ಸಿಟ್ಟಿನ ಸಂಜು ಏರಿತು. ಆಕೆ ತನ್ನ ಕಿರಿಬೆರಳಿಗೆ ಸುತ್ತುತಲಿದ್ದ ವೀಳೆಯ ಎಲೆಯನ್ನು ಚಿವುಟಿ ಒಗೆದು ಹೆಚ್ಚು ವಿಕಾರಗೊಳ್ಳದೆ ಅಂದಳು:

"ಹೊಡಿಯಾಕ ಏನು ವೊಗಲಾಯಿ ಅಂತಾ ತಿಳಿದಾರೇನು? ನನಗ ಯಾರೇನು ಉಣಿಸಿ ತಿನಿಸಿ ಮಾಡಿರೋದೂ ಅಟರಾಗs ಐತಿ. ಯಾರ ಹಂಗು ಏನು ನಮಗ? ನನ್ನಟಕ ನಾ ಸ್ವತಂತ್ರ ಅದೇನಿ. ಇವರೇನು ಮಾಡಿಯಾರು? ಇವರ ಜಾತಿ ಏನು ಮಾಡೀತು? ಪರಸಂಗ ಬಿದ್ದರ ನಿನ್ನ ಜೋಡಿ ಉಡಿಕಿ ಆಗಾಕ ತಯಾರ ಅದೇನಿ. ನಿಮ್ಮ ಜಾತ್ಯಾಗ ಬಿದ್ದೆ ಅಂದ್ರ, ಆ ಮ್ಯಾಕ ಇವರದೇನು ಹಂಗು?"

ಆಕೆ ಅಷ್ಟಕ್ಕೇ ಮಾತು ತಡೆದು ಹನುಮನ ಅಭಿಪ್ರಾಯ ತಿಳಿದುಕೊಳ್ಳಲು ಆತನನ್ನು ನೋಡಹತ್ತಿದಳು. ಆಕೆಯ ಧೈರ್ಯ ಅವನನ್ನು ಬೆರಗುಗೊಳಿಸಿತು. ಅವಳ ವಿಷಯದ ಸಮಸ್ಯೆಯ ಪರಿಹಾರದ ಆಕೆಯ ಹಂಚಿಕೆ ಸಮರ್ಪಕವಾದುದು ಎನಿಸಿತು. ಆತ ಮಾತನಾಡಲಿಲ್ಲ. ಆಕೆಯ ಕೊರಳಲ್ಲಿ ಅಸ್ತವ್ಯಸ್ತವಾಗಿ ಜೋತಾಡುತ್ತಿದ್ದ ಟೀಕಿಯನ್ನು ಸರಿಪಡಿಸಿದ. ಆಕೆಯೇ ಮುಂದುವರಿದಳು:

"ಆದ್ರ ಈಟು ಮಾತ್ರ ಮಾಡಾಕಬೇಕು: ನೀ ಈ ತೋಟಾ ಮಾತ್ರ ಬಿಡಬಾರದು".

"ಅದs ದೊಡ್ಡ ಪೇಚು ಆಗಿಕೊಂಡು ಕೂತೈತಿ" ಎಂದ ಹನುಮ ನಿರಾಶೆಯ ದನಿಯಲ್ಲಿ.

"ಸಾಲ ಗೀಲ ಹುಟ್ಟಾಕಿಲ್ಲ?"

ಹನುಮ ತಲೆ ಅಲ್ಲಾಡಿಸಿದ. ಇಬ್ಬರೂ ಎರಡು ನಿಮಿಷ ಸುಮ್ಮನೆ ಕುಳಿತರು. ನಾಗಮ್ಮನೇ ಮತ್ತೆ ಅಂದಳು:

"ಹೀಂಗ ಮಾಡತೀಯಾ, ಹಂಗಾರ?"

"ಏನು?"

"ನಾ ಹೇಳಿದಾಂಗ ಕೇಳಂಗಿದ್ದರ ಹೇಳತೇನಿ."

"ನಾ ನಿನ್ನ ಮಾತಿಗೆ ಹೊರತು ಅದೇನೇ?"

"ನಿನ್ನ ಕುರಿ, ಆಡು, ಟಗರು—ಎಲ್ಲಾ ಮಾರಿಬಿಡು. ಕುರೀ ದಾರಣಿ ಏನೂ ಕಮ್ಮೀ ಇಲ್ಲ. ಈಗ ನಿನ್ನ ಹತ್ತರ ಇದ್ದ ದುಡ್ಡೂ ದುಂಡಗ ಇಟಗೋ. ತುಸುತೋಡೆ ಸಾಲ್ದು ಕಮ್ಮಿ ಬಿದ್ದರೂ ಬೀಳಬಹುದು. ನಿನ್ನ ಮಗನ್ನ ಎಲ್ಲಿಯಾದರೂ ದುಡಿಯಾಕ ಇಟ್ಟರ, ಯಾರಾದರೂ ಎರಡು ವರಸದ ಸಂಬಳಾ ಅಗಾವು ಕೊಡತಾರ," ಎಂದೆಂದು ಆಕೆ ಹನುಮನಿಗೆ ವಿಚಾರ ಮಾಡಲು ಅವಕಾಶ ಕೊಟ್ಟಳು. ಆಕೆ ಗೌಪ್ಯವಾಗಿ ಹನುಮನ ಮಗನನ್ನೂ ನಾಯಿಯನ್ನೂ ದ್ವೇಷಿಸುತ್ತಿದ್ದಳು.

ಹನುಮ ಮತ್ತೆ ವಿಚಾರದಲ್ಲಿ ಬಿದ್ದ. ಕುರಿಯನ್ನು ಮಾರಿಕೊಳ್ಳುವದು ಕಠಿಣವಾಗಿರಲಿಲ್ಲ. ನೆರೆಯೂರ ಗೌಡರಿಗೆ ಮನೆಗೆಲಸದ ಸಲುವಾಗಿ

ಎಂದು ಒಳ್ಳೆಯ ಹುಡುಗ ಬೇಕಾಗಿದ್ದಿತೆಂದೂ ಆತನ ಜ್ಞಾಪಕಕ್ಕೆ ಬಂತು.

ಐದು ನಿಮಿಷ ಗತಿಸಿತು.

ನಾಗಮ್ಮ ಹನುಮನ ಗದ್ದವನ್ನು ಹಿಡಿದು ಮೇಲೆತ್ತಿ,

"ಯಾಕ ಅನಮಾನ?" ಎಂದು ಕೇಳಿದಳು.

"ಸೀರಿಯುಡಿಕೆಗೆ ತಯಾರು ಅದೀಯಾ?" ಎಂದನಾತ.

"ಇನ್ನೂ ಸಂಶಾ ಏನು ಮತ್ತ? ಆದರ, ಒಂದು ಕರಾರು!"

"ಏನು?"

"ಕುಲಗೆಟ್ಟರೂ ಸುಕಾಬಡಬೇಕಂತ. ನನ್ನ ಮ್ಯಾಕ ಪಿರೀತಿ ಐತೇ, ಇಲ್ಲ, ಮತ್ತ?"

ಆತ ಕಣ್ಣರಳಿಸಿ ನಕ್ಕ. ಆಕೆಯೇ ಮುಂದೆ ಸಾಗಿದಳು:

"ಹಂಗಾರ ಕೈ ಮ್ಯಾಕ ಕೈ ಹಾಕು—ನಾ ಹೇಳಿದಾಂಗ ನಡೀತೇನಿ ಅಂತಾ."

ಅವನ ಕೈ ಅವಳ ಕೈಮೇಲೆ ಬಿತ್ತು. ಆಕೆ ಎಂದಳು:

"ಈ ತೋಟಾನ ನನ್ನ ಹೆಸರಲೇ ಮಾಡ ಬೇಕು."

ಇದಕ್ಕೆ ಉತ್ತರವಾಗಿ ಹನುಮ ಆಕೆಯನ್ನು ಸೆಳೆದುಕೊಂಡು ತೊಡೆಯಮೇಲೆ ಹಾಕಿಕೊಂಡ.

ಸುತ್ತಲೂ ಸಸ್ಯದೇವತೆ ಪ್ರಸನ್ನಳಾಗಿ ಕುಳಿತಿದ್ದಳು. ಹೊರಗೆ ನಾಯಿ ಕುರಿಗಳು ಒದರುತಿದ್ದವು. ದೊಡ್ಡಿಯಲ್ಲಿಯೇ ಕೆಂಚನ ಕೊಳಲು ನುಡಿಯುತ್ತಿತ್ತು. ಆದರೆ ಆ ಕ್ಷಣದಲ್ಲಿ 'ಹನುಮನ ಜಗತ್ತೆಂದರೆ ಒಂದೇ ಒಂದು ವ್ಯಕ್ತಿ—ನಾಗಿ' ಎಂದು ಎನಿಸಿತು ಆತನಿಗೆ.



ಹನುಮ ಅಂದೆಯೇ ಸಂಜೆಯ ಮುಂದೆ ಭಾಗಮ್ಮನವರಿಗೆ ಭೆಟ್ಟಿಯಾಗಿ ತೋಟವನ್ನು ತಾನು ಕೊಂಡುಕೊಳ್ಳುವದಾಗಿಯೂ ಹಣದ ವ್ಯವಸ್ಥೆಗಾಗಿ ಒಂದು ವಾರದ ಅವಧಿ ಕೊಡಬೇಕಾಗಿಯೂ ಹೇಳಿಬಂದ. ಮರುದಿನವೇ ನೆರೆಯ ಹಳ್ಳಿಯ ಗೌಡರಲ್ಲಿ ತನ್ನ ಮಗನನ್ನು ದುಡಿಯಲು ಇಟ್ಟು, ವರುಷಕ್ಕೆ ಮೂರು ನೂರು ರೂಪಾಯಿಯಂತೆ ಎರಡು ವರುಷಗಳ ಅಗಾವು ಸಂಬಳವನ್ನು ತೋಟದ ಖರೀದಿಯ ಹೊತ್ತಿಗೆ ಕೊಡಬೇಕಾಗಿ ಪ್ರಾರ್ಥಿಸಿಕೊಂಡು ಬಂದ. ನಾಲ್ಕಾರು ದಿನ ಸುತ್ತಲಿನ ಹಳ್ಳಿಗಳೆಲ್ಲವನ್ನೂ ಸುತ್ತುಹಾಕಿ, ಕಡೆಗೆ ಗೌಡರ ಮುಖಾಂತರ, ಅವರ ಹಳ್ಳಿಯಲ್ಲಿಯೇ, ತನ್ನ ಎಲ್ಲ ಕುರಿಗಳನ್ನೂ ಟಗರು-ಆಡುಗಳನ್ನೂ ಎರಡು ಸಾವಿರ ರೂಪಾಯಿಗಳಿಗೆ ಕೊಡುವದಾಗಿ ಮಾತು ಮುಗಿಸಿ ಮರುದಿನ ಮುಂಜಾನೆ ಅವನ್ನು ಹೊಡೆದುಕೊಂಡು ಬರುವೆನೆಂದು ಹೇಳಿ ಊರಿಗೆ ಮರಳಿದ.

೫

ಅಂದು ಕುರಿಗಳನ್ನು ಖರೀದಿ ಹಚ್ಚುವ ದಿನ. ಮುಂಜಾನೆ ಹನುಮ ದೊಡ್ಡಿಯಲ್ಲಿ ಆಡು ಹಿಂಡಿಕೊಳ್ಳುತ್ತಿದ್ದ. ತುದಿಗುಂಡಿಯಿಂದ ಕುಳಿತು ಚರಿಗೆಯನ್ನು ಎರಡೂ ತೊಡೆಗಳಿಂದ ಗಟ್ಟಿ ಹಿಡಿದಿದ್ದ. ಎರಡೂ ಕೈಗಳಿಂದ ಆಡಿನ ಮೊಲೆಗಳನ್ನು ಜಗ್ಗುತಲಿದ್ದ. ಆದರೆ ಕೈಗಳು ಯಾಂತ್ರಿಕವಾಗಿ ಸಾಗಿದ್ದವೆಂಬುದನ್ನೂ ಅವನ ಚಿತ್ತ ಮಾತ್ರ ಬೇರೆ ಕಡೆಗೆ ಹೋಗಿತ್ತೆಂಬುದನ್ನೂ ಅವನ ಶೂನ್ಯವಾದ ಅಚಲದೃಷ್ಟಿ ಹೇಳುತ್ತಿತ್ತು. ಮುಖ ಗಂಭೀರವಾಗಿತ್ತು.

ಹನುಮ ಮೊಲೆಗಳನ್ನು ಜಗ್ಗಿಯೇ ಜಗ್ಗಿದ. ಅವನ ಕೈಯ ಯಾಂತ್ರಿಕತೆ ತಡೆಯಲಿಲ್ಲ. ಹಾಲಿನ ಬುರುಗು ಹೊರಚೆಲ್ಲಿ, ಹಾಲೂ ಹೊರಸೂಸಿ ಅವನ ಮೊಂಡೆಗಳನ್ನು ತೋಯಿಸಿದವು ಆದರೂ ಕೈಯ ಕೆಲಸ ಹಾಗೆಯೇ ಸಾಗಿತ್ತು.

"ಎತ್ತಾಗ ನೋಡತೀಯೋ? ಹಾಲು ಚಲ್ಲಾಕ ಹತ್ತಿದಾವ, ನೋಡು" ಎಂದಳು ಬಾಗಿಲಲ್ಲಿ ನಿಂತು ಹಾಲಿನ ದಾರಿ ಕಾಯುತಲಿದ್ದ ನಾಗಮ್ಮ.

ಹನುಮ ಎಚ್ಚತ್ತ. ಮೋರೆ ಹುಚ್ಚಿಟ್ಟಿತ್ತು.

"ಏನು ದ್ಯಾನಸಾಕ ಹತ್ತೀದಿ?"

"ಯಾಕಿಲ್ಲ ಏನಿಲ್ಲ ಗಂಗೀ ನೆನಪಾಗಿತ್ತು. ನನ್ನ ಹಿಂದಿನ ಬಾಳೇವು ನೆನಪಿಗೆ ಬಂದಿತ್ತು!" ಹನುಮನ ಸರಳವಾದ ಹೃದಯದಿಂದ ಸರಳವಾದ ಉತ್ತರ ಬಂತು.

ನಾಗಮ್ಮ ಮೋರೆ ಕಿವುಚಿದಳು; ಮೂಗು ಮುರಿದಳು. ಅವನ ಉತ್ತರ ಆಕೆಗೆ ಅಪಥ್ಯವಾಯಿತೇನೋ? ತಟ್ಟನೆ ಒಳಗೆ ಹೋದಳು.

ತಿಂಗಳ ಅವಧಿಯಲ್ಲಿ ಆತನ ಸ್ಮೃತಿಪಟಲದಿಂದ ಸಂಪೂರ್ಣವಾಗಿ ಮಾಸಿಹೋಗಿದ್ದ ಗಂಗೆಯ ನೆನಪು ಈ ದಿನ ಆತನಿಗೆ ಮೊದಲು ಸಲ ಬಂತು. ಆಕೆ ಜೀವಂತವಿದ್ದಾಗ—ಸಾಯುವ ದಿನದ ವರೆಗೂ— ಆ ಕುರಿಗಳನ್ನು, ಆ ಆಡುಗಳನ್ನು, ಆ ಟಗರುಗಳನ್ನು ತನ್ನ ಮಕ್ಕಳಂತೆ ಸಲಹುತ್ತ ಬಂದಿದ್ದಳು. ನಾಯಿಯೆಂದರಂತೂ ಆಕೆಗೆ ಇಲ್ಲದ ಪ್ರೀತಿ. ದೊಡ್ಡಿಯನ್ನು ಹಸನ ಮಾಡುವದರಲ್ಲಿ ಆಕೆ ಎಂದೂ ಬೇಸರಪಟ್ಟುಕೊಂಡಿದ್ದಿಲ್ಲ. 'ದೇವತೆ'ಯ ಕಾಲದಲ್ಲಿ 'ಮಾಳಹಬ್ಬ'ದಲ್ಲಿ ಜನ ಎಷ್ಟು ದುಂಬಾಲು ಬಿದ್ದರೂ ಒಂದು ಕುರಿಯನ್ನು ಸಹ ಆಕೆ ಕಡಿಯಲು ಕೊಡುತ್ತಿರಲಿಲ್ಲ. ಅಂತೆಯೇ ಇಂದಿನ ವರೆಗೆ ಆ ಕುರಿವಿಂಡಿಗೆ ಆ ದೊಡ್ಡಿಯಲ್ಲಿ, ಆ ನಾಯಿಯ ಕಾವಲಿನಲ್ಲಿ, ಯಾವ ಬಗೆಯ ಭೀತಿಯೂ ಇರಲಿಲ್ಲ.

ಈ ದಿನ ಅವು ಪರರ ಅಧೀನ ಆಗುವವು. ದೊಡ್ಡಿ ನಿರ್ಜನವಾಗುವದು. ನಾಳೆಯೋ, ನಾಡದೋ, ಇನ್ನೊಂದು ತಿಂಗಳಲ್ಲಿಯೋ, ದೊಡ್ಡಿಯ ತುಂಬ ಹುಲ್ಲು ಬೆಳೆದು, ಕಸ ಪಸರಿಸಿ, ಹಾಳುಹಾಳು ಸುರಿಯುಹತ್ತುವದು. ಕೆಲವೇ ದಿನಗಳಲ್ಲೆ ಅದೆಲ್ಲ ಹಾಳು ಬಯಲಾಗಿ, ಅಲ್ಲಿ ನೂರಾರು ತಾಯಂದಿರು ತಮ್ಮ ಮಕ್ಕಳಿಗೆ ಅಕ್ಕರೆಯಿಂದ ಮೊಲೆಯುಣಿಸುತ್ತಿದ್ದವೆಂಬ, ನೂರಾರು ಮರಿಗಳು ಹಗಲು ರಾತ್ರಿ ಚೆನ್ನಾಟ ಪಾಡುತ್ತಿದ್ದವೆಂಬ, ವರ್ಷಾನುಕಾಲ ಕ್ಷೀರಸಾಗರ ಭೋರ್ಗರೆಯುತ್ತಿದ್ದಿತೆಂಬ ಕಲ್ಪನೆಯು ಸಹ ಬಾರದಷ್ಟು ಹಾಳು ನೆಲವಾಗಿ, ಕಾಡಾಗಿ ಹೋಗುವದು.

ಹನುಮ ಉಸಿರ್ಗರೆದ. ಅತ್ತ ಇತ್ತ ಮುಖ ತಿರುಹಿದ. ಅಲ್ಲಿಷ್ಟು ಇಲ್ಲಿಷ್ಟು ಗುಂಪುಗಟ್ಟಿಗೊಂಡು ಕುರಿಗಳು ಶಾಂತವಾಗಿ ನಿಶ್ಚಿಂತೆಯಿಂದ ಮಲಗಿಕೊಂಡಿದ್ದವು. ಹನುಮ ಹಳಹಳಿಪಟ್ಟ. ಭಾರವಾದ ಮನಸ್ಸಿನಿಂದಲೇ ಹಾಲಿನ ತಂಬಿಗೆಯನ್ನು ಗುಡಿಸಲಿನಲ್ಲಿಟ್ಟು, ಗೊಂಗಡಿಯನ್ನು ಸಿದ್ಧಗೊಳಿಸಿಕೊಂಡು ಹೊ ರ ಗೆ ಬ ಂ ದ. ದೊಡ್ಡಿಯ ಬಾಗಿಲು ತೆರೆದ. ಟಗರುಗಳ ಕಣ್ಣೆ ಹರಿದ. ಸಿಳ್ಳು ಹೊಡೆದು, 'ಉಶ್' ಎಂದು ಸಪ್ಪಳ ಮಾಡಿ ಎಲ್ಲ ಕುರಿಗಳನ್ನು ಹೊರಗೆ ಹೊಡೆದ. ನಡೆಯಲು ಬಾರದ ಮರಿಗಳನ್ನು ಬಗಲಲ್ಲಿ ಅವಚಿಗೊಂಡು ಖಿನ್ನವದನನಾಗಿ ದೊಡ್ಡಿಯ ಜೀವವನ್ನೇ ಕಿತ್ತುಕೊಂಡು ಮುಂದೆ ಮುಂದೆ ಸಾಗಿದ. ಅವನ ಹೆಜ್ಜೆಯಲ್ಲಿ ಹೆಜ್ಜೆಯಿಡುತ್ತಾ ನಾಯಿ ಸಾಗಿತು. ಕುರಿಗಳೂ ಒಂದೊಂದಾಗಿ, ಎರಡೆರಡಾಗಿ, ಹಿಂಡು ಹಿಂಡಾಗಿ ನಾಯಿಯ ಹಿಂದೆ ಐಗಿದವು. ಅವು ನೆಲದಲ್ಲಿ ಇಟ್ಟ ದಿಟ್ಟಿಯನ್ನು ಮೇಲೆತ್ತಲಿಲ್ಲ. ಎಲ್ಲಿಗೆ ಹೋಗುವೆವೆಂಬ ಅರಿವಾದರೂ ಅವಕ್ಕೆಲ್ಲಿ? 'ಆ ನಂಬುಗೆಯ ನಾಯಿ ಇರುವವರೆಗೆ ನಮಗೆ ಸಾವಿನ ಭಯವೆಲ್ಲಿ? ಆ ಒಡೆಯನಿರುವವರೆಗೆ ಅನ್ನದ ಕೊರತೆಯೆಲ್ಲಿ? ಹೊಟ್ಟೆತುಂಬ ಹುಲ್ಲು ತಿಂದು ನೀರು ಕುಡಿದು ಎಲ್ಲಿದ್ದರೂ ಸಂಜೆಗೆ ದೊಡ್ಡಿಗೆ ಮರಳುವೆವು' ಎನ್ನುವಂತೆ ಸಾಗಿದ್ದವು.

ಹಳ್ಳಿ ಬಂತು. ಆ ಕುರಿಗಳಿಗಾಗಿಯೇ ಮೀಸಲಾಗಿಟ್ಟ ದೊಡ್ಡಿಯೂ ಬಂತು. ಅವೆಲ್ಲವುಗಳನ್ನು ಅಲ್ಲಿ ಕೂಡಿ, ಆ ಮೇಲೆ ಸಾವುಕಾರನ ಕಡೆಗೆ ಹಣ ಎಣಿಸಿಕೊಳ್ಳಲು ಹೋಗಬೇಕೆಂದು ಮನದಂದು, ಹನುಮ ದೊಡ್ಡಿಯ ಒಳಗೆ ಎಲ್ಲ ಹಿಂಡನ್ನು ಹೊಡೆದ. ಆತನ ಮುಖ ಮ್ಲಾನವಾಗಿತ್ತು. ತಲೆ ವಿಚಾರಗಳ ಆಘಾತ ಪ್ರತ್ಯಾಘಾತಗಳ ಹೊಡತಕ್ಕೆ ಸಿಲುಕಿ ಬಾಗಿತ್ತು. ಕಡೆಯ ಕುರಿ ಒಳಹೊಕ್ಕು, ಬೇಲಿಯ ಬಾಗಲವನ್ನು ಆತ ಇಕ್ಕುವಾಗ, ಹೃದಯವನ್ನೇ ಹರಿದು ಚಲ್ಲಿದಷ್ಟು ವ್ಯಥೆಯಾಯಿತು. ತನ್ನ ಜೀವಾಳದಂತಿದ್ದ ಆ ಹಿಂಡನ್ನು ಇಷ್ಟು ಅನಾಯಾಸವಾಗಿ ತನ್ನಿಂದ ಬೇರ್ಪಡಿಸಿದೆನಲ್ಲ ಎಂದು ಆತ ನಾಚಿಕೊಂಡ. ಆ ಬೇಲಿಯ ಮುಳ್ಳುಗಳೆಲ್ಲ ಒಮ್ಮೆಲೇ ಅವನ ರೋಮಗಳ ರಂಧ್ರ-ರಂಧ್ರದಲ್ಲಿ ಚುಚ್ಚಿದಂತಾಯಿತು.

ಮನಸ್ಸು ಗಟ್ಟಿಮಾಡಿ ಆತ ಹಿಂಡಿನ ಕಡೆಗೆ ಬೆನ್ನು ಮಾಡಿದ; ಅಸಹ್ಯ ವೇದನೆಯನ್ನು ಸಹಿಸಿಕೊಂಡು ಮುಂದೆ ಸಾಗಿದ.

ಹತ್ತು ಹೆಜ್ಜೆ ಹೋಗಿರಲಿಲ್ಲ. ಬೆನ್ನು ಹಿಂದೆಯೇ ನಾಯಿಯ ಗಂಟೆಯ ಸಪ್ಪಳ ಕೇಳಿಸಿತು. ಆತ ಹಿಂದಿರುಗಿದ. ಬೆನ್ನು ಹತ್ತಿ ಬರುತ್ತಿದ್ದ ನಾಯಿ ಗಕ್ಕನೆ ನಿಂತಿತು; ಕಿವಿಗಳನ್ನು ನಿರಿಸಿತು; ಬಾಲವನ್ನು ಗುಂಡಾಡಿಸಿತು; ಅವನನ್ನೇ ನೋಡಹತ್ತಿತು. ಅದಕ್ಕೆ ತಿಳಿದಿತ್ತೇನೋ? "ನನ್ನನ್ನು ಬಿಟ್ಟು ಹೋಗಬೇಡ!" ಎಂದು ಅಂಗಲಾಚಿ ಬೇಡಿಕೊಳ್ಳುವಂತಿತ್ತು ಅದರ ನೋಟ. ಹನುಮ ದೊಡ್ಡಿಯ ಕಡೆಗೆ ಮುಖ ಹೊರಳಿಸಿದಾಕ್ಷಣ ಎಲ್ಲ ಕುರಿಗಳು ಹೌಹಾರಿ ಇವನ ಕಡೆಗೇ ಮುಖದಿರುಗಿ ನಿಂತುದನ್ನು ಕಂಡ. ಹನುಮ ಹೆಗಲ ಮೇಲಿನ ಗೊಂಗಡಿಯನ್ನು ಹಾರಿಸಿದ. ತತ್‌ಕ್ಷಣ ಎಲ್ಲ ಕುರಿಗಳೂ ಒದರಿದವು. ಆಡಿನ ಮರಿಗಳು ಬೇಲಿಯ ಬಾಗಿಲವನ್ನು ಜಿಗಿದು ಹೊರಗೆ ಬರಲು ಭಗೀರಥಯತ್ನ ನಡೆಸಿದವು.

ಹನುಮನ ಎದೆ ಕರಗಿತು. ಕಾಲು ಮುಂದೆ ಹೆಜ್ಜೆ ಇಡದಾದವು. ಆತ ಅಲ್ಲಿಯೇ ಕುಳಿತ.

ಬೇಲಿಯ ಆಚೆಯಿಂದ "ಎಪ್ಪಾ!" ಎಂದು ದನಿ ಬಂತು. ಆ ದನಿಯ ಹಿಂದೆಯೇ ಹನುಮನ ಮಗ, ಕೆಂಚ, ಕುಂಟುತ್ತ ಬರುತಲಿದ್ದ. ಕೆಂಚ ಬೇಲಿಯ ಸಾಲುಗಳನ್ನು ದಾಟಿ ಬೈಲಿಗೆ ಬಂದಾಗ ಅವನ ಎಡಪಾದಕ್ಕೆ ಅರಿವೆ ಸುತ್ತಿದುದನ್ನು ಕಂಡ ಹನುಮ.

"ಯಾಕಲೇ, ಕಾಲಿಗೆ ಏನಾಗೈತಿ?" ಎಂದ ಹನುಮ.

"ಏನೂ ಇಲ್ಲ ಬಿಡು ಎಪ್ಪಾ, ನಿನ್ನೆ ಸೊಪ್ಪೀ ಕೊರಿಯಾಕ ಹತ್ತಿದ್ನೇ? ಆವಾಗ ಕಾಲಿಗೆ ಕುಡಗೋಲು ಹತ್ತೈತಿ" ಎಂದ. ಕೆಂಚ ಹಾಗನ್ನುವಾಗ ಕೆಂಚನ ಮುಖ, ಕಣ್ಣುಗಳು, ನಗೆಯಿಂದ ಅರಳಿದ್ದವು. ಆದರೂ ಆ ಹಸುಳನ ದುಃಖವುಕ್ಕಿ ಆ ಅರಳಿದ ಕಣ್ಣುಗಳಿಂದಲೇ ಎರಡು ಹನಿ ನೀರು ಉದುರಿದವು—ಪ್ರಭಾತದ ಅರಳಿದ ತಾವರೆಯ ಒಡಲಿನಿಂದ ನೀರು ಉದುರಿದಂತೆ. ಕೆಂಚನ ಆ ಮುದ್ದು ಮೊಗ, ಆ ನಸುನಗೆ, ಆ ಕಣ್ಣುಗಳು, ನಗೆಗಣ್ಣಲ್ಲಿಯೇ ತಲೆದೋರಿದ ಆ ಹನಿಗಳು ಅವನಿಗೆ ಗಂಗೆಯ ಒಂದು ಮಧುರ ಪ್ರಸಂಗವನ್ನು ನೆನಪಿಗೆ ತಂದುಕೊಟ್ಟವು:

ಹಿಂದೆ ಹನುಮನಿಗೆ ಕಾಯಿಲೆಯಾಗಿತ್ತು. ಗಂಗೆ ಮೋಸಂಬಿಯ ಹಣ್ಣುಗಳನ್ನು ಹೆಚ್ಚುತ್ತಿದ್ದಳು. ಅಕಲ್ಪಿತವಾಗಿ ಈಳಿಗೆ ಅವಳ ಬೆರಳಿಗೆ ಹತ್ತಿತ್ತು. ಬೆರಳಿಗೆ ಅರಿವೆ ಕಟ್ಟಿಕೊಂಡು ಆಕೆ ಮೋಸಂಬಿಯ ಹೋಳುಗಳನ್ನು ಅವನ ಮುಂದೆ ಇಟ್ಟಾಗ, ಅರಿವೆ ಕಟ್ಟಿದ ಬೆರಳನ್ನು ನೋಡಿ ಆತ ಅವಳಿಗೆ ಇದೇ ಪ್ರಶ್ನೆಯನ್ನಿಟ್ಟಿದ್ದ. ಆಕೆಯೂ ಕೆಂಚನಂತೆ ಅದೇ ದನಿಯಲ್ಲಿ ಅದೇ ರೀತಿಯಿಂದ ಉತ್ತರ ಕೊಟ್ಟಿದ್ದಳು. ಅದೇ ಮುಖ; ಅದೇ ನಗೆ; ಅಂಥವೇ ಕಣ್ಣುಗಳು; ಅದೇ ಬಗೆಯ ಕಣ್ಣ ಹನಿ!

ಕೆಂಚ ಹನುಮನ ಗಲ್ಲ ಹಿಡಿದು ದೈನ್ಯದಿಂದ ಕೇಳಿದ: "ಎಪ್ಪಾ, ಹಬ್ಬಕ್ಕ ಊರಿಗೆ ಬರಬೇಕು ಅನ್ನಾಂಗ ಆಗೈತಿ. ಗೌಡರಿಗೆ ಹೇಳತೀಯಾ—ನಾಕು ದಿನ ಊರಿಗೆ ಬಿಡ್ರಿ ಅಂತಾ?"

ಹನುಮ ಮಾತನಾಡಲಿಲ್ಲ. ತನ್ನ ಎರಡೂ ಕೈಗಳಲ್ಲಿ ಗಲ್ಲಗಳನ್ನಿರಿಸಿ ಎತ್ತಲೋ ನೋಡುತ್ತ ಅಚಲ ದೃಷ್ಟಿಯಿಂದ ಕುಳಿತಿದ್ದ. ಆತ ಇಲ್ಲಿರಲಿಲ್ಲ.

ಐದು ನಿಮಿಷ ಸಂದವು. ಹತ್ತು ನಿಮಿಷ ಸಂದವು. ನೋಡನೋಡುತ್ತ ಕಣ್ಣುಗಳು ನೀರಿನಿಂದ ತುಂಬಿದವು. ನೀರಿನಲ್ಲಿ ಅಡಗಿದ್ದ ಮೀನವೊಂದು ತಟ್ಟನೆ ಮೇಲೆ ಜಿಗಿದು ಮೈದೋರಿ ಮತ್ತೆ ಮುಳುಗಿದಂತೆ, ಅವನ ವಿಚಾರಗಳ ಒಂದು ತುಣುಕು ಶಬ್ದರೂಪವಾಗಿ ಅವನ ಬಾಯಿಯಿಂದ ಹೊರಹೊಮ್ಮಿತು:

"ಈ ಮಗ, ಈ ಮೂಕ ಮಕ್ಕಳು, ನನ್ನ ಹೆಂತ್ಯಾಕs ಇದ್ದರ, ಹತ್ತು ವರಸದಾಗ ಇದರ ಅಪ್ಪನಂತಾ ತೋಟಾ ಕೊಂಡೇನು!"

ಹೀಗೆನ್ನುವಾಗ ಹನುಮ ಕಲ್ಪನಾ ಜಗತ್ತಿನಲ್ಲಿದ್ದ. ಮಂಥನದಿಂದ ಇಲ್ಲಿಯವರೆಗೆ ಕಲುಕಿದ ಅವನ ಹೃದಯ ಇದೀಗ ತಿಳಿಯಾಗಿತ್ತು. ಇಲ್ಲಿಯವರೆಗೆ ಕಾಣದಾದ ಗಂಗೆಯ ಮುದ್ದು ಮೊಗ ಅಲ್ಲಿ ಸ್ವಚ್ಛವಾಗಿ, ಸ್ಪಷ್ಟವಾಗಿ ಒಡಮೂಡಿತ್ತು. ಆ ಕಲ್ಪನಾಜಗತ್ತಿನಲ್ಲಿದ್ದಂತೆಯೇ, ಅವನ ಕಲ್ಪನೆ ಓಡಿಹೋಗಿ ದೊಡ್ಡಿಯ ಬಾಗಿಲವನ್ನು ಮುಕ್ತಮಾಡಿತು. ತತ್‌ಕ್ಷಣ ಆ ಕುರಿಯ ಹಿಂಡೆಲ್ಲ ಗಂಗೆಯ ನೂರಾರು ರೂಪ ತಾಳಿ, ಆನಂದಾತಿರೇಕದಿಂದ ನಲಿಯುತ್ತ, ನಗುತ್ತ, ಕುಣಿಯುತ್ತ, ಅವನನ್ನು ಸುತ್ತುಗಟ್ಟಿದವು.

ಹನುಮ ಕಲ್ಪನಾವಿಲಾಸದಿಂದ ಹೊರಬಂದ; ಕಣ್ಣೊರಸಿಕೊಂಡ. ಕೆಂಚನ ಗಲ್ಲಕ್ಕೊಮ್ಮೆ ಮುದ್ದಿಟ್ಟು, ದೊಡ್ಡಿಯ ಕಡೆಗೆ ಧಾವಿಸಿ, ಬಾಗಿಲು ತೆರೆದ.

ಹನುಮ ತನ್ನ ಮಗನನ್ನೂ ಕುರಿಯ ಹಿಂಡನ್ನೂ ಕೂಡಿಕೊಂಡು ತಿರುಗಿ ಹೊರಟ ಸುದ್ದಿ ಮುಟ್ಟಿದೊಡನೆ ನಾಗಮ್ಮ ಕಿಡಿಕಿಡಿಯಾದಳು. "ನನ್ನ ಮ್ಯಾಕ ಇವನ ಪಿರೀತೀನs ಇಲ್ಲ. ಊರಾಗ ಒಂದು ಗೇಣು ಹೊಲ ಇಲ್ಲ. ಒಂದು ಮನೀ ಇಲ್ಲ. ಸಾಲದಕ್ಕ ಆ ಹುಡುಗ ಬ್ಯಾರೆ. ಅವನ ಕಟಗೊಂಡು ಸುರಕೊಂಬದs ಸೈ!" ಎಂದು ಅಂದಳಾಕೆ.

ಹನುಮ ಗುಡಿಸಲಿಗೆ ಬಂದಾಗ ಬಾಗಿಲು ತೆರೆದಿತ್ತು. ಒಳಗೆ ಯಾರೂ ಇರಲಿಲ್ಲ. ನಾಗಮ್ಮನ ಹಾಸಿಗೆ, ಸೀರೆ,—ಎಲ್ಲವೂ ಮಾಯವಾಗಿದ್ದವು. ಆಕೆ ಆ ಊರಲ್ಲಿಯೂ ಇರಲಿಲ್ಲ.

ಈ ಸುದ್ದಿಯನ್ನು ಕೇಳಿ ಹನುಮನ ಮನ ಹೂವಿಗಿಂತಲೂ ಹಗುರಾಯಿತು.

# ಜೀವನ, ಸಮಾಜ ಮತ್ತು ಮಾನಸಶಾಸ್ತ್ರ

ಮಾನಸಶಾಸ್ತ್ರವು ವಿಜ್ಞಾನಶಾಖೆಗಳಲ್ಲಿ ಈಚೆಗಿನದು. ಆದರೂ ಅದರ ಪ್ರಭಾವವು ನಮ್ಮ ಜೀವನದ ಮೇಲೆ, ವಿಚಾರಗಳ ಮೇಲೆ ಮತ್ತು ವೈಯಕ್ತಿಕ ಸಾಮಾಜಿಕ ಭಾವನೆಗಳ ಮೇಲೆ ಗಹನವಾದ ಪರಿಣಾಮ ಮಾಡಿದೆ. ಇದು ಕೆಲವು ಕ್ಷೇತ್ರಗಳಲ್ಲಿ ಹಿತವನ್ನುಂಟುಮಾಡಿದ್ದರೆ ಮತ್ತೆ ಕೆಲವದರಲ್ಲಿ ನಮ್ಮ ಬಾಳಿನ ನೆಲೆಗಟ್ಟನ್ನೇ ಸಡಿಲಿಸಿ ಅಹಿತವನ್ನೂ ಮಾಡಿದೆ.

ಲೇಖಕರು: ಶ್ರೀ. ಗೌರೀಶ ಕಾಯ್ಕಿಣಿ

ನಿಸರ್ಗದಲ್ಲಿ ಮನುಷ್ಯನಿಗಿಂತಲೂ ಮನುಷ್ಯನಲ್ಲಿ ಮನಸ್ಸಿಗಿಂತಲೂ ಮಿಗಿಲಾದದ್ದು ಇನ್ನಾವದೂ ಇಲ್ಲವೆನ್ನುತ್ತಾರೆ. ಈ ಅಭಿಪ್ರಾಯವನ್ನು ಪೂರ್ತಿಯಾಗಿ ಒಪ್ಪಿಕೊಳ್ಳಲು ಕೆಲವು ಯಥಾರ್ಥವಾದಿಗಳು ಸಿದ್ಧರಾಗಲಿಕ್ಕಿಲ್ಲ. ಮನುಷ್ಯನೇ ಮಿಗಿಲೆಂಬ ಮಾತು ವಸ್ತುಸ್ಥಿತಿಗಿಂತ ಈ ವ್ಯಾಖ್ಯೆ ಮಾಡುವ ಮನುಷ್ಯನ ಅಹಂಕಾರವನ್ನೇ ಹೆಚ್ಚು ವ್ಯಕ್ತಪಡಿಸುತ್ತದೆಂದು ಅವರು ಅನ್ನಬಹುದು. ಆದರೆ ಈ ವಾಕ್ಯದ ಉತ್ತರಾರ್ಧವನ್ನು ಒಪ್ಪಿ-ಕೊಳ್ಳಲು ಅಷ್ಟೇನೂ ಅಡ್ಡಿ ಬರಲಾರದು. ಮನುಷ್ಯನ ಸ್ಥಾನ-ಮಾನ ಏನೇ ಇರಲಿ, ನಿಸರ್ಗದಲ್ಲಿ ಮನಸ್ಸಿನ ಮೇಲ್ಮೆಯೂ ಮಹಿಮೆಯೂ ಸ್ವತಃ-ಸಿದ್ಧವಾದದ್ದು. ಅದೇಕೆ ? ಮನುಷ್ಯನು ಮಿಗಿಲೆನ್ನುವದಾದರೂ ಅವನಲ್ಲಿ ಮೂಡಿ ಮೂರ್ತವಾದ ಮನಸ್ಸಿನ ಮೂಲಕವೇ ಸರಿ. ಮಾನವರು ಮನುವಿನ ಮಕ್ಕಳು ಅಹುದೋ ಅಲ್ಲವೋ— ಅದು ಪುರಾಣಿಕರಿಗೂ ಪುರಾತತ್ವವೇತ್ತರಿಗೂ ಬಿಟ್ಟ ವಿಷಯ. ಆದರೆ ಅವರು (ಅಂದರೆ ಪುರಾಣಿಕ ಮುಂತಾದವರಲ್ಲ!) ಮನಸ್ಸಿನ ಮಕ್ಕಳೆಂಬುದು ಮಾತ್ರ ಸತ್ಯ. "ಮನ್" ಧಾತುವಿನಿಂದ ಸಿದ್ಧವಾದ "ಮಾನವ" ಶಬ್ದವೇ ಇದಕ್ಕೆ ಸಾಕ್ಷಿ. ಮಾನವಜೀವನವು ಮಾನವನ ಮನೋಗತಿಗಳ ವಿನ್ಯಾಸವು; ಮನೋರಥಗಳ ವಿಲಾಸವು; ಮನೋಧರ್ಮಗಳ ವಿಕಾಸವು. ಮನಃಶಕ್ತಿ, ಮನಃಶುದ್ಧಿ ಮತ್ತು ಮನಃಶಾಂತಿ— ಈ ಮಾತನ್ನು ಅವಲಂಬಿಸಿಯೇ ಮನುಷ್ಯಕೋಟಿಯ ಸಮಸ್ತ ಅಭ್ಯುದಯ ಮತ್ತು ನಿಃಶ್ರೇಯಸವು ನಿಂತಿದೆ.

ನಾವು ಇಲ್ಲಿ ನಿರೂಪಿಸಬೇಕೆಂದಿರುವದು ಈ ಮನಸ್ಸಿನ ಕುರಿತು ಬೆಳೆದ ಶಾಸ್ತ್ರದ ಪ್ರಭಾವದ ಕುರಿತು. ಈ ಮನಃಶಾಸ್ತ್ರದ ಪ್ರಭಾವವು ಯಾವ ಸ್ವರೂಪದ್ದು ? ಅದು ಸಮಾಜದ ಮೇಲೆ ಏನಾಗಿದೆ?- ಎಂತಾಗಿದೆ?- ಎಂಬುದು ನಾವು ಇಲ್ಲಿ ಉತ್ತರಿಸಬೇಕಾದ ಪ್ರಶ್ನೆ.

ಶಾಸ್ತ್ರವೆಂದರೇನು? ಅದು ವ್ಯವಸ್ಥಿತವಾದ ಸುಸಂಘಟಿತವಾದ ವಾಸ್ತವ ಜ್ಞಾನ. ಇಂಥ ಜ್ಞಾನವು ಒಂದು ಶಕ್ತಿ. ಅಂಥ ಜ್ಞಾನಿಗಳು ಪ್ರಪಂಚದಲ್ಲಿ ಪ್ರಭಾವಶಾಲಿಗಳು. ಈ ಪ್ರಭಾವವು ಅವರವರ ಜ್ಞಾನದ ಕಾರ್ಯಕ್ಷೇತ್ರಗಳಿಗೆ ಸೀಮಿತವಾಗಿದ್ದರೂ ಆ ಕ್ಷೇತ್ರಗಳ ಸಾಮಾಜಿಕ ಮಹತ್ವದ ತಾರತಮ್ಯದಂತೆ ಈ ಶಾಸ್ತ್ರಜ್ಞರ ಶಕ್ತಿಯ ಪ್ರಭಾವಲಯವೂ ಚಿಕ್ಕದೊಡ್ಡದಾಗುತ್ತದೆ. ಅಲ್ಲದೆ, ವೈಜ್ಞಾನಿಕ ಕಾರ್ಯದ ಕ್ಷೇತ್ರವೇ ಎರಡು ಬಗೆಯಾಗಿರುವದುಂಟು. ಒಂದು, ಅದರ ತಂತ್ರದ ವಿಶಿಷ್ಟ ಚಟುವಟಿಕೆಗಳ ಕ್ಷೇತ್ರ; ಇನ್ನೊಂದು, ಆ ಚಟುವಟಿಕೆಗಳ ಪರಿಣಾಮದ ಕ್ಷೇತ್ರ.

ಮೂಲದಲ್ಲಿ ವಿಜ್ಞಾನಿಯ ಇಲ್ಲವೆ ಶಾಸ್ತ್ರಜ್ಞನ ಶೋಧಶ್ರಮವೆಲ್ಲ ಪ್ರಯೋಗಶಾಲೆ ಪಾಠಶಾಲೆಗಳಲ್ಲಿ ಜನಸಂಪರ್ಕದಿಂದ ದೂರವಾಗಿಯೇ ಸಾಮಾಜಿಕ ಹೊಣೆಗಾರಿಕೆಯ ಅರಿವು ಪರಿವೆಗಳಿಲ್ಲದೆ ನಡೆದಿರಬಹುದು. ಆದರೆ ಮುಂದೆ ವಿಜ್ಞಾನದ ಶಕ್ತಿ ಇಲ್ಲಿಗೇ ನಿಲ್ಲದು. ಸಂಶೋಧನ ಮೂಲಗಾಮಿ ಇದ್ದಷ್ಟು ಅದರ ಪರಿಣಾಮವು ದೂರಗಾಮಿಯಾಗುವದು. ಜೀವನದ ಆಳದಲ್ಲಿಯ ಸತ್ವ-ಧಾತುಗಳನ್ನು ಅರಿತುಕೊಳ್ಳಲು ಹೊರಟ ವಿಜ್ಞಾನಪ್ರಕ್ರಿಯೆಯು ಅವುಗಳನ್ನು ಇದ್ದಕ್ಕೆ ಇದ್ದಂತೆಯೇ ಬಿಡಲಾರದು. ವಸ್ತುಪಲ್ಲಟನೆಯ ಯತ್ನವಿಲ್ಲದೆ ಯಾವ ಜ್ಞಾನವೂ ಸಾಧ್ಯವಿಲ್ಲ. ಆದ್ದರಿಂದ ಒಂದು ಶೋಧ, ಒಂದು ಸೂತ್ರ, ಒಂದು ಸಿದ್ಧಾಂತ ಅದರ ಜನಕನು ಬಗೆದುದಕ್ಕಿಂತ ಬೇರೆಯಾದ ವಿವಿಧ ವಿನಿಯೋಗಕ್ಕೆ, ಪ್ರಯೋಜನಕ್ಕೆ ಜನತೆಯನ್ನು ಒಯ್ಯುವದು. ಹಸ್ತಸಾಮುದ್ರಿಕ ತಮಗೆ ಗೊತ್ತು ತಾನೆ? ಆ ವಿದ್ಯೆಯ ಅಂಗವಾಗಿ ಒಂದು ಸಂಗತಿಯು ಶೋಧವಾಯಿತು. ವ್ಯಕ್ತಿ ವ್ಯಕ್ತಿಗಳ ಬೆರಳುಗಳ ರೇಖಾರಚನೆಗಳು ಬೇರೆ ಬೇರೆಯಾಗಿರುತ್ತವೆಂದು ಸಿದ್ಧವಾಯಿತು. ಇದೊಂದು ನಿರುಪದ್ರವಿಯಾಗಿ ಕಾಣುವ ಪುಟ್ಟ ಶೋಧ. ಆದರೆ ಇದರ ಪ್ರಭಾವ ಎಲ್ಲಿಗೆ ಬಂದಿತು ನೋಡಿರಿ! ಬೆರಳುಗಳ ಗುರುತುಗಳಿಂದ ಕಳ್ಳ ಕೊಲೆಗಡಕರನ್ನು ಹುಡುಕಿಕೊಳ್ಳುವ ಕಲೆಯೊಂದು ನಿರ್ಮಾಣವಾಯಿತು! ಇದರಿಂದ ಅಂಥ ಕೇಡಿಗಳ ಕುಲ ನಿರ್ನಾಮವಾಯಿತೆ? ಇಲ್ಲ. ಅವರೂ ಈ ಶೋಧಕ್ಕೆ ಹೊಂದಿಕೊಂಡು ತಮ್ಮ ಕಾರ್ಯಪದ್ಧತಿಯನ್ನೇ ಕೊಂಚ ಬದಲಾಯಿಸಿದರು. ಸಿರಿವಂತ ಸಂಭಾವಿತರು ಸಭ್ಯ ಸ್ತ್ರೀ–ಪುರುಷರನ್ನು ಕಂಡು ಕೈಕುಲುಕುವಾಗ ಕೈ ಚೀಲಗಳನ್ನು ತೊಡುತ್ತಿದ್ದರೆ, ಈ ಚಲಿಗಳು ಅವರ ಕೊರಳು ಹಿಚುಕುವಾಗಲೂ ಆ ಕೈಚೀಲಗಳನ್ನು ಹಾಕಿಕೊಳ್ಳುವಂತಾಯಿತು. ಇದರಿಂದ ಕೈಚೀಲಗಳ ಬಳಿಕೆಯೂ ಅವುಗಳ ಮಾರಾಟಗಾರರ ಗಳಿಕೆಯೂ ಹೆಚ್ಚಾಯಿತು! ಆದರೆ ಇದೆಲ್ಲ ಮಾತು ಬೇರೆ. ಇದರೊಳಗಿನ ವಿನೋದವೇನೇ ಇದ್ದರೂ ವಿಷಯ ಗೊತ್ತಾಯಿತೆ? ಶಾಸ್ತ್ರ ಮತ್ತು ಅದರ ವಿನಿಯೋಗ ಇವುಗಳ ರೀತಿ ಈ ರೀತಿ ಸಾಗುತ್ತದೆ. ಮನಃಶಾಸ್ತ್ರದ ಪ್ರಭಾವದ ಕತೆಯೂ ಇದೇ ದಾರಿಯಲ್ಲಿ ಸಾಗಿದೆ.

ಒಂದು ವಿಜ್ಞಾನವಾಗಿ ಮನಃಶಾಸ್ತ್ರವು ರೂಪುಗೊಂಡದ್ದು ೧೯ ನೇ ಶತಮಾನದಿಂದ. ಇದು ತೀರ ತರುಣ ಶಾಸ್ತ್ರ. ಪದಾರ್ಥವಿಜ್ಞಾನ, ರಸಾಯನ ಶಾಸ್ತ್ರ, ಪ್ರಾಣಿಶಾಸ್ತ್ರಗಳ ಕೆಲವು ಶಾಖೆಗಳು-ಇವುಗಳಿಗಿಂತ ಇದು ಅಲ್ಪ ವಯಸ್ಸಿನದು. ಹಾಗೆ ನೋಡಿದರೆ, ಮನಸ್ಸಿನ ಕುರಿತು ಕುತೂಹಲವೂ ಜಿಜ್ಞಾಸೆಯೂ ಮಾನವನಷ್ಟೇ ಪ್ರಾಚೀನವಾಗಿದೆ. ತತ್ವಜ್ಞಾನದ, ವೇದಾಂತದ ಇತರ ಅಂಗಗಳಷ್ಟೇ ಸಮೀಚೀನವಾಗಿ ಮನಸ್ತತ್ವದ ಕುರಿತು ಮೇಧಾವಿಗಳು ಅನಾದಿಯಿಂದಲೂ ವಿಮರ್ಶೆ ಮಾಡುತ್ತ ಬಂದಿದ್ದಾರೆ. ಪ್ಲೇಟೊ, ಎರಿಸ್ಟಾಟಲ್ ಅವರಿಗೂ ಮೊದಲು ಭಾರತದ ದಾರ್ಶನಿಕರೂ ಭಗವದ್ಗೀತಾಕಾರರೂ ಭಗವಾನ್ ಪತಂಜಲಿಗಳೂ ಬೌದ್ಧ ತತ್ವವೇತ್ತರೂ ತಕ್ಕಮಟ್ಟಿಗೆ ತಮ್ಮಮಟ್ಟಿಗೆ ಮನಸ್ಸಿನ ಸ್ವರೂಪದ ವ್ಯಾಖ್ಯಾನ ಮಾಡಿದ್ದರು.

ಅದಾಗ್ಯೂ ಆರಂಭದಲ್ಲಿ ಮನಸ್ತತ್ವದ ಪರಿಜ್ಞಾನವು ಒಂದು ಊಹನೆಯ, ಉತ್ಪ್ರೇಕ್ಷೆಯ ವಿಷಯವಾಗಿತ್ತು. ಅದು ಕ್ರಮೇಣ ಪ್ರಾಯೋಗಿಕ ಅವಸ್ಥೆಯನ್ನೂ ವಿಜ್ಞಾನದ ಪ್ರತಿಷ್ಠೆಯನ್ನೂ ಪಡೆಯಿತು. ಈ ಕ್ರಮದಲ್ಲಿ ಮನಃಶಾಸ್ತ್ರವು ವಿಶೇಷವಾಗಿ ಪ್ರಾಣಿಶಾಸ್ತ್ರವರ್ಗಕ್ಕೆ ಹತ್ತಿರ ನಿಲ್ಲುತ್ತಿದ್ದು, ಅದರ ಸ್ವರೂಪ ವೈದ್ಯಶಾಸ್ತ್ರವನ್ನು ಹೋಲುತ್ತದೆ. ಅದೊಂದು ತತ್ವವೂ ಅಹುದು, ತಂತ್ರವೂ ಅಹುದು. ಪ್ರಪಂಚದಲ್ಲಿ ಇಂದಿಗೆ ಅಸಂಖ್ಯ ಮನಃಶಾಸ್ತ್ರಜ್ಞರು ವಿವಿಧ ಕ್ಷೇತ್ರಗಳಲ್ಲಿ ಶ್ರಮಿಸುತ್ತಿದ್ದಾರೆ. ಕೆಲವರು ಪ್ರಯೋಗಶಾಲೆಗಳಲ್ಲಿ, ಕೆಲವರು ವೈದ್ಯಶಾಲೆಗಳಲ್ಲಿ, ಕೆಲವರು ಕಾಡು ಸಮಾಜಗಳಲ್ಲಿ, ಕೆಲವರು ವಾನರವರ್ಗಗಳಲ್ಲಿ,-ಅನೇಕ ಮುಖವಾಗಿ ಅಭ್ಯಸಿಸುತಿದ್ದಾರೆ. ಕೆಲವರು ಜ್ಞಾನದ ಮೂಲ, ವಿಚಾರದ ಧರ್ಮ, ಅಂತಃಪ್ರೇರಣೆಗಳ ಇಂಗಿತ, ಶಿಶು-ಪಶುಗಳ ನಡತೆಯ ನಿರೀಕ್ಷಣೆ ಮುಂತಾದವುಗಳಲ್ಲಿ ತೊಡಗಿರುವರು. ಕೆಲವರು ಹುಚ್ಚರ ಹವ್ಯಾಸಕ್ಕೆ ಬಿದ್ದಿರುವರು. ಇನ್ನೂ ಕೆಲವರು ಸಾಮಾಜಿಕ ಶಾರೀರಿಕ ಸಮಸ್ಯೆಗಳ ಅಭ್ಯಾಸಕ್ಕೆ ಹತ್ತಿರುವರು. ಹೀಗೆ ಮಾನವನ ಜೀವನ ವ್ಯಾಪಾರದ ಒಂದಲ್ಲ ಒಂದು ಅಂಗವನ್ನು ಎತ್ತಿಕೊಂಡು ಅದರ ರಚನೆಯ ಮನೋಮೂಲವನ್ನು ಕಂಡುಕೊಳ್ಳಲು ಹೆಣಗುತ್ತಿರುವ ಈ ಶಾಸ್ತ್ರಜ್ಞರ ಕಾರ್ಯದ ಮಹತ್ವವನ್ನೂ ಪ್ರಭುತ್ವವನ್ನೂ ತಿಳಿಯಲಾರದವರ ಬಗ್ಗೆ ಕನಿಕರವೂ ತಿಳಿಯಲೊಲ್ಲದವರಿಗಾಗಿ ಕೆರಳಿಕೆಯೂ ಅನಿಸುತ್ತದೆ.

೨

ಮಾನವ ಜೀವನದ ಪರಿಶೀಲನೆಯೇ ಗುರಿಯಾಗಿದ್ದ ಶಾಸ್ತ್ರವು ಆ ಜೀವನದ ಸಮಸ್ಯೆ ಸ್ಥಿತಿಗತಿಗಳ ಮೇಲೆ ಬೆಳಕು ಬೀರದೇ ಬಿಟ್ಟೀತೇ? ಶಿಶುಗಳ, ಭ್ರಮಿಷ್ಠರ, ಮನೋರೋಗಿಗಳ, ಕೆಲಸಗಾರರ, ಸೆರೆಗುಡುಕರ, ಸೆರೆಯಾಳುಗಳ, ಮನೋಭೂಮಿಕೆಗಳನ್ನು ಅಭ್ಯಸಿಸುವ ತಜ್ಞರ ಸಿದ್ಧಾಂತಗಳೂ ಅನುಮಾನಗಳೂ ನೇರವಾಗಿ ಆ ಕ್ಷೇತ್ರಗಳಲ್ಲಿಯ ಅನೇಕ ತೊಡಕುಗಳ ಬಗೆ-ಹರಿಕೆಗೆ ನೆರವಾಗುತ್ತವೆ. ಹೀಗೆ ಮನಃಶಾಸ್ತ್ರದ ಪ್ರತ್ಯಕ್ಷ ಪ್ರಭಾವವು ಪ್ರಯೋಜನಕಾರಿಯಾಗಿ ಪ್ರಕಟವಾದದ್ದು ಶೈಕ್ಷಣಿಕ, ಔದ್ಯೋಗಿಕ, ವೈದ್ಯಕ, ಅಪರಾಧದಂಡಕ ಕ್ಷೇತ್ರಗಳಲ್ಲಿ.

### ಶಿಕ್ಷಣಕ್ಷೇತ್ರದಲ್ಲಿ

ಮನಃಶಾಸ್ತ್ರದ ಅಂಗವಾಗಿ ಪ್ರಮುಖ ವಿಭಾಗವಾಗಿ ವಿಕಾಸಗೊಂಡ ಮನೋವಿಶ್ಲೇಷಣೆಯ ಶಾಸ್ತ್ರವು ಒಂದು ಜೀವಾಳದ ತತ್ವವನ್ನು ಪ್ರತಿಪಾದಿಸಿತು. ಅದು ಮಕ್ಕಳ ಮನೋವಿಕಾಸದ ಮಹತ್ವ. ಮಾನವನ ಮುಂದಿನ ಚಾರಿತ್ರ್ಯ-ಪಾವಿತ್ರ್ಯವೆಲ್ಲ ಆತನ ಶೈಶವಾವಸ್ಥೆಯ, ಆರಂಭದ ಐದು ವರ್ಷಗಳ ಬೆಳವಣಿಗೆಯ ಅಚ್ಚುಕಟ್ಟು, ಕೆಚ್ಚುನಿಟ್ಟುಗಳನ್ನು ಅವಲಂಬಿಸಿದೆ. ಬಾಳಿನ ಗುಟ್ಟು, ಶೀಲದ ಮೂಲಸೂತ್ರ ಶಿಶುಮನೋರಂಗದ ಏರ್ಪಾಟಿದಲ್ಲಿದೆ- ಎಂಬ ವಿಚಾರವು ಪ್ರಚುರವಾದಂದಿನಿಂದ ಮಕ್ಕಳ ಸಂಗೋಪನೆ—ಶಿಕ್ಷಣಗಳ ಪ್ರಪಂಚದಲ್ಲಿ ಒಂದು ಕ್ರಾಂತಿಯೇ ಉಂಟಾಯಿತು. ಮಿಕ್ಕ ಮಾನವಕೋಟಿಗೆ ಮನಃಶಾಸ್ತ್ರವು ಏನೇ ಮಾಡಿರಲಿ, ಮಕ್ಕಳ ಮಟ್ಟಿಗೆ ಅದೊಂದು ವರದಾನವಾಗಿಯೇ ಬಂದಿತು. ಶಿಕ್ಷಣದಲ್ಲಿ ವಿದ್ಯೆಗಿಂತ ಶಿಶುವಿಗೆ, ಗುರುವಿಗಿಂತ ಶಿಷ್ಯನಿಗೆ, ವಿಷಯಕ್ಕಿಂತ ವ್ಯಕ್ತಿತ್ವಕ್ಕೆ ಹೆಚ್ಚಿನ ಮಹತ್ವವೂ ಅಗತ್ಯವೂ ಬಂದಿತು. ನವಸಂಸ್ಕೃತಿಯ ನಿರ್ಮಾಣದಲ್ಲಿ ಈ ಬಾಲಕೇಂದ್ರಿತ್ವವು ಒಂದು ಕೇಂದ್ರ ಶಕ್ತಿಯಾಗಿದೆ. ಇದರ ಫಲವಾಗಿ "ತಾಡಯೇತ್ ಪಂಚವರ್ಷಾಣಿ" ಎಂದು ಬರೆದಿಟ್ಟ ತಾಡಪತ್ರವು ಹೊಸ ಗಾಳಿಗೆ ಹಾರಿಹೋಗಿ, ಯಾವ ವಯಸ್ಸೇ ಇರಲಿ "ಪುತ್ರೇ ಮಿತ್ರವತ್ ಆಚರೇತ್" ಎಂಬ ತತ್ವವೇ ಇಂದಿನ ಶಿಕ್ಷಣ ಪದ್ಧತಿಯ ತಳಹದಿಯಾಯಿತು. "ಶಿಕ್ಷಣ" "ಅಧ್ಯಾಪನ" ಮುಂತಾದ ರೂಢನಾಮಗಳನ್ನೇ ತಿದ್ದಬೇಕಾಗಿ ಬಂದಿದೆ!

ಇದಲ್ಲದೆ ಮೂಲ ಪ್ರವೃತ್ತಿಗಳ ವಿಷಯ ಸಂಶೋಧನೆಯಾದುದರ ಫಲವಾಗಿ, ಧ್ಯಾನ, ಧಾರಣೆ, ಸ್ಮರಣೆ, ಆಸಕ್ತಿ, ಲಕ್ಷ್ಯ ಮುಂತಾದ ಅಂಶಗಳ ಲಕ್ಷಣಗಳೆಲ್ಲ ತಿಳಿದುಬಂದುದರ ಫಲವಾಗಿ, ಕಲಿಸುವ ಕಲೆಯಲ್ಲಿಯೂ ಕಾಯಕಲ್ಪವಾಯಿತು. ಅಭಿರುಚಿಗೆ, ಇಂದ್ರಿಯಜ್ಞಾನಕ್ಕೆ, ಚಟುವಟಿಕೆಗೆ, ಆಟಪಾಟಗಳಿಗೆ, ಸ್ವಯಂ ಪ್ರಜ್ಞೆಗೆ, ಸ್ವತಂತ್ರ ಪ್ರಯತ್ನಕ್ಕೆ, ಪುಸ್ತಕದ ಬದಲು ಮಸ್ತಕಕ್ಕೆ, ಅನುಭವಕ್ಕೆ, ಅವಲೋಕನೆಗೆ ಪಾಠ ಪ್ರವಚನ ಅಧ್ಯಯನ ಅಧ್ಯಾಪನಕ್ಕೆ ಪ್ರಾಮುಖ್ಯ ಬಂದಿದೆ. ಕೇವಲ ಕೈಯ ಬೆತ್ತವನ್ನೂ ಗಂಟಲ ಬಲುಮೆಯನ್ನೂ ನಂಬಿ ಅಬ್ಬರಿಸುವ ಮೇಸ್ತ್ರುಗಳು ಮನಃಶಾಸ್ತ್ರದ ಪ್ರಭಾವದಿಂದ ಚಿತ್ರ, ಯಂತ್ರ, ಆಟ, ನಾಟ್ಯ, ನಕ್ಷೆ, ಪಟ, ಪ್ರಾತ್ಯಕ್ಷಿಕ, ಪ್ರವಾಸ, ಪ್ರದರ್ಶನ- ಮುಂತಾದ ಉಪಾಯಾಂತರಗಳನ್ನೂ ಬಳಸುವ ಕಾಯಕವನ್ನೂ ಕಲಿಯಬೇಕಾಯಿತು. ಇದಕ್ಕಾಗಿ ಶೈಕ್ಷಣಿಕ ಮನಃಶಾಸ್ತ್ರವೆಂಬ ವಿಜ್ಞಾನವಿಭಾಗವೇ ಪ್ರತ್ಯೇಕ ಬೆಳೆದುಬಂದಿದೆ.

ಆ ವಿಭಾಗದಲ್ಲಿ ಬುದ್ಧಿಶಕ್ತಿಯ ಮೀಮಾಂಸೆಯು ಒಂದು ಪ್ರಧಾನ ಅಂಶ. ಪ್ರಜ್ಞೆ, ಮೇಧಾಶಕ್ತಿಗಳ ಕುರಿತು ತುಂಬ ಸಂಶೋಧನೆಯಾಗಿ-ಆಗುತ್ತಿದ್ದು- ಬುದ್ಧಿಮಾಪನದ ಅನೇಕ ಪದ್ಧತಿಗಳು ಸಿದ್ಧವಾದವು. ಶಾಲೆಗಳಲ್ಲಿ ಪರೀಕ್ಷಾತಂತ್ರಗಳು ಪ್ರಶ್ನಪತ್ರಿಕೆಗಳು ಬದಲಾದವು. ಸ್ಮರಣೆ, ಕಲ್ಪನೆ, ನಿರ್ಣಯ ಮುಂತಾದ ಕ್ರಿಯಾಮೂಲವಾದ ಮನಃಶಕ್ತಿಗಳ ಗೊತ್ತುಗುರಿಗಳನ್ನು ಗುರುತಿಸಿಕೊಳ್ಳುವ ಹೊಸ ವಿಧಾನಗಳು ಉಂಟಾದವು. ಸೈನ್ಯಕ್ಕಾಗಿ, ಸರಕಾರಿ ಚಾಕರಿಗಾಗಿ, ಅಧಿಕಾರಸ್ಥಾನಗಳಿಗಾಗಿ, ಮಂದಿಯನ್ನು ಆರಿಸುವಾಗ ಅವರ ವಿಶೇಷಜ್ಞತೆಯ ಜತೆಗೆ-ಅದಕ್ಕೂ ಹೆಚ್ಚಾಗಿ—ಅವರ ಪ್ರಸಂಗಾವಧಾನವನ್ನೂ ಬುದ್ಧಿಯ ತೀಕ್ಷ್ಣತೆಯನ್ನೂ ನಿರೀಕ್ಷಣದ ತೀವ್ರತೆಯನ್ನೂ ಸ್ವಯಂಸಾಹಸದ ವೃತ್ತಿಯನ್ನೂ ಸ್ಮೃತಿಧೃತಿಗಳನ್ನೂ ಕಂಡುಹಿಡಿಯುವ ಪರೀಕ್ಷೆಗಳು ಪ್ರಚಾರದಲ್ಲಿ ಬಂದವು.

ಶರೀರ ಮನಸ್ಸುಗಳ ಅನ್ಯೋನ್ಯಾಶ್ರಯದ ಗುಟ್ಟು ತಿಳಿದುಬಂದು ಹೊಸ ಶಿಕ್ಷಣದಲ್ಲಿ ಸಮಗ್ರ ವ್ಯಕ್ತಿವಿಕಾಸಕ್ಕೆ ಮಾರ್ಗವಾಯಿತು. ಚಟಗಳನ್ನು ಬಿಡಿಸುವ ಬಗೆ, ಮುದ್ದು ಮಾಡಿ ಕೆಡಿಸಿದ ಮಕ್ಕಳನ್ನು ತಿದ್ದುವ ಬಗೆ, ವಿಪರೀತ ಲಜ್ಜೆ, ಭೀತಿ, ಕ್ರೋಧ, ದ್ವೇಷ, ಜಾಡ್ಯ, ಮುಂತಾದ ವಿಕೃತಿಗಳಿಗೆ, ಹೇಸಿ ಹೊಲಸುಗಳಿಗೆ ಬಲಿಯಾದ ಬಾಲಕರ ಬಗೆ, ಉಂಡಾಡಿ ಕಿಡಿಗೇಡಿ, ಪುಂಡ, ತುಂಟ ಹಿಂದುಳಿದ ಮಂದಮತಿ ಮುಂತಾದ ಬಾಳಿನ ಹದಗೆಟ್ಟ ಹಾದಿಗೆಟ್ಟ ದುರ್ದೈವಿಗಳ ಪರಿಪಾಟದ ಬಗೆ— ಹೀಗೆ ಬಗೆಬಗೆಯ ಮನೋಗಂಡಗಳ ಕಡೆಗೆ ಸಮಾಜದ,— ಅಂದರೆ ಸಮಾಜಕ್ಕೆ ಬುದ್ಧಿ ಕಲಿಸುವ ಬಲ್ಲವರ-ಗಮನವನ್ನು ಮನಃಶಾಸ್ತ್ರವೇ ಸೆಳೆಯಿತು.

### ಉದ್ಯೋಗಕ್ಷೇತ್ರದಲ್ಲಿ

ವ್ಯಾವಸಾಯಿಕ ಹಾಗೂ ಔದ್ಯೋಗಿಕ ಕ್ಷೇತ್ರದಲ್ಲಿ ಮನಃಶಾಸ್ತ್ರೀಯ ಪ್ರಭಾವವು ಒಬ್ಬಗೆ-

ಯಾಗಿದೆ. ಒಂದು, ಕೆಲಸಗಾರರ ಕಾರ್ಯಕ್ಷಮತೆಯೊಡನೆ ಉತ್ಪಾದನೆಯ ಸಫಲತೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ; ಇನ್ನೊಂದು ಪೂರೈಕೆಗೆ ತಕ್ಕ ಬೇಡಿಕೆಯನ್ನುಂಟುಮಾಡುವ ನಿಟ್ಟಿನಲ್ಲಿ. ಆಳುಗಳನ್ನು ಹೆಚ್ಚು ದುಡಿಸಿದಷ್ಟು ಹೆಚ್ಚು ಲಾಭವೆಂದು ಬಂಡವಾಳಗಾರರ ಮೂಢ ನಂಬಿಗೆ ಇತ್ತು. ಆದರೆ ಮನಸ್ತಜ್ಞರ ಸಲಹೆ ಇದಕ್ಕೆ ವಿಪರೀತವಾಗಿ ಬಿತ್ತು. ಗಿರಣಿ ಕಾರಖಾನೆಗಳಲ್ಲಿ ಈಗ ದುಡಿಮೆಯ ವೇಳೆಯನ್ನು ಕಡಿಮೆ ಮಾಡಿ ಬಿಡುವಿನ ಅವಧಿಯನ್ನು ಹೆಚ್ಚಿಸಲಾಗುತ್ತದೆ. ಅದರಿಂದ ಉತ್ಪಾದನೆಯು ಹೆಚ್ಚಾಗುವದು. ಕೆಲಸಗಾರರ ಸ್ವಾಸ್ಥ್ಯ ಸೌಖ್ಯಗಳ ವೃದ್ಧಿಯಾಗುವದು. ಔದ್ಯೋಗಿಕ ಸಂಸ್ಥೆಗಳಿಗೆ ಸ್ಥೈರ್ಯ ಬರುವದು. ಬಂಡವಾಳವು ಚಿನ್ನದ ತತ್ತಿಗಳನ್ನು ಇಡುವದು–ಎಂಬುದು ಸ್ಪಷ್ಟವಾಗುತ್ತಿದೆ. ಹಾಗೆಯೇ ಬೇರೆ ಬೇರೆ ಉದ್ಯೋಗಗಳ ಯಾಂತ್ರಿಕ ಕ್ರಿಯೆಗಳ ನಿರೀಕ್ಷಣೆಯಿಂದ ಆ ಕ್ರಿಯೆಗಳಲ್ಲಿ ಕೆಲಸಗಾರರ ಚಲನವಲನಗಳು ಸುಗಮವಾಗುವಂತೆ, ದಣಿವು ಕಡಿಮೆ ಆಗುವಂತೆ, ವಿವಿಧ ವಿಧಾನಗಳನ್ನು ಕಂಡುಕೊಳ್ಳಲಾಗಿದೆ. ಸುಖಾಸನ, ಸೌಕರ್ಯ, ಗತಿಸೌಲಭ್ಯ, ಪ್ರಕಾಶ, ಪ್ರಶಸ್ತ ವಾತಾವರಣ, ಕಣ್ಣಿಗೆ ತಣಿವಾಗುವಂತೆ ವರ್ಣ-ವಿನ್ಯಾಸ, ವಿಶ್ರಾಂತಿ ಗೃಹಗಳು, ಮನೋರಂಜನೆಯ ಸಾಧನೆಗಳು, ಕಲ್ಯಾಣಕೇಂದ್ರಗಳು, ಶ್ರಮಜೀವಿಗಳ ಉತ್ಸಾಹ, ಉದ್ಯೋಗ ಮತ್ತು ಗೌರವವನ್ನು ಕುಗ್ಗಿಸದಂತೆ ಅವರೊಡನೆ ವ್ಯವಹಾರ- ಇವೆಲ್ಲ ರೀತಿಗಳಲ್ಲಿ ಉದ್ದಿಮೆಗಳ ಕ್ಷೇಮಕ್ಕೆ ಮನಃಶಾಸ್ತ್ರವು ಯೋಗವನ್ನು ಕಲ್ಪಿಸಿಕೊಟ್ಟಿದೆ.

ಅದೇ ರೀತಿ ಸರಕುಗಳ ಮಾರಾಟದ ಕ್ಷೇತ್ರದಲ್ಲಿ ಮಂದಿಯ ಮನ ಒಲಿಸುವ ತಂತ್ರದಲ್ಲಿ ಈ ಶಾಸ್ತ್ರದ ಪ್ರಭಾವ ತುಂಬ ಸಹಾಯವನ್ನು ಸಲ್ಲಿಸಿದೆ. ಪ್ರಚಲಿತ ಜಾಹೀರಾತುಗಾರಿಕೆಯ ಜೀವಾಳವೇ ಮನಃಶಾಸ್ತ್ರೀಯ ದೃಷ್ಟಿಯಾಗಿದೆ. ಬೇಡಾದವರಿಗೂ ಬೇಕೆನಿಸುವಂತೆ, ಸರಕುಗಳ ಆಕರ್ಷಣೆಯನ್ನು ಹಿಗ್ಗಿಸಿ, ಅವುಗಳ ಅಗತ್ಯವನ್ನು ಹೆಚ್ಚಿಸಿ, ಬಲಾತ್ಕಾರದ ಗಂಧವೂ ತೋರದೆ ಪ್ರಚಾರದ ಒತ್ತಾಯವನ್ನುಂಟುಮಾಡುವ ರೀತಿಯು, ಭಿನ್ನರುಚಿಯಾದ ಲೋಕಕ್ಕೆ ರುಚಿಭೇದವನ್ನು ಕಲ್ಪಿಸಿಕೊಡುವ ಕಲೆಯು ಮನೋವಿಜ್ಞಾನದ ಉಡುಗೊರೆ. ಇಂಥ ಪ್ರಚಾರ ತಂತ್ರದ ಜಾಹೀರಾತು ವಿದ್ಯೆಯ ವ್ಯಾಸಂಗವನ್ನು ಮಾಡುವ ಮಾಡಿಸುವ ತಜ್ಞರೇ ಉಂಟಾಗಿದ್ದಾರೆ. ಮನಃಶಾಸ್ತ್ರದ ವಿನಿಯೋಗ ಪ್ರಕಾರಗಳಲ್ಲಿ ಇದೊಂದು ಪ್ರತ್ಯೇಕ ಪ್ರಕರಣ.

## ವೈದ್ಯಕೀಯ ಕ್ಷೇತ್ರದಲ್ಲಿ

ಚಿಕಿತ್ಸಾಕ್ರಮದಲ್ಲಿ ಮನಃಶಾಸ್ತ್ರದ ಪ್ರಭಾವವು ನಿಸ್ಸೀಮ ನಿಧಿಯಾಗಿದೆ. ಮನೋವಿಶ್ಲೇಷಣೆಯಂಥ ಕೆಲವೊಂದು ಕ್ರಾಂತಿಕಾರಕ ಮನಃಶಾಸ್ತ್ರೀಯ ಶೋಧಗಳು ಒದಗಿದ್ದು ವೈದ್ಯಶಾಲೆಯಲ್ಲಿಯೇ ಉನ್ಮಾದವಾಯು, ಕಾಮವಿಕೃತಿ, ಬುದ್ಧಿಭ್ರಂಶ, ನರಗುಂದುನಿಕೆ ಇತ್ಯಾದಿ ಮಜ್ಜಾಸಂಸ್ಥೆಯ ವಿಕಾರವ್ಯಾಧಿಗಳಿಗೆಲ್ಲ ಮನೋವಿಜ್ಞಾನವು ದಿವ್ಯ ಉಪಾಯ ಯೋಜನೆಯನ್ನು ನೀಡಿದೆ – ನೀಡುತ್ತಿದೆ. ಈ ಶಾಸ್ತ್ರವು ಇನ್ನೂ ಬೆಳೆಯುತ್ತಿದೆ. ಇದರ ತತ್ವಗಳಂತೆ ವಿನಿಯೋಗಗಳೂ ಹೊಸ ಶೋಧನೆಗೆ ಎಡೆಕೊಡುತ್ತಿವೆ. ಆದ್ದರಿಂದ ಇದುವರೆಗೆ ಪೂರೈಸಿದ ಉಪಾಯ ಉಪಚಾರಪದ್ಧತಿಗಳಿಗಿಂತಲೂ ಹಲವು ಬಗೆಯಿಂದ ಹೆಚ್ಚಾದ ಚಿಕಿತ್ಸಾಕ್ರಮಗಳ ಯೋಜನೆಗಳು ಈ ಶಾಸ್ತ್ರದ ಗರ್ಭದಲ್ಲಿ ಇರುತ್ತವೆ. ಎರಡು ಮಹಾಯುದ್ಧಗಳ ನಡುವೆ ಸಿಲುಕಿ ಸಂಗ್ರಾಮ ರಂಗದಲ್ಲಿಯೂ ಗ್ರಾಮಾಂತರಗಳಲ್ಲಿಯೂ ಬಾಂಬು ಸ್ಫೋಟ, ಮರಣದುರಂತ, ಸಂತಾಪ-ಸಂತ್ರಾಸ, ಆತಸ್ಮಿಕ ಸಂಕಟದ ಭಯ, ಮುಂತಾದ ವಿಕಟ ವಿಪತ್ತುಗಳಿಂದ ತಲೆದೋರಿದ ತಲೆಕೆಡಿಸಿದ ಅನೇಕ ಮನಃಕ್ಷೋಭೆಗಳಿಗೆ--ನರಗಳ ಶೈಥಿಲ್ಯ, ಬಧಿರತೆ, ಮರವುಗೇಡು, ಮೂಕತನ, ಉನ್ಮಾದ, ಭಯಾಪಸ್ಮಾರ ಮುಂತಾದವುಗಳಿಗೆ–ಯೋಗ್ಯ ಉಪಚಾರ ಮಾಡಲೇಬೇಕಾಗಿ ಬಂದಿತು. ಈ ಅವಶ್ಯಕತೆಯು ಕಲ್ಪಕತೆಯ ಜನನಿಯಾಯಿತು. ಅದಕ್ಕಾಗಿ ಮನಃಶಾಸ್ತ್ರವು ತಜ್ಞನ ಗಾಂಭೀರ್ಯವನ್ನೂ ನಿಲುವಂಗಿಯನ್ನೂ ತೆಗೆದಿಟ್ಟು ತಾಯಿಯ ವಾತ್ಸಲ್ಯವನ್ನೂ ದಾದಿಯ ಉಡುಪನ್ನೂ ವೈದ್ಯನ ವಿಶಾಲಾಂತಃಕರಣವನ್ನೂ ಪ್ರಕಟಿಸಿತು!

## ಅಪರಾಧದಂಡನೆಯ ಕ್ಷೇತ್ರದಲ್ಲಿ

ಅಪರಾಧಕ್ಕೆ ತಕ್ಕ ಶಿಕ್ಷೆ ಎಂಬ ನ್ಯಾಯವು ಮುಯ್ಯಕ್ಕೆಮುಯ್ಯವೆಂಬ ನೀತಿ(?)ಯ ಕೂಸಾಗಿತ್ತು. ಕಾಯದೆಯೊಂದು ಕತ್ತೆ, ನ್ಯಾಯದೇವತೆ ಕುರುಡು–ಎಂಬ ಎರಡು ಮಾತುಗಳ ಪರಡಿಗಳಲ್ಲಿ ಎಲ್ಲ ತಪ್ಪುಗಾರರನ್ನೂ ತೂಗಿ ಅಪರಾಧಿಗಳನ್ನು ಜೇಲಿಗೊ ಗಲ್ಲಿಗೊ ಕಳಿಸುವದು ದೇಶದ ದಂಡನೀತಿ ಆಗಿತ್ತು. ಆದರೆ ಈ ನೀತಿ ಅಸಮಂಜಸವೆಂಬ ತಿಳಿವಳಿಕೆ ಮೂಡಲು ಮನಃಶಾಸ್ತ್ರೀಯ ವಿಚಾರಗಳೇ ಕಾರಣ. ದಡ್ಡತನದಂತೆ ದುಷ್ಟತನವೂ ಮನೋದೌರ್ಬಲ್ಯದ ಮೂಲಕ ಪರಿಸ್ಥಿತಿಯ ಪರಿಪಾಕ. ಆದ್ದರಿಂದ ಅಪರಾಧಗಳಿಗಿಂತ ಅಪರಾಧಿಯ ಮನೋಭೂಮಿಕೆ, ಕೌಟುಂಬಿಕ ಸಾಮಾಜಿಕ ಬಾಲ್ಯದ ಪ್ರಾರಂಭಿಕ ಪರಿಸ್ಥಿತಿ, ಅನುವಂಶಿಕ ಪ್ರವೃತ್ತಿ ಇತ್ಯಾದಿಗಳನ್ನು ಪರಿಶೀಲಿಸಿ ಕೃತ್ಯಕ್ಕಿಂತ ಅದರ ಉದ್ದೇಶಕ್ಕೂ ಉದ್ದೇಶಕ್ಕಿಂತ ಅದರ ಹಿಂದಿನ ವಿಕೃತಿಗೂ ಹೆಚ್ಚು ಲಕ್ಷ್ಯಕೊಡಬೇಕೆಂಬ ಪಾಠವನ್ನು ಮನಃಶಾಸ್ತ್ರವೇ ಕಲಿಸಿತು.

ಅಪರಾಧವೂ ಒಂದು ಮನೋರೋಗ. ಸಾಂಸರ್ಗಿಕ ರೋಗ. ಅದರ ದಂಡನೆಗಿಂತಲೂ ನಿವಾರಣೆ ಮುಖ್ಯ. ಆದ್ದರಿಂದ ನ್ಯಾಯಕ್ಕೆ ದಯೆಯ, ಶಿಕ್ಷೆಗೆ ಸಹಾನುಭೂತಿಯ, ಕಾರಾಗೃಹಕ್ಕೆ ಶಾಲಾಗೃಹದ ಹದವನ್ನು ಕೊಡುವ ಅಗತ್ಯವನ್ನು ಅಧಿಕಾರಿವರ್ಗಗಳಿಗೆ ಮನಃಶಾಸ್ತ್ರವೇ ತಿಳಿಹೇಳಿತು. ಅಪರಾಧಶೋಧನೆಯಲ್ಲಿಯೂ ಈ ಶಾಸ್ತ್ರದ ಛಾಯೆ ಬೀಳದೆ ಹೋಗಲಿಲ್ಲ. ಕೆಲವು ವರ್ಷಗಳ ಹಿಂದೆ ಮೈಸೂರ ಪೋಲೀಸ ವಿಭಾಗದವರು ಹೊಸತೊಂದು "ಸತ್ಯಶೋಧಕ ಯಂತ್ರ"ವನ್ನು ತರಿಸಿದರು. ಮನುಷ್ಯ ಸತ್ಯವನ್ನು ಹತ್ತಿಕ್ಕುವಾಗ ಎಷ್ಟೇ ಸರಾಗವಾಗಿ ಸುಳ್ಳಾಡುತ್ತಿದ್ದರೂ ಅವನ ನರಗಳಲ್ಲಿ ಏನೋ ಒಂದು ಹಿಡಿತ (Tension)

ಉಂಟಾಗುತ್ತದೆ. ಇದರಿಂದ ಮೈಯಲ್ಲಿ ಮಿಂಚು ಹರಿಬಿಟ್ಟರೆ ಅದರ ಪ್ರವಾಹಕ್ಕೂ ತಾತ್ಕಾಲಿಕ ಅವರೋಧ ಉಂಟಾಗುತ್ತದೆ. ಅಪರಾಧಿಯನ್ನು ಒಂದು ವಿದ್ಯುತ್‌ವಾಹಕ ಪೀಠದಲ್ಲಿ ಕುಳ್ಳಿರಿಸಿ ಅವನಲ್ಲಿ ಪ್ರವಾಹವನ್ನು ಹರಿಬಿಟ್ಟು, ಅವನೊಂದಿಗೆ ಪ್ರಶ್ನೋತ್ತರಗಳು ಆರಂಭವಾಗುತ್ತವೆ. ಆಗ ಅವನು ಆಡುವ ಪ್ರತಿ ಸುಳ್ಳಿಗೂ ವಿದ್ಯುತ್ ಪ್ರವಾಹದಲ್ಲಿ ಹಿಡಿತ ಮಿಡಿತಗಳುಂಟಾಗಿ ಸೂಜಿಯು ಅದನ್ನು ಸೂಚಿಸುತ್ತದೆ. ಮನಸ್ಸು, ವಿದ್ಯುತ್ತು ಮತ್ತು ನರಮಂಡಲ ಇವುಗಳಲ್ಲಿಯ ಸಂಶೋಧನೆಯ ಫಲವಿದು.

ಹಾಗೆಯೇ ಮಕ್ಕಳ ಕೋರ್ಟುಗಳು ಸ್ತ್ರೀ ಪೋಲೀಸರು, ಸೆರೆಮನೆಯಲ್ಲಿ ವರ್ಗ-ಸೌಕರ್ಯಗಳು ಇತ್ಯಾದಿ ಇದೇ ವೈಜ್ಞಾನಿಕ ದೃಷ್ಟಿಯ ಪರಿಣಾಮ. ಸೇಡಿನ ಬುದ್ಧಿಗಿಂತ ಸುಧಾರಣೆಯ ವೃತ್ತಿಯಿಂದ ಈ ಅಪರಾಧ-ದಂಡಗಳ ಪ್ರಶ್ನೆ ಬಿಡಿಸುವ ಪ್ರೇರಣೆಗೆ ಮನಃಶಾಸ್ತ್ರವೇ ಮೂಲ.

ಹೀಗೆ ಈ ನಾಲ್ಕು ಕ್ಷೇತ್ರಗಳಲ್ಲಿ ಕಂಡು ಬರುವ ಪ್ರಭಾವವು ಗುಣದಲ್ಲಿಯೂ ಪರಿಮಾಣದಲ್ಲಿಯೂ ಸ್ಫುಟವಾದದ್ದು, ಸ್ಥೂಲವಾದದ್ದು. ಸಾಮಾಜಿಕ ಜೀವನದ ವ್ಯಾಪಕ ಕ್ಷೇತ್ರದಲ್ಲಿಯೂ ಮನಃಶಾಸ್ತ್ರದ ಮುದ್ರೆ ಒಂದಲ್ಲ ಒಂದು ರೀತಿಯಲ್ಲಿ ಮೂಡಿದೆ.

೩

ಇಲ್ಲಿ 'ಸಮಾಜ'ವೆಂದರೆ ಏನು? ಎಲ್ಲಿಯದು? ಮನಃಶಾಸ್ತ್ರದ ಪ್ರಗತಿ ಪ್ರಚಾರಗಳು ಸಾಕಷ್ಟು ಕಾಲ ಸಾಕಷ್ಟು ವಿಶಾಲವಾಗಿ ನಡೆದದ್ದು ಪಾಶ್ಚಾತ್ಯರಲ್ಲಿ-ಅಲ್ಲಿಯೂ ಮುಂದುವರಿದ ಇಂಗ್ಲಂಡ, ಅಮೇರಿಕೆ, ಜರ್ಮನಿ, ರಶಿಯಾ ಈ ಕಡೆಗಳಲ್ಲಿ. ಅಲ್ಲಿಯೂ ಅದರ ಪ್ರಭಾವ ಬಹುಜನ ಸುಶಿಕ್ಷಿತ ಸಮಾಜದಲ್ಲಿ ಕೂಡ ನೇರವಾಗಿ ಬೀರಿರುವದಿಲ್ಲ. ನೇರವಾಗಿ ಮೂಡಲು ಅದೇನು ಧರ್ಮದ ಅಥವಾ ರಾಜಕೀಯ ಪ್ರಚಾರವಲ್ಲ. ಅಂದ ಮೇಲೆ ನಮ್ಮ ದೇಶದಂಥ ಹಿಂದುಳಿದ ಜನಾಂಗದ ಮಾತೇನು? ಆದರೆ ಒಂದು ಮಾತು ಸತ್ಯ. ಹಿಂದೆಮುಂದೆ ಎಲ್ಲಿಯೇ ಉಳಿದಿರಲಿ. ಮಾನವನ ಮನಸ್ಸು ಒಳಗೆಲ್ಲ ಒಂದೇ. ಸಂಸ್ಕೃತಿ, ನಾಗರಿಕತೆ ಇವೆಲ್ಲ ಮೈದೊಗಲಿನಷ್ಟೇ ಅಳ. ಮನುಷ್ಯತ್ವ ಎಲ್ಲ ರಾಷ್ಟ್ರಗಳ ಅಂತರಾಳ. ಆಹಾರ, ಮೈಥುನ, ಭಯ, ವಿಪ್ಲವ, ಯುದ್ಧ, ಉತ್ಸವ ಮುಂತಾದ ನಿಕರದ ಪ್ರಸಂಗಗಳಲ್ಲಿ ಯಾವ ದೇಶದ ಮನುಷ್ಯನಾದರೂ ನಡೆಯುವ ರೀತಿ ಒಂದೇ. ಅದ್ದರಿಂದ ಮನಃಶಾಸ್ತ್ರದ ಪ್ರಭಾವಕ್ಕೆ ಪಾಶ್ಚಾತ್ಯರಂತೆ ಭಾರತೀಯರೂ ಒಳಪಡಬಲ್ಲರು. ಪ್ರಭಾವಿಗಳಾಗಬಲ್ಲ ಶಾಸ್ತ್ರಜ್ಞರೂ ಶಾಸ್ತ್ರವಿಸ್ತಾರವೂ ನಮ್ಮಲ್ಲಿ ಕಡಿಮೆ ಎಂಬುದೇ ತೊಡಕು.

ಹಿಂದಿಗಿಂತ ಇಂದಿನ ಸುಶಿಕ್ಷಿತ ವರ್ಗವು ಹೆಚ್ಚು ಆತ್ಮನಿರೀಕ್ಷಕವಾಗಿದೆ. ತನ್ನತನದ ಅರಿವು ಇಂದಿನವರಿಗೆ ವಿಶೇಷ. ಹಿಂದಿನ ಜನ ಒಂದು ಕುಲವಾಗಿ, ಜಾತಿಯಾಗಿ, ಮಠದ ಅನುಯಾಯಿವರ್ಗವಾಗಿ, ಮತಸಂಪ್ರದಾಯವಾಗಿ ಹತ್ತು ಸಮಸ್ತರಲ್ಲಿ ಒಂದಾಗಿ ಬದುಕುವದೇ ಸುಖವೆಂದು ಭಾವಿಸಿದ್ದರು. ಆದರೆ ಇಂದು ವ್ಯಕ್ತಿನಿಷ್ಠೆ, ವ್ಯಕ್ತಿತ್ವದ ಮಹತ್ವ ಹೆಚ್ಚಾಗಿದೆ. ಗತಾನುಗತಿಕರಾಗಲು ಸುಶಿಕ್ಷಿತರು ಒಮ್ಮೆಲೇ ಒಪ್ಪುವದಿಲ್ಲ. ನಾಲ್ಕು ಮಂದಿಯಿಂದ ಏನೋ ಮೇಲಿನ, ಮಿಗಿಲಾದ ಅಥವಾ ಬೇರೆಯಾದ ವಸ್ತುವೆನಿಸಿಕೊಳ್ಳಲು ನಾವು ಹೆಣಗುತ್ತೇವೆ. ಸಮಾಜದಿಂದ ಸಿಡಿದು ಹೋಗುವೆವೆಂದಲ್ಲ. ಆದರೆ ಒಟ್ಟಾರೆ ಪ್ರಭಾವಪೂಜೆ ನಮ್ಮಲ್ಲಿ ಬೆಳೆದಿದೆ. ಇದರ ಮೂಲಕ ನಮ್ಮ ಸ್ವಭಾವಕ್ಕೆ ಒಂದು ಪಡಿಯಚ್ಚು ಸ್ಥಿರವಾಗಿಲ್ಲ. ನಮ್ಮ ಆಚರಣೆಯ ಆಶೋತ್ತರಗಳ ಕುರಿತು ನಮ್ಮಲ್ಲಿಯೇ-ನಮ್ಮ ಅಂತರಂಗದಲ್ಲಿಯೇ ವಿಚಿಕಿತ್ಸೆ ವಿಶ್ಲೇಷಣೆ ನಡೆಯುತ್ತಿರುತ್ತದೆ. ಇದರಿಂದ ನಮ್ಮಲ್ಲಿ ಸ್ಥಾಯೀಭಾವ ಕಡಿಮೆ. ಸ್ಥಿತಪ್ರಜ್ಞೆಯಂತೂ ಇರುವದೇ ಇಲ್ಲ. ಒಂದು ಬಗೆಯ ಚಿತ್ತಚಾಂಚಲ್ಯ, ಸಂಶಯಾತ್ಮತೆ, ಸಂಕಲ್ಪ ವಿಕಲ್ಪಗಳ ಹೊಯ್ದಾಟ ಬುದ್ಧಿ, ಭಾವನೆಗಳ ಅಸಮಂಜಸ-ನಮ್ಮ ಮನೋರಂಗದ ನಿತ್ಯ ಲೀಲೆಯಾಗಿದೆ. ಇದರಿಂದ ಒಂದೆಡೆಗೆ ಆತ್ಮಪ್ರೌಢಿಮೆ, ಡಂಭಾಚಾರ, ಲೋಕಲಕ್ಷವೇಧಕ್ಕಾಗಿ ಸ್ವಚ್ಛಂದತೆಗಳು ಬಹಿರಂಗವಾಗಿ ಪ್ರಚುರವಾಗಿದ್ದರೆ, ಇನ್ನೊಂದೆಡೆಗೆ ಆತ್ಮಗ್ಲಾನಿ, ನಿರಾಶಾವಾದ, ಹೃದಯದೌರ್ಬಲ್ಯ, ಭಾವೋದ್ರೇಕ, ವಿಭೂತಿಪೂಜೆ ಇವು ನಮ್ಮ ಬಾಳಿನ ಪ್ರಚೋದನೆಯಾಗಿವೆ. ಒಟ್ಟಾರೆ ನಮ್ಮ ಸುಶಿಕ್ಷಿತರ ಬದುಕು ಮನೋವೈಜ್ಞಾನಿಕ ಸಂಸ್ಕಾರದಿಂದ ಒಂದು ಬಗೆಯ ಕೃತ್ರಿಮತೆಯಿಂದ ಕೂಡಿದ ಕಳವಳದಿಂದ ತುಳುಕುತ್ತಿದೆ.

ನಮ್ಮ ನೀತಿಮೂಲ್ಯಗಳೂ ನಮಗೇ ಗೊತ್ತಾಗದೇ ಮಾರ್ಪಾಡುತ್ತಲಿವೆ. ಹಿಂದಿನ ನೀತಿ ಸುಲಭವಿತ್ತು. "ಯದ್ಯಪಿ ಸಿದ್ಧಂ ಲೋಕವಿರುದ್ಧಂ ನಾಚರಣೀಯಂ" ಎಂದುಬಿಟ್ಟರೆ ತೀರಿತು. ಸತ್ಯವೇನೇ ಇರಲಿ ಅದು ವಾದಕ್ಕಾಗಿ, ವಾಚಿಕ ಮಾತ್ರ. ಧರ್ಮವೇ ಆಚಾರಪ್ರಭವ. ಮತಸ್ವಾತಂತ್ರ್ಯವಿದ್ದರೂ ಆಚಾರಸ್ವಾತಂತ್ರ್ಯವಿದ್ದಿಲ್ಲ. "ಸತ್ಯಂ ವದ; ಧರ್ಮಂ ಚರ" ಎಂಬುದೇ ಈ ಪುರಾತನ ನೀತಿಯ ಸೂತ್ರವಿತ್ತು. ಆದರೆ ಈಗ ನಾವೆಲ್ಲ ಪ್ರಪಂಚದ ಕುರುಕ್ಷೇತ್ರದಲ್ಲಿ ಅರ್ಜುನರಾಗಿಬಿಟ್ಟಿದ್ದೇವೆ. ನೀತಿಕಲ್ಪನೆಗಳು ಬುಡಮೇಲಾಗಿವೆ. ಹಿಂದಿನ ಮಹಾಪಾತಕಗಳು ಇಂದು ಅಂದಿನಷ್ಟು ತಿರಸ್ಕಾರವನ್ನು ಕೆರಳಿಸುವದಿಲ್ಲ. ಹಿಂದಿನ ಮಹಾಪುರುಷರು ಇಂದು ಅಂದಿನಷ್ಟು ಪುರಸ್ಕಾರವನ್ನು ಪಡೆಯುವದಿಲ್ಲ. ಆಚಾರವಂತಿಕೆಗಿಂತ ಉದ್ದೇಶಕ್ಕೆ,ಕರ್ತವ್ಯಕ್ಕಿಂತ ಭಾವನೆಗೆ ಮಹತ್ವ ಬಂದಿದೆ. ನೀತಿ ಅನೀತಿಗಳ ಆಚೆಗೆ ನಾವು ನೀತಿನಿರಪೇಕ್ಷತೆಯನ್ನೊಂದು, ನೈಸರ್ಗಿಕ ನೀತಿಯನ್ನೊಂದು ಅರಿತುಕೊಳ್ಳಲು ಕಲಿಯುತ್ತಿದ್ದೇವೆ. ಜಾತ್ಯತೀತ ಸರಕಾರದಂತೆ ನೀತ್ಯತೀತ ಸಮಾಜವೂ ನಿರ್ಮಾಣವಾಗುತ್ತಲಿದೆ. ಹಿಂದೆ ಶೀಲಕ್ಕೆ ಇದ್ದ ಬೆಲೆ ಇಂದು ವ್ಯಕ್ತಿತ್ವಕ್ಕೆ ಬರತೊಡಗಿದೆ. ಹೀಗೆ ಆಗುವದೇಕೆ? ಹೀಗೆ ಆಗಲೇ ಬೇಕೆ? ಎಂಬ ಪ್ರಶ್ನೆಗಳು ಇಲ್ಲಿ ಅಪ್ರಸ್ತುತ. ವ್ಯಕ್ತಿತ್ವದ ಆಕರ್ಷಣೆ ಪ್ರಭಾವಗಳು ಇಂದು ಹೆಚ್ಚಾಗಿವೆ. ಅದನ್ನು ಹೆಚ್ಚಿಸಿಕೊಳ್ಳಲಿಕ್ಕೆ ಸಾಮಾನ್ಯರೂ ಸನ್ಮಾನ್ಯರೂ ಕೂಡಿಯೇ ಹೆಣಗುತ್ತಾರೆ. ನಮ್ಮ ಸ್ವಂತದಂತೆ ನಮ್ಮ ನೆರೆಯವರ, ಹಿರಿಯರ, ಮುಂದಾಳುಗಳ ಮನೋರಂಗವನು ನಾವು ಇಣಕಿ ನೋಡುತ್ತೇವೆ. "ನ್ಯೂನಗಂಡ" "ಅಹಂಗಂಡ" ಗಳ ಗಂಡಾಂತರವೂ ನಮ್ಮನ್ನು ಎಲ್ಲ ಕಡೆಯಲ್ಲಿಯೂ ಬಾಧಿಸುತ್ತದೆ! ಆ ಬಾಧೆಯ ನಿವಾರಣೆಗಾಗಿ ನಾವು ಮನಃಶಾಸ್ತ್ರದಿಂದ ಆಧರಿತವಾದ ವ್ಯಕ್ತಿವಿಕಾಸವನ್ನು ಕ್ರಮವಾಗಿ ಕಲಿಸುವ ಅನೇಕ ಪಥ್ಯಪುಸ್ತಕಗಳನ್ನು ಪರಮ ಭಕ್ತಿಯಿಂದ ಪಾರಾಯಣ ಮಾಡುತ್ತೇವೆ. "ಗೆಲುವಿನ ಗುಟ್ಟು" "ಸುಖದ ಶೋಧ" "ಪ್ರಭಾವಿ ಹೇಗಾಗಬೇಕು?" ಮುಂತಾದ ಚಿಕ್ಕದೊಡ್ಡ ಹೊತ್ತಿಗೆಗಳನ್ನು ಇಂದು ಒಳ್ಳೆ ಓದು ಕಲಿತವರ ಮೇಜಿನ ಮೇಲೆಯೂ ನಾವು ನೋಡುತ್ತೇವೆ.

ಇಂದಿನ ವೃತ್ತಪತ್ರಿಕೆಗಳೂ ರಾಜಕೀಯ ಪಕ್ಷಗಳೂ ತಮ್ಮ ಪ್ರಚಾರ ಶೈಲಿಯನ್ನು ಮನೋವೈಜ್ಞಾನಿಕವಾಗಿ ರೂಪಿಸಿಕೊಂಡಿದ್ದಾರೆ. ನಮಗೆ ಗೊತ್ತಾಗುವ ಮೊದಲೆ ನಾವು ಆ ಪ್ರಚಾರಕ್ಕೆ

ಮಾರಿ ಹೋಗುತ್ತೇವೆ. ನಮ್ಮ ಸ್ವತಂತ್ರವೆಂಬ ಮತಗಳು ನಮ್ಮವಿರುವದಿಲ್ಲ. ಮೂರು ಸಲ ನೂರು ಸಲ ಸಾರಿ ದೂರಿ ಸುಳ್ಳನ್ನು ಸತ್ಯವೆಂದು ನಂಬಿಗೆ ಹುಟ್ಟಿಸುವ ಧೂರ್ತರ "ಪಂಚತಂತ್ರ"ವು ಆಧುನಿಕ ಪ್ರಚಾರಕಲೆಗೆ ಮನಃಶಾಸ್ತ್ರದ "ಹಿತೋಪದೇಶ" ವಾಗಿದೆ. ಇಂಥ ಪ್ರಚಾರ ದಿಂದಲೇ ರಾಷ್ಟ್ರಗಳು ಯುದ್ಧಮುಖವಾಗುವವು; ಸಮಾಜಗಳು ಸರ್ವಾಧಿಕಾರಿಗಳನ್ನು ಸ್ವಾಗತಿಸುವವು; ಜಾತಿದ್ವೇಷ, ಜನಾಂಗಶ್ರೇಷ್ಠತೆ, ವರ್ಗ ಕಲಹದ ತತ್ವಗಳು ಬಹುಜನ ಸಮುದಾಯವನ್ನು ಆಳುವವು; ಅನ್ಯೋನ್ಯ ವಿರುದ್ಧ ಸಂಗತಿಗಳನ್ನೂ ಎಂಥ ಅಸಂಬದ್ಧ ವಿಸಂಗತಿಗಳನ್ನೂ ಸ್ವತಂತ್ರ ವಿಚಾರಿಗಳೆಂಬ ಜನರ ಗಂಟಲಲ್ಲಿ ಇಳಿಸಲು ಅನುವಾಗುವದು. ನಮ್ಮ ರಾಜಕೀಯದಲ್ಲಿಯ ವೈಚಾರಿಕ ಗೊಂದಲ, ಬೌದ್ಧಿಕ ಅರಾಜಕತೆಗಳಿಗೆ ಇದೂ ಒಂದು ಕಾರಣ. ಮಹಾತ್ಮರ ಪ್ರಭಾವ, ಅಸಹಕಾರದ ಆಂದೋಲನ, ಸತ್ಯಾಗ್ರಹದ ತಂತ್ರ, ರಾಷ್ಟ್ರೀಯತೆಯಿಂದ ಭಾಷಾನುಗುಣ ಪ್ರಾಂತೀಯತೆಯ ಕಡೆಗೆ ಜನತೆಯ ಒಲವು, ಖಾದಿಯ ಪ್ರಸಾರ, ಪಂಡಿತ ನೆಹರು ಬಳಸುವ 'ಜೈಹಿಂದ' ಘೋಷಣೆಯ ಉಪಾಯ, ಹಿಂದೂ ಸಂಸ್ಕೃತಿಯ ಆಧ್ಯಾತ್ಮಿಕತೆಯ ಅಟ್ಟಹಾಸ, ಪಾತಿವ್ರತ್ಯದ ತತ್ವ ಇವೆಲ್ಲವುಗಳ ಹಿಂದೆ ಆಳವಾದ ವ್ಯಾಪಕವಾದ ಮನೋವೈಜ್ಞಾನಿಕ ಉಪಪ್ರತ್ತಿ ಇರುತ್ತದೆ.

ಕೌಟುಂಬಿಕ ಋಣಾನುಬಂಧುಗಳ ಮೇಲೆಯೂ ಮನಃಶಾಸ್ತ್ರವು ಅಪ್ರತ್ಯಕ್ಷ ಪ್ರಭಾವವನ್ನು ಬೀರಿದೆ. ವಿಶೇಷತಃ ಸುಶಿಕ್ಷಿತ ಅರ್ಧಶಿಕ್ಷಿತ ಕುಟುಂಬಗಳಲ್ಲಿ ಬೆಳೆದ "ನವಮತವಾದವು" ತರುಣ ತರುಣಿಯರ ಸಾಹಚರ್ಯ ಸ್ವಾತಂತ್ರ್ಯ, ವಿವಾಹಪೂರ್ವ ಸಮಾಗಮದ ವ್ಯಾಮೋಹ, ಕುಮಾರಿ ಮಾತೃತ್ವದ ಸಮರ್ಥನೆ, ಮಾತೃತ್ವಕ್ಕಿಂತ ಶೃಂಗಾರಕ್ಕೆ ಕೊಡಬಯಸುವ ಮಹತ್ವ, ಪತಿ—ಪತ್ನಿಗಳ "ಸಂಗಾಡಿ" ತನ ಇವೆಲ್ಲವುಗಳ ಹಿನ್ನೆಲೆಗೆ ಕೇವಲ ಕಾಮುಕತೆ, ದುಃಸಹವಾಸ, ಅಥವಾ ನಾವೀನ್ಯದ ಮೋಹ ಒಂದೇ ಇಲ್ಲ. ಮನಃಶಾಸ್ತ್ರೀಯ, ವಿಶೇಷತಃ ಮನೋವಿಶ್ಲೇಷಣಾತ್ಮಕ ಗ್ರಂಥಗಳ ವಿಚಾರ, ಪ್ರಚಾರಗಳೂ ಪ್ರಬಲ ಕಾರಣಗಳಾಗಿವೆ. ದಾಂಪತ್ಯಜೀವನದ ಸುಖವನ್ನೂ ಯಶಸ್ಸನ್ನೂ ಹೆಚ್ಚಿಸುವದರ ವಿಷಯವಾಗಿ ಧಾರಾಳವಾಗಿ ಸಲಹೆ ನೀಡುವ ಮನಃಶಾಸ್ತ್ರೀಯ ಪುಸ್ತಕಗಳು ಹೇರಳವಾಗಿ ಪ್ರಕಟವಾಗುತ್ತಿವೆ. ಅವು ಓದಲು ಸುಖಾವಾಗಿವೆ; ಪ್ರಕಾಶಕರ ಪ್ರಾಪ್ತಿ ಹೆಚ್ಚಿಸಲೂ ಯಶಸ್ವಿಯಾಗಿವೆ. ಆದರೆ ಎಷ್ಟು ದಂಪತಿಗಳು ಅವುಗಳಿಂದ ಸ್ವಾಸ್ಥ್ಯವನ್ನೂ ಸ್ಥೈರ್ಯವನ್ನೂ ಪಡೆದಿರುವರೆಂಬುದನ್ನು ತಿಳಿಯುವದು ತುಸು ಕಷ್ಟ.

ಇಂದಿನ ನವನಾಗರಿಕ ದಂಪತಿಗಳು ಪರಸ್ಪರ ಸರಿಯಾಗಿ ನಡೆದುಕೊಳ್ಳುವದಿಲ್ಲ. ಮನಃಶಾಸ್ತ್ರೀಯ ವಾಚನದ ಮೂಲಕ ಉಭಯತರೂ ತಮ್ಮ ತಮ್ಮ ಸ್ಥಾನಮಾನ, ತಾರತಮ್ಯಗಳ ಕುರಿತೇ ಸಂದಿಗ್ಧ ಅಥವಾ ಸಂಮುಗ್ಧರಾಗಿರುತ್ತಾರೆ. ಇಂಥ ಪತಿಪತಿಗಳಲ್ಲಿ ಮನಸ್ಸಿನ ಎರಕ, ತಿಳಿವಳಿಕೆಯ ತೂಕ ಅನೇಕ ಸಲ ಕಂಡುಬರುವದಿಲ್ಲ. ತಮ್ಮೊಳಗೆ ಒಟ್ಟಾಗಿದ್ದರೂ ಸಮಾಜದೊಡನೆ ಒಟ್ಟಾಗಿರುವದಿಲ್ಲ. ಇಂಥ ದಾಂಪತ್ಯಗಳಲ್ಲಿ ಸಮಾಧಾನಕ್ಕಿಂತ ಹೆಚ್ಚು ಸಂಭ್ರಮ, ಆನಂದಕ್ಕಿಂತ ಹೆಚ್ಚು ಭಾವೋದ್ರೇಕ, ಸಹಕಾರಕ್ಕಿಂತ ಹೆಚ್ಚು ಸಂಧಾನ, ಶ್ರದ್ಧೆಗಿಂತ ಹೆಚ್ಚು ಸ್ಪರ್ಧೆ ಕಂಡುಬರುತ್ತದೆ. ಅನ್ಯೋನ್ಯವಿಶ್ವಾಸ, ಆತ್ಮವಿಶ್ವಾಸ ಇವೆರಡೂ ಕ್ಷೀಣವಾಗಿ ಸಹಜವಾದ ಸಾಮರಸ್ಯಕ್ಕೆ ಅದು ಮಾರಕವಾಗುತ್ತದೆ. ಹೊಂದುಗೇಡು ಅಂದಗೇಡಿಗೆ ಅನುವಾಗುತ್ತದೆ.

ಹಾಗೆಯೇ ಪಾಲಕರು ತಮ್ಮ ಮಕ್ಕಳ ಕುರಿತು ಕರ್ತವ್ಯನಿಷ್ಠುರರಾಗಿರುವದು ಕಡಿಮೆಯಾಗಿದೆ. ತಮ್ಮ ಅಧಿಕಾರದ ಕುರಿತೇ ಅವರಿಗೆ ಧೈರ್ಯವಿರುವದಿಲ್ಲ. ಮಕ್ಕಳೊಡನೆ ನಿಷ್ಠುರರಾದರೆ ತಾವು "ಪೀಡಾಭೋಗಿ" ಗಳೆನಿಸಬಹುದು; ಮಕ್ಕಳ "ಮನೋದಮನ"ವಾಗಬಹುದು; ಸಲಿಗೆಯಿಂದ ವರ್ತಿಸಿದರೆ ಅವರನ್ನು ಮುದ್ದುಗೆಡಿಸಬಹುದು. ಅಥವಾ ತಮ್ಮದೇ ಲೈಂಗಿಕವಿಕೃತಿಯೆನಿಸಬಹುದು! ಎಂಬ ವಿಕಲ್ಪಗಳು ತಲೆದೋರಿ ಬಡ ತಾಯ್ತಂದೆಗಳು ತಮ್ಮ ಜ್ಞಾನಕ್ಕೆ ತಾವೇ ಹೆದರುತ್ತಾರೆ! 'ಇಡಿಪಸ್' ಮನೋಗಂಡದ ಶೋಧವು ಒಟ್ಟಾರೆ ಮಕ್ಕಳೊಂದಿಗೆ ತಾಯ್ತಂದೆಗಳಲ್ಲಿ ತಿಳಿವಳಿಕೆಗಿಂತ ತಳಮಳ ತಳ್ಳಂಕಗಳನ್ನೇ ಉಂಟುಮಾಡಿದಂತಿದೆ!

ಇದೇ ಮೇರೆಗೆ ಲೈಂಗಿಕ ಜಿಜ್ಞಾಸೆಯು ಇಂದು ಶಾಸ್ತ್ರೀಯವೆನಿಸಿಕೊಳ್ಳತೊಡಗಿದೆ. ಈ ಮಡಿ ಹೆಸರಲ್ಲಿ, ಶಾಸ್ತ್ರವೆಂಬ ಶಾಲು ಹೊದ್ದುಕೊಂಡು, ಎಂಥ ವಿಕೃತ ವಿಕಟ ವಿಷಪೂರಿತ ಅಶ್ಲೀಲತೆಯೂ ಬೀಭತ್ಸ ಸಾಹಿತ್ಯವೂ ಸಮಾಜದ ಮನ್ನಣೆಯನ್ನು ಪಡೆಯುತ್ತಿದೆ- "ನಗ್ನಸತ್ಯ"ದ ಅಭಿರುಚಿಯು ಸತ್ಯಕ್ಕಿಂತ ನಗ್ನತೆಯನ್ನೇ, ನಗ್ನತೆಗಾಗಿ ಸತ್ಯವನ್ನು ಮೆಚ್ಚಿದಂತಿದೆ. ಉಚ್ಚಶಿಕ್ಷಣವು ತೀರ ಅಲ್ಪವಿರುವ ನಮ್ಮ ಜನರಲ್ಲಿ, ಆ ಶಿಕ್ಷಣದ ಉಚ್ಚತೆಯೂ ಸಂಶಯಾಸ್ಪದವಾಗಿರುವ ಸಂದರ್ಭದಲ್ಲಿ, ಯಾವ ವೈಜ್ಞಾನಿಕ ಸಂಸ್ಕಾರವೂ ಇಲ್ಲದ ನಮ್ಮ ಪೀಳಿಗೆಯಲ್ಲಿ, ಶತಮಾನಗಳಿಂದಲೂ ದಮಿತವೂ ಅವರುದ್ಧವೂ ಆದ ವಿಕಾರಗಳ ಅಂಥ ಆವೇಶಕ್ಕೆ ಪಾಶ್ಚಾತ್ಯರ ಅಂಧಾನುಕರಣವು ಕೂಡಿ ಒಂದು ಬಗೆಯ ಭುಗಿಲೆದ್ದ ಭಾವಸ್ಥಿತಿಯಲ್ಲಿ ಅಕಸ್ಮಾತ್ ನವ ಮನಃಶಾಸ್ತ್ರದ ಕಾಮಮೀಮಾಂಸೆಯನ್ನು ಓದಿ ಕಾರ್ಗತ್ತಲೆಯ ಕೋಲ್ಮಿಂಚಿಗೆ ಕಂಗೆಟ್ಟು ಮುಂದುಗಾಣದಂತೆ ನಮ್ಮ ಸುಶಿಕ್ಷಿತರೆಂಬ ತರುಣವರ್ಗವು ನಿಂತಿರುವಾಗ ಭವಿಷ್ಯದ ಕುರಿತು ಭಯಪಟ್ಟುಕೊಳ್ಳುವದು ಸ್ವಾಭಾವಿಕ. ಆದರೂ ಈ ಭಯವೇ ಭವಿತವ್ಯವಾಗಲಾರದು. ಒಟ್ಟಿನಲ್ಲಿ ನಮ್ಮ ಸಮಾಜದ ಮೂಲಕಂದದಲ್ಲಿ ಸನಾತನ ಸಂಸ್ಕಾರದ ಒಂದು ವಿನಯ-ದಾಕ್ಷಿಣ್ಯಗಳ ಸತ್ವವಿದೆ. ಆ ಸತ್ವ ಸದಭಿರುಚಿಯನ್ನು ಕಾಯ್ದುಕೊಂಡಿದೆ. ಅಧುನಿಕತೆಯೂ ನಾಗರಿಕತೆಯೂ ವೈಜ್ಞಾನಿಕ ದೃಷ್ಟಿಯನ್ನು ಕೊಡುವಾಗ ಈ ಸದಭಿರುಚಿಯು ಮಾತ್ರ ಕೆಡದಿರಲಿ. ಹೊಸ ಗಾಳಿಗೆ ಟೊಪ್ಪಿಗೆ ಹಾರಲಿ, ಹೆಳಲು ಕೆದರಲಿ. ಆದರೆ ತಲೆಯು ಮಾತ್ರ ಭದ್ರವಾಗಿ ಅಭಿಮಾನದಲ್ಲಿ ಉನ್ನತವಾಗಿ ನಿಲ್ಲಲಿ.

---

# ಗಿಡ್ಡಾ – ಗಿಡ್ಡಿ



ತುಪ್ಪಾ ಹಾಕು ಗಿಡ್ಡೀ
ಹೂಂ ಹಾಕ್ತೇನಿ ಗಿಡ್ಡಾ
ನಾಳೆ ಬೀಗರು ಬಂದಾಗ ಗಿಡ್ಡಾ ಅನಬ್ಯಾಡ ಗಿಡ್ಡೀ. ಹಾಂ
ಹೂಂ ಗಿಡ್ಡಾ
ಹೂಂ ಹಾಕ್ತೇನ ಗಿಡ್ಡಾ
ತುಪ್ಪಾ ಹಾಕು ಗಿಡ್ಡೀ
ಬೀಗರು ಬಂದಾಗ ಗಿಡ್ಡಾ ಅಂದೆಲ್ಲ?
ಅಂ?
ಅಂಬಾ ಗಿಡ್ಡಾ ಅಂಬಾ ಗಿಡ್ಡಾ
ಆಕಳು ಗಿಡ್ಡಿಯನ್ನು ಕಡಿದು ಒಗೆದ ಸ್ಥಳದಲ್ಲಿಯ ಹುಲ್ಲನ್ನು ತಿಂದಿದೆ
ಅಂಬಾ ಗಿಡ್ಡಾ ನಕ ಮಾಡ್ತೀನಿ ನಿನಗೆ
ಹ್ಯಾಂಗಾತೀಗ? ಚಪ್ಪಲಿ ಮಾಡಿಕೊಂಡು ಬಿಟ್ಟೆ
ಹಾಂ?
ಚರ ಚರ ಗಿಡ್ಡಾ
ಚರ್ ಪರ್ ಗಿಡ್ಡಾ
ಚೂರು ಚೂರು ಮಾಡಿ ಹಾಕ್ತೇನಿ
ಕೋಳಿ ಚೂರು ಹೆಕ್ಕುವದು.
ಕು ಕೂ ಕೂ ಗಿಡ್ಡಾ ಕು ಕೂ ಕೂ ಗಿಡ್ಡಾ
ಇನ್ನೂ ಸಾಯಲಿಲ್ಲ ಮಾಡ್ತೀನಿ ನಿಂದ್ರು ನಿನಗೆ
ಹ್ಯಾಂಗಾತೀಗ ಬೇಯಿಸಿಬಿಟ್ಟೆ ನಿನ್ನ!
ಅಕಬ್ ಅಕಬ್ ಗಿಡ್ಡಾ
ಇನ್ನೂ ಸಾಯಲಿಲ್ಲ? ಈಗ ಕೊಂದು ಹಾಕಿಬಿಡ್ತೇನಿ

# ನಮ್ಮ ಸಂಸ್ಕೃತಿಯ ಹೆಮ್ಮೆ ಸಾಲದು

ಭಾರತದಲ್ಲಿ ಪ್ರಾಚೀನವೂ ಭವ್ಯವೂ ಆದ ಸಂಸ್ಕೃತಿ ರೂಢವಾಗಿದೆ. ನಮ್ಮ ಪೂರ್ವಜರ ಮಹಾಕೃತಿಗಳ ರೂಪದಲ್ಲಿ ನಮ್ಮ ನಾಡಿನ ಹಿನ್ನೆಲೆಗೆ ಎರಕವಾಗಿ ಅದು ಇಂದಿಗೂ ಉಳಿದಿದೆ. ಆದರೆ ಆ ಸಂಸ್ಕೃತಿಯನ್ನು, ಅದರ ಸೊಬಗನ್ನು ಜನರಿಗೆ ತಿಳಿಹೇಳುವ ವ್ಯವಸ್ಥೆಯನ್ನು ಸ್ವತಂತ್ರರಾದ ಮೇಲೂ ನಾವು ಅಲಕ್ಷ ಮಾಡಿದ್ದೇವೆ. ಪರಿಣಾಮವಾಗಿ ಪರಕೀಯರ ಸಂಸ್ಕೃತಿಯ ವಿಕೃತ ಪ್ರತಿಗಳು ನಮ್ಮ ಜನತೆಯನ್ನು ಆಕರ್ಷಿಸಿ ನಮ್ಮದನ್ನು ಮೂಲೆಗುಂಪು ಮಾಡಿವೆ. ಸಂಸ್ಕೃತಿ ರಕ್ಷಣೆಗೆ ಪಾಶ್ಚಾತ್ಯ ರಾಷ್ಟ್ರಗಳು ಏನೇನು ಮಾಡುತ್ತಿವೆಯೆಂಬುದನ್ನು ಮೊನ್ನೆ ಮೊನ್ನೆ ಯುರೋಪ ಸಂಚಾರ ಮಾಡಿಬಂದ ಲೇಖಕರು ವಿವರಿಸಿದ್ದಾರೆ.

ಲೇಖಕರು: ಶ್ರೀ. ಶಿವರಾಮ ಕಾರಂತ

ಯಾವುದೊಂದು ನಾಡಿನ ಸಾಹಿತ್ಯ, ಕಲೆ, ತತ್ವಜ್ಞಾನ ಮೊದಲಾದುವು ಆ ದೇಶದ ಸಂಸ್ಕೃತಿಯ ತಿರುಳೇನೆಂದು ಜಗತ್ತಿಗೆ ಸಾರುವ ಕೃತಿಗಳಾಗುತ್ತವೆ. ದೇಶೀಯನೊಬ್ಬ ತನ್ನ ನಾಡಿನಲ್ಲಿ ಬಾಳಿ, ಬದುಕಿ-ಅದರ ನೆಲದಲ್ಲಿ ನಡೆದು, ನೀರಲ್ಲಿ ಈಸಿ, ಗಾಳಿಯಲ್ಲಿ ಉಸಿರಾಡಿ-ಅಲ್ಲಿನ ಆವರಣವು ತನಗೆ ಒದಗಿಸುವ ಯಾವತ್ತು ಅನುಭವಗಳಿಂದ ತನ್ನ ಮನಸ್ಸನ್ನು ಬೆಳೆಯಿಸಿಕೊಂಡು ಪ್ರಬುದ್ಧನಾಗುತ್ತಾನೆ. ಆ ಆವರಣವು ತನ್ನಲ್ಲಿ ಹುಟ್ಟಿಸಿದ ನೂರಾರು ಸಿಹಿ, ಕಹಿ ಅನುಭವಗಳನ್ನೆಲ್ಲ ಒಂದೊಂದು ಕಲಾಸಾಧನದ-ಮೂಲಕ ಪ್ರಕಟಿಸಲು ಪ್ರಯತ್ನಿಸುತ್ತಾನೆ. ಆವನು ಜೀವನವನ್ನು ನೋಡುವ ನೋಟ, ನಡೆಸುವ ದಾರಿಗಳಿಗೂ ಅವುಗಳಿಂದ ಹುಟ್ಟುವ ಮಾನಸಿಕ ಪ್ರತಿಕ್ರಿಯೆಗಳಿಗೂ-ಅವನು ಬೆಳೆದು ಬಂದಿರುವ ಆವರಣವು ಕಾರಣವಾಗುತ್ತದೆ. ಈ ಆವರಣದಲ್ಲಿ ಅವನ ದೇಶೀಯ ಸಂಸ್ಕೃತಿಯು ಪ್ರಧಾನ ಪಾತ್ರವಹಿಸುತ್ತದೆ.

ಸಂಸ್ಕೃತಿಯೆಂಬುದು ಒಂದೆರಡು ದಿನಗಳಲ್ಲಿ ಮೊಳೆತು, ಚಿಗುರಿ, ಹೂಬಿಟ್ಟು, ಫಲವನ್ನೀಯುವ ಘಟನೆಯಲ್ಲ. ಬದಲು-ಅನೇಕ ಶತಮಾನಗಳಲ್ಲಿ ಅಲ್ಲಿನ ಜನಜೀವನವು ನಡೆದು ಬಂದುದರ ಪರಿಣಾಮ; ಫಲ. ಜನರ ಊಟ ಪಾಠ, ಉಡುಗೆ ತೊಡುಗೆ, ನಂಬಿಕೆ, ತತ್ವಜ್ಞಾನ ಇವೆಲ್ಲ ಅವರ ಒಟ್ಟು ಬದುಕಿನ ಸಾರಸರ್ವಸ್ವವಾಗುತ್ತವೆ. ಇವು ಬಹುವಾಗಿ ಜನಗಳು ಅನುಸರಿಸಿಕೊಂಡು ಬಂದಿರುವ — ಮತ, ನಂಬಿಕೆಗಳಿಂದ ಹುಟ್ಟಬಂದುವು. ಪರಂಪರೆಯಿಂದ ಮೂಡಿ, ಬೆಳೆದು, ಒಂದು ಬಗೆಯ ಸಾಂಪ್ರದಾಯಿಕತೆಯಿಂದ, ಅನುಕರಣೆಯಿಂದ ಆಚರಣೆಗೆ ಬಂದು ಬದುಕುವಂಥವು.

ಮನುಷ್ಯನು ತನ್ನ ಭಾವನೆಗಳಿಗೆ ರೂಪನ್ನು ಕೊಡಲು ನೆರವಾಗುವ ಮಾತುಗಾರಿಕೆಯ ಮೇಲೆ ಸಂಸ್ಕೃತಿಯ ಮುದ್ರೆ ಬಲವಾಗಿರುತ್ತದೆ. ಹಾಗೆಯೇ ನಾಡಿನ ನಾಟಕ, ಗೀತ, ಶಿಲ್ಪ ಮೊದಲಾದ ಕೃತಿಗಳ ಮೇಲೆಯೂ ಪರಿಣಾಮವುಂಟಾಗುತ್ತದೆ. ಇವುಗಳ ಒಟ್ಟು ಮೊತ್ತ-ಆ ಕಾಲದಲ್ಲಿ ಬದುಕಿದವರ ಮೇಲೆಯೂ ಅನಂತರ ಬರುವ ಪೀಳಿಗೆಯ ಮೇಲೆಯೂ ಕಾಣಿಸುತ್ತದೆ. ಹೀಗಾಗಿ ಒಂಧು ಜನಾಂಗ ತನ್ನತನವನ್ನು ವಿಶಿಷ್ಟವಾಗಿ ಉಳಿಸುವ ಸಂಸ್ಕೃತಿಯ ವಿಚಾರದಲ್ಲಿ ಹೆಮ್ಮೆಪಡುವುದು ಸ್ವಾಭಾವಿಕ. ಒಂದು ಜನವರ್ಗ ಇನ್ನೊಂದು ಜನವರ್ಗದಿಂದ ಬೇರೆಯಾಗಿದೆಯೆಂಬುದನ್ನು ಗುರುತಿಸಿ ತೋರಿಸಬಲ್ಲ ಶಕ್ತಿಸ್ವರೂಪವೇ ಸಂಸ್ಕೃತಿ. ಹಾಗೆ ಒಂದು ಸಂಸ್ಕೃತಿಯಲ್ಲಿ ಅದ್ದಿ ಬೆಳೆದವನಿಗೆ—ತನ್ನ ಸಂಸ್ಕೃತಿಯ ಅರಿವು ಆಗದೆ ಹೋದರೂ ಪರಕೀಯ ಸಂಸ್ಕೃತಿಯನ್ನು ಕಂಡಾಗ, ತನ್ನ ಜೀವನದ ರೀತಿಗೂ ನೀತಿಗೂ ಅಭಿರುಚಿಗೂ-ಅನ್ಯರದಕ್ಕೂ ಇರುವ ಅಂತರವು-ಅವರ ಮಾತು, ನಡತೆ, ಮಾನಸಿಕ ತೀರ್ಮಾನಗಳಲ್ಲಿ ಹೊಡೆದು ಕಾಣುತ್ತದೆ.

ಆ ಇನ್ನೊಂದು ಪರಕೀಯ ಸಂಸ್ಕೃತಿ ಅವನಿಗೆ ಮೋಹಕವಾಗಿಯೂ ಶ್ರೇಷ್ಠವಾಗಿಯೂ ಕಾಣಿಸಬಹುದು; ಬರ್ಬರವಾಗಿಯೂ ಮ್ಲೇಚ್ಛವಾಗಿಯೂ ನಿಂದ್ಯವಾಗಿಯೂ ತಿರಸ್ಕರಣೀಯವಾಗಿಯೂ ಕಾಣಿಸಬಹುದು. ತೀರ ಸಂಕುಚಿತ ಆವರಣ, ಸಂಪ್ರದಾಯಗಳಲ್ಲಿ ಬಾಳಿ, ಅಂಧಾನುಕರಣೆಯಿಂದಲೇ ಜೀವನ ನಡೆಯಿಸಿದವನಿಗೆ—ಪರರ ಜೀವನದ ಬಗೆಗಳು ಒಪ್ಪದೆ ಹೋಗಬಹುದು; ಅಸಹ್ಯವಾಗಿ ಕಾಣಿಸಲೂ ಬಹುದು. ಆದರೆ ತನ್ನ ಸಂಸ್ಕೃತಿಯನ್ನು ತುಲನೆ ಮಾಡಿ ವಿಮರ್ಶಿಸಿ ನೋಡಬಲ್ಲವನ ಕಣ್ಣಿಗೆ-ಹೊರ ಸಂಸ್ಕೃತಿಯೊಂದರಲ್ಲಿ ಚೆಲುವೂ ಕಾಣಿಸಬಹುದು. ಈ ಚೆಲುವನ್ನು, ಅಥವಾ ಚೆಲುವೆಂದು ತಾನು ಮೆಚ್ಚಿದುದನ್ನೇ ಆತ ಅನುಸರಿಸಿ ತೊಡಗಲೂಬಹುದು. ಅವನನ್ನು ಅವನ ಜನಗಳು ಅನುಸರಿಸುತ್ತಾರೆ.

ಆದರೆ ಬೇರೊಂದು ಜನವರ್ಗವಿದೆ-ಸಂಸ್ಕೃತಿಯೆಂಬ ಒಂದು ಪದಾರ್ಥವಿದೆಯೇ ಇಲ್ಲವೇ ಎಂಬ ಪರವೆಯಿಲ್ಲದೆ ಬಾಳುವ ಜನವರ್ಗ. ಹಾಗೆ ಒಂದು ಸಂಸ್ಕೃತಿಯ ಪೂರ್ಣ ಸ್ವರೂಪವನ್ನು ಮೆರೆತಿರುವುದು ಸಾಧ್ಯವಿಲ್ಲವಾದರೂ ಅದರ ಅನೇಕ ಗುಣಗಳನ್ನು ಮರೆತು ವರ್ತಿಸುವುದು ಸಾಧ್ಯ. ಒಂದು ಜನಾಂಗದ ಮೇಲೆ ಇನ್ನೊಂದು ಜನಾಂಗದ ಗಾಳಿ ಬೀಸುತ್ತಿರುವಾಗ, ಅಥವಾ-ಕೇವಲ ಅಂಧಶ್ರದ್ಧೆಯ ಮೇಲೆ ಆಧುನಿಕ ವೈಜ್ಞಾನಿಕ ನೋಟ ಬೀಸುವಾಗ-ಸಂಪ್ರದಾಯ, ಅಂಧಾನುಕರಣೆಗಳ ಕಡಿವಾಣ ಕಳಚುತ್ತದೆ. ಈ ಕಾಲ ಪ್ರಭಾವಶಾಲಿಯಾದ ಕಾಲ. ಆಗ ವ್ಯಕ್ತಿ ತನಗೆ ಅನುಕೂಲವೆಂದು ಕಾಣಿಸುವ ಯಾವುದೇ ಆಚರಣೆಗೆ ತೊಡಗಲೂಬಹುದು. ಅಥವಾ ಬೇರೊಂದು ದಾರಿಯಲ್ಲಿ ಅವನ ವಿಚಾರಸರಣಿ ಹರಿಯಬಹುದು. ತನ್ನ ಸಂಸ್ಕೃತಿಯೇ ಕಾಡು, ಅರ್ಥವಿಲ್ಲದ್ದು ಎಂದು ಆತನಿಗೆ ತೋರತೊಡಗಲೂಬಹುದು. ಸಂಸ್ಕೃತಿಯ ರೀತಿ-ನೀತಿಗಳು ಅನುಕರಣೆಯಿಂದ ಬರುತ್ತವೆ ಎಂದೆ; ಅವುಗಳಲ್ಲನೇಕ ನಮ್ಮ ನಡವಳಿಕೆಗೆ ಅರ್ಥವಿಲ್ಲದೆ ಅಂಟಿಕೊಂಡು ಬರಬಹುದು; ಕಾಲಮಾನದಲ್ಲಿ ನಿರುಪಯುಕ್ತವಾಗಿರುವಂಥವೂ ಇವೆ; ಕೆಲವು ಹಾನಿಕರವಾಗಿ ಈಗಿನ ದಿನಕ್ಕೆ ಕಾಣಿಸಲೂ ಬಹುದು. ಒಂದು ಜನಸಮುದಾಯದಲ್ಲಿ-ತಮ್ಮ ನಡವಳಿಕೆ, ನಂಬಿಕೆ ಮೊದಲಾದವುಗಳ ತೂಕ, ಉಪಯುಕ್ತತೆಗಳೆಷ್ಟೆಂದು ಚಿಂತಿಸಿ-ಇರಿಸಿಕೊಳ್ಳುವುದಾವುದು, ಚೆಲ್ಲುವುದಾವುದು-ಎಂದು ಯೋಚಿಸುವ ಜನ ವಿರಳ. ಅಂಥವರು ಕೆಲವರೇ. ಆ ಕೆಲವರಲ್ಲಿ - ಸಮಾಜಪ್ರತಿಷ್ಠೆ

ಯುಳ್ಳವನು ಮಾತ್ರ ಅಂಥ ಸುಧಾರಣೆ ಕೈಕೊಂಡರೆ-ಅವನ ದಾರಿ ಸಾಗೀತು. ಸಾಮಾನ್ಯರು ಹಾಗೆ ಮಾಡಿದರೆ ನಗೆಗೀಡಾದಾರು. ಪ್ರಭಾವಶಾಲಿಯು ಈ ಕೆಲಸ ಮಾಡಿದಲ್ಲಿ-ಜನರು ಅವನನ್ನು ಸುಲಭವಾಗಿ ಹಿಂಬಾಲಿಸುತ್ತಾರೆ. ಅಸ್ಪೃಶ್ಯತೆಯನ್ನು ಕುರಿತಾದ ಭಾವನೆ, ವರ್ತನೆ ಬದಲಿಸಲು ಗಾಂಧೀಜಿಯವರಂತಹ ಪ್ರಭಾವಶಾಲಿಗಳ ನಡವಳಿಕೆ, ಮಾತು-ಎಷ್ಟು ಕಾರಣವೆಂದು ನಮಗೆ ತಿಳಿಯುತ್ತದೆ.

ನಮ್ಮ ಭರತಖಂಡಕ್ಕೆ-ಅನೇಕಾನೇಕ ವರ್ಣಗಳೊಡನೆ ಜನಾಂಗಗಳೊಡನೆ ಸಂಪರ್ಕ ಒದಗಿತು. ಹಾಗೆ ಸಂಪರ್ಕಗೊಂಡ ಜನವರ್ಗಗಳು ನಮ್ಮಲ್ಲಿಯೇ ಬಂದು ನೆಲೆಸಿದರು. ಅದರಿಂದ ಅನ್ಯದೇಶೀಯವಾದ ಅವರ ಸಂಸ್ಕೃತಿ ನಮ್ಮದರೊಡನೆ ಬೆರೆಯಿತು; ನಮ್ಮಿಂದ ಅವರಿಗೂ ಸಂದಿತು; ಅವರಿಂದ ನಮಗೂ ಬಂದಿತು.

ಆದರೆ ನಮ್ಮ ಮೇಲೆ ಪ್ರಭುತ್ವಮಾಡಿದ ಐರೋಪ್ಯ ಸಂಸ್ಕೃತಿ-ನಮ್ಮದಕ್ಕಿಂತ ತೀರ ಭಿನ್ನವಾಗಿದ್ದುದು; ಆದುದರಿಂದ ನವೀನವೆನಿಸಿತ್ತು. ಅನುಕರಿಸುವ ಜನಕ್ಕೆ "ನಾವೀನ್ಯ" ಮೊದಲ ಮತ್ತು ಹಿರಿಯದಾದ ಪ್ರಭಾವ. ಇದರಿಂದಾಗಿಯೂ ಐರೋಪ್ಯರನ್ನು ಅನುಸರಿಸತೊಡಗಿದೆವು ನಾವು. ಪರದೇಶೀಯರನ್ನೇ ಅರಗಿಸಿಕೊಂಡು ನಮ್ಮವರನ್ನಾಗಿ ಮಾಡುವ ಸ್ಥಿತಿ ನಮಗಿರಲಿಲ್ಲ. ಮೊಗಲರಂತೆ, ಹೂಣರಂತೆ, ಸಿಥಿಯನರಂತೆ, ಆರ್ಯರಂತೆ ಅವರಾಗಿ ನಮ್ಮೊಡನೆ ಬಂದು ನೆಲಸಿ, ಸೆಣಸಿ, ಒಂದಾಗಲೂ ಇಲ್ಲ. ದೂರದಲ್ಲಿಯೇ ಉಳಿದರು. ಅವರ ಸಂಸ್ಕೃತಿಯ ಹಿರಿಮೆ, ಕಿರಿಮೆ, ಇಲ್ಲವೆ ಉಪಯುಕ್ತತೆಗಳ ವಿಚಾರವಾಗಿ ತಿಳಿಯುವುದಕ್ಕೂ ಅವರ ನಾಡು ದೂರ ಉಳಿಯಿತು; ಅವರ ಐತಿಹಾಸಿಕ ಹಿನ್ನೆಲೆ ದೂರ ಉಳಿಯಿತು; ಅವರ ಹಿನ್ನೆಲೆ ಅವರ ಕುಲಗಳೂ ದೂರವಾಗಿದ್ದುವು. ಆದರೆ ಅವರ ಸಂಸ್ಕೃತಿಯನ್ನು—ಅರ್ಥ, ಸಂಬಂಧ, ತಿರುಳುಗಳನ್ನು ಕಡಿದುಕೊಂಡು ಬಿದ್ದ ಪರೆಯಂತಿರುವ ಕವಚವನ್ನಷ್ಟೇ ನಾವು ಮೋಹಿಸಿದೆವು. ಅದೇ ನೀತಿಯನ್ನು ಇಂದಿಗೂ ಅನುಸರಿಸುತ್ತಿದ್ದೇವೆ. ಇದರಿಂದಾಗಿ ನಮ್ಮ ಆವರಣದಲ್ಲಿ ಬದುಕಿನ ಚೆಲುವು, ಕೆಡುಕು, ಸಿಹಿ, ಕಹಿಗಳನ್ನು ತೂಗುವ ಬಗೆ, ಅಳೆಯುವ ಕಣ್ಣುಗಳೆಲ್ಲ ಗೊಂದಲಕ್ಕೆ ಸಿಕ್ಕಿಕೊಂಡಿವೆ.

ನಮ್ಮ ಚಲಚ್ಚಿತ್ರ, ಅವುಗಳ ಸಂಗೀತಗಳಲ್ಲಿ ನಾವು ಕಾಣುತ್ತಿರುವ ವಿಚಿತ್ರ ಆಭಾಸಗಳು ಸಂಸ್ಕೃತಿಯಿದ್ದರೂ ಅವುಗಳ ಜ್ಞಾನವಿಲ್ಲದೆ ಸಾಗುತ್ತಿರುವ ಜನಗಳ ಪರಿಸ್ಥಿತಿಯನ್ನು ತೋರಿಸುತ್ತದೆ. ಈ ಚಲಚ್ಚಿತ್ರಶಾಲೆಗಳನ್ನು ಮುತ್ತುತ್ತಿರುವ ಮಹಾಜನರು ಸಂಸ್ಕೃತಿಗೆ ಕುರುಡಾಗಿಯೇ ಹೋಗುತ್ತಿದ್ದಾರೆ. ತಮ್ಮ ಸಂಸ್ಕೃತಿಯ ಅರಿವು ಅವರಿಗಿದ್ದಲ್ಲಿ ಎಂದಿಗೂ ಈ ಬಗೆಯ ಸಂಗೀತ, ನಟನೆ, ಉಡುಗೆ-ತೊಡುಗೆಗಳ ಸಲುವಾಗಿ, ಜನಗಳಲ್ಲಿ ಉನ್ಮತ್ತ ಪ್ರವೃತ್ತಿಯುಂಟಾಗುವುದು ಸಾಧ್ಯವಿಲ್ಲ.

ಆ ಹೊರ ದೇಶಗಳ ಆಘಾತಗಳು ಪ್ರತಿಯೊಂದು ನಾಡಿನ ಮೇಲೂ ಉಂಟಾಗಿವೆ. ಆದರೆ ಅಂಥ ಆಘಾತವನ್ನು ಇದಿರಿಸಿ, ತಮ್ಮ ಸಂಸ್ಕೃತಿಯ ಅರಿವಿನಿಂದ, ಹೊಸಗಾಲಕ್ಕೆ ತಕ್ಕಂತೆ ಬೆಳೆಯುವ, ತಮ್ಮದನ್ನೇ ಬದಲಿಸುವ ಶಕ್ತಿಯನ್ನು ಆಯಾ ಸಂಸ್ಕೃತಿಗಳು ತಾಳಬೇಕಾಗುತ್ತದೆ.

★

ಸಂಸ್ಕೃತಿ — ಬಹುಮಟ್ಟಿಗೆ ಅನುಕರಣೆಯಿಂದಲೇ ಉಳಿಯುವ ಜೀವನದ ಮಿರುಗು-ಎಂದದ್ದಾಯಿತು. ಅದೇನೆ ಅದರ ಕೊರತೆ. ನಮ್ಮ ಸಂಸ್ಕೃತಿಯನ್ನು ಅರಿತು ಬಳಸುವ, ಬೆಳೆಸುವ, ಅದರ ಅರ್ಥ ಸೊಬಗುಗಳನ್ನೇ ತಮ್ಮ ಜನಕ್ಕೆ ತಿಳಿಸುವ ಪ್ರಯತ್ನಗಳು ನಮ್ಮಲ್ಲಿ ಸಾಗದೆಯೆ — ಸ್ವಂತವಾದ ಅಭಿರುಚಿಗಳೂ ನಮ್ಮ ಸಂಸ್ಕೃತಿಯ ಮೇಲಿನ ಗಾಢ ಮಮತೆಯೂ ಬೆಳೆಯಲಾರದು. ಈ ಪ್ರಯತ್ನವನ್ನು ಯುರೋಪಿನ ಹಲವು ರಾಷ್ಟ್ರಗಳು ಬಹು ಚೆನ್ನಾಗಿ ಮಾಡುತ್ತಿವೆ. ಅವರು ತಮ್ಮ ಸಂಸ್ಕೃತಿಯ ವಿವಿಧ ಮುಖಗಳನ್ನು ತೋರಿಸುವ ಗ್ರಂಥ, ಮ್ಯೂಸಿಯಮುಗಳನ್ನು ನಿರ್ಮಿಸಿದ್ದಾರೆ. ಅದರಂತೆ ಅನ್ಯ ಜನಾಂಗಗಳ ಸಂಸ್ಕೃತಿಗಳನ್ನು ಅಭ್ಯಸಿಸಲು ಪ್ರಯತ್ನ ಮಾಡುತ್ತಿದ್ದಾರೆ. ಈ ವಿಷಯದಲ್ಲಿ ಅವರು ನಡೆಸುತ್ತಿರುವ ಅನ್ವೇಷಣೆ, ಸಂಶೋಧನೆ, ಕೂಡಿರಿಸುತ್ತಿರುವ ವಸ್ತುವಿಶೇಷಗಳು, ಪ್ರಕಟಿಸುತ್ತಿರುವ ಗ್ರಂಥಗಳು ಅವರ ಪ್ರಯತ್ನಕ್ಕೆ ಸಾಕ್ಷಿಯಾಗಿವೆ.

ನಮ್ಮ ನಾಡಿನ ಮುಖಂಡರು 'ಭಾರತೀಯ ಸಂಸ್ಕೃತಿ'ಯನ್ನು ಕುರಿತಾಗಿ ಉದ್ದುದ್ದ ಮಾತನಾಡುವುದನ್ನು ಕೇಳುತ್ತಿದ್ದೇವೆ. ಆದರೆ ಅದನ್ನು ಉಳಿಸಲು, ಚೇತರಿಸಲು ಏನು ಪ್ರಯತ್ನ ಮಾಡುತ್ತಿದ್ದಾರೆ? ಆ ಸಂಸ್ಕೃತಿಯ ವಿವಿಧ ಮುಖಗಳು ಯಾವುವು; ಯಾವ ಮುಖ ಏನು ಸಾಧಿಸೀತು—ಎಂದೆಲ್ಲ ಜನಕ್ಕೆ ತಿಳಿಸಿ, ಅವುಗಳ ಮೇಲೆ ಪ್ರೀತಿ ಹುಟ್ಟುವಂತೆ—ಅದು ಬೆಳೆಯುವಂತೆ ಯಾರು ಪ್ರಯತ್ನ ಮಾಡುತ್ತಿದ್ದಾರೆ? ಧಾರ್ಮಿಕವಾದ, ಮತಾಚಾರದ ಎಷ್ಟೋ ಕಟ್ಟುಕಟ್ಟಳೆಗಳು ಮಾತ್ರ 'ಪಾಪಪುಣ್ಯದ ಭೀತಿ'ಯಿಂದಲೋ, 'ಸ್ವರ್ಗನರಕಗಳ ಬೆದರಿಕೆ'ಯಿಂದಲೋ— ಉಳಿದಿವೆ. ಆದರೆ ಇವು ಸಹ ಎಲ್ಲ ಕಾಲಕ್ಕೂ ಹಾಗೆ ಉಳಿಯಲಾರವು. ಅರಿವು, ಅಭಿರುಚಿಗಳಿಂದ ಮಾತ್ರ ಅವಕ್ಕೆ ತಾಳಿಕೆಯ ಗುಣ ಬರುತ್ತದೆ. ಈ ವಿಚಾರಸರಣಿಯನ್ನೇ ಕೆದಕಿ ಇನ್ನಷ್ಟು ವಿವರಿಸುತ್ತೇನೆ.

ಇವತ್ತಿನ ವಿದ್ಯಾವಂತ ಮಧ್ಯಮತರಗತಿಯವನ ಮನೆಯೊಂದನ್ನು ಹೊಕ್ಕರೆ—ಅವನು ಬಳಸುವ ವಸ್ತು, ತೊಡುವ ಬಟ್ಟೆ, ಇರುವ ಮನೆ ದೇಶೀಯವೇ ಆದರೂ—ದೇಶೀಯವಾದ ಚಿತ್ರ, ಕೆತ್ತನೆ, ಶೈಲಿಗಳೆನಿಸದ ಹೊಸತನವನ್ನು ತೋರಿಸಬೇಕೇಕೆ? ಅಥವಾ ಸೊಗಸುಗಾರಿಕೆ, ಅಲಂಕಾರಿಕೆ (Decorativeness)ಯಿಲ್ಲದ ಬೋಳು ವಸುಗಳೇ ತುಂಬಿರಬೇಕೇಕೆ? ನಮ್ಮ ಹಳೆಯ ವಸ್ತುಗಳಲ್ಲಿ ಸೊಗಸು ಇಲ್ಲವೆಂದು ಇದರ ಅರ್ಥವೇ? ಅಥವಾ ಅಲ್ಲಿದ್ದ ಸೊಗಸನ್ನು ಮೆಚ್ಚಲಾರದ ಮಹಾನುಭಾವ ಈತ ಎಂದು ಅರ್ಥವೇ?

ನಮ್ಮ ನಾಡಿನಲ್ಲಿಯೇ ಹುಟ್ಟಿ, ನಮ್ಮ ಹಿರಿಯರಿಗೆಲ್ಲ ರುಚಿಸಿ, ಉಳಿದುಬಂದ — ಅನೇಕ ರೀತಿಯ ಕೆತ್ತನೆ, ಚಿತ್ರ, ರೂಪ, ಆಕಾರ, ಪ್ರತಿರೂಪಗಳು ಸಾವಿರಾರು ಇರುವಾಗ—ಅವೊಂದೂ ಇಂದಿನ ನಮ್ಮ ಕಣ್ಣಿಗೆ ಸೊಗಯಿಸುತ್ತಲಿಲ್ಲ—ಎಂದು ಅರ್ಥವೇ? ಮುಂಬಯಿ ರಾಜ್ಯದ ಶಾಲೆಗಳಲ್ಲಿ ಡ್ರಾಯಿಂಗ ಪಾಠಕ್ಕೆ—ಡಿಸೈನ್, ಪ್ರತಿರೂಪಗಳನ್ನು ಬರೆಯಲು ಕೊಡುವ ಆದರ್ಶಗಳೆಲ್ಲವೂ ಪರದೇಶದವು. ನಮ್ಮ ಹೆಣ್ಣು ಹುಡುಗರ

ಕಸೂತಿಗೆ ಆರಿಸಿಕೊಳ್ಳುವ ಚಿತ್ರಗಳೆಲ್ಲವೂ ವಿದೇಶೀಯವಾದುವು. ಅವರ ದೇಶದ ಕಸೂತಿ, ಡಿಸೈನ್, ಪ್ರತಿರೂಪಗಳು—ಅವರಲ್ಲಿ ಕಾಲಮಾನದಿಂದ ಬೆಳೆದುಬಂದ ಎಲೆ, ಬಳ್ಳಿ, ಹೂಗಿಡಗಳಿಂದಲೂ ಅವುಗಳ ಬಣ್ಣಗಳಿಂದಲೂ—ಅಲ್ಲಿನ ವಿವಿಧ ಚಿತ್ರಶೈಲಿಗಳಿಂದಲೂ ಉಂಟಾದುವು. ನಮ್ಮ ನೆಲೆಗಟ್ಟು ಆವರಣ, ಜೀವನವನ್ನು ಸೊಗಯಿಸಿದ ವಸ್ತು-ಒಡವೆ, ರೂಪ, ಆಕಾರ, ಬಳ್ಳಿಗಳಿಂದ ಹುಟ್ಟುದುವಲ್ಲ. ನಮ್ಮ ದೇಶದಲ್ಲಿ ಇಂದು ಇಷ್ಟೆಲ್ಲ ದೇಶೀಯ ವಸ್ತುಶೈಲಿಗಳು ಆಗಿಹೋಗಿ ನಮ್ಮ ಮನ್ನಣೆಯನ್ನು "ಬಾಯ್ದೆರೆ"ಯಾಗಿ ಪಡೆಯುತ್ತಿವೆಯಾದರೂ-ನಮ್ಮ ಸಾರ್ವಜನಿಕ ಕಟ್ಟಡಗಳು ಅನುಸರಿಸುತ್ತಿರುವ ವಾಸ್ತುರೇಖೆ, ಶೈಲಿ, ಸ್ತಂಭ ಮೊದಲಾದುವೆಲ್ಲ—ರೋಮ, ಗ್ರೀಕ್ ದೇಶಗಳಿಂದ ಆಗಮಿಸಿದುವು. ಅವುಗಳನ್ನು ನಾವು ಬಳಸುತ್ತಿರುವ ರೀತಿಯೂ ಅಭಿರುಚಿಗೆಟ್ಟ ದಾರಿ; ನಮ್ಮಲ್ಲಿರುವ ನಮ್ಮ ಶೈಲಿಗಳಲ್ಲೊಂದೂ ನಮ್ಮ ಸಾರ್ವಜನಿಕ ಮಂದಿರಗಳಿಗೆ ಬಾರದೇ? ನಾವು ಅನ್ಯರಿಂದ ಎರವಾಗಿ ಕೊಳ್ಳುತ್ತಿರುವ ಕಮಾನು, ಸ್ತಂಭ, ಶಿಖರಗಳನ್ನು ಅವುಗಳ ಹಿನ್ನೆಲೆ ಮರೆತು ಬಳಸುತ್ತಿರುವದರಿಂದ—ಆ ಶೈಲಿಗಳ ಸೊಗಸನ್ನೂ ನಾವು ತೋರಿಸದವರಾಗಿದ್ದೇವೆ. ಅಂಥ ಪ್ರಯೋಗಗಳು ನಮ್ಮ ಅಭಿರುಚಿ ಹೀನತೆಯನ್ನು, ಅರಸಿಕತನವನ್ನು ಮಾತ್ರ ಸಾರುತ್ತಿವೆ.

ನಾರ್ವೆ, ಇಂಗ್ಲಂಡ್ ಮೊದಲಾದ ದೇಶಗಳವರು ಕೂಡಿಹಾಕಿರುವ ತಂತಮ್ಮ ದೇಶೀಯ ಒಡವೆ ವಸ್ತುಗಳ ಅಲಂಕಾರಿಕತೆಯನ್ನು ಕಾಣುವಾಗ—ಇಲ್ಲಿಂದ ಹೋದ ಪ್ರವಾಸಿಗೆ ನಮ್ಮಲ್ಲಿ ಇಂಥವನ್ನು ಮಾಡಲು ಬರಲಾರದೇ ಅನಿಸುತ್ತದೆ. ಬರುತ್ತದೆಂದು ಅವರೇನೇ ತೋರಿಸಿದ್ದಾರೆ; ಬ್ರಿಟಿಷ ಮ್ಯುಸಿಯಂ, ಎಮ್ಸ್ಟರಡೇಮಿನ 'ಟ್ರೊಪೆನ್ ಮ್ಯುಸಿಯಮ್', ಪ್ಯಾರಿಸಿನ 'ಮ್ಯುಸಿಗಿಮೆ', ಕೊಪನಹೇಗಿನ 'ನೇಶನಲ್ ಮ್ಯುಸಿಯಮ್'ಗಳಲ್ಲಿ-ಭಾರತೀಯ ಶಾಖೆಯನ್ನು ನೋಡಿದರೆ ನಮಗೇ ವಿಸ್ಮಯವಾಗದಿರದು. ಖಂಡಿತವಾಗಿಯೂ ನಮ್ಮ ಕೆತ್ತನೆ, ಶಿಲ್ಪ, ಕಸೂತಿ ಮೊದಲಾದವುಗಳಲ್ಲಿ ಬಳಸಿರುವ ಅಲಂಕಾರಗಳನ್ನು ನಾವು ಬರೆದಿರಿಸಿದಲ್ಲಿ ಲಕ್ಷಾಂತರ ಸುಂದರ ಮಾದರಿಗಳನ್ನು ಗುರುತಿಸಬಹುದು. ನಾವು ಅಂಥ ಪ್ರಯತ್ನ ಮಾಡುತ್ತಿದ್ದೇವೆಯೇ? ನಮ್ಮ ಶಾಲೆಗಳಲ್ಲಿ ಅದಕ್ಕೆ ಸಹಾಯಕವಾದ ಚಿತ್ರಶಿಕ್ಷಣವಿದೆಯೇ? ನಮ್ಮ ಕಸುಬುದಾರರ ಮುಂದೆ, ಅವರ ಕಸುಬಿಗೊಂದು ದೇಶೀಯ ಸ್ಫೂರ್ತಿ ಬರುವಂತೆ ವ್ಯವಸ್ಥಿತ ಮಾರ್ಗದರ್ಶನ ವಿದೆಯೇ? ನಮ್ಮ ಸಿವಿಲ್ ಎಂಜನಿಯರುಗಳಿಗೆ—ವಾಸ್ತುಶೈಲಿಯ ಸೌಂದರ್ಯಶಾಸ್ತ್ರದ ಅರಿವನ್ನಾದರೂ ಮಾಡಿಕೊಡುತ್ತೇವೆಯೇ?

ನಮ್ಮ ಶಾಲೆಗಳು, ವಿಶ್ವವಿದ್ಯಾಲಯಗಳು ಸಾರ್ವಜನಿಕ ಮಂದಿರಗಳು, ಸ್ಮಾರಕಗಳು ಪ್ರದರ್ಶನಗಳಿಂದಲೂ ಬಳಕೆಯಿಂದಲೂ ಪ್ರಕಟನೆಗಳ ಮೂಲಕವೂ— ದೇಶೀಯ ಅಲಂಕಾರಿಕೆಗೆ ಇರುವ ಚೆಲುವನ್ನು ಜನಗಳ ಕಣ್ಮುಂದೆ ಇರಿಸಬೇಕು. ಅಂತಹ ಕಸಬನ್ನು ಇರಿಸಿಕೊಂಡವರಿಗೆ ಪ್ರೋತ್ಸಾಹ ಕೊಡಲು ಪ್ರಚಾರ ಮಾಡಬೇಕು. (ಜನತೆಯ ಅಭಿರುಚಿ ಬೆಳೆಯಿಸುವುದೇನೇ ಅತಿ ಮಹತ್ವದ ಪ್ರಚಾರವೆಂದು ತಿಳಿಯಬೇಕು.)

ಈ ವಿವಿಧ ಪ್ರಯತ್ನಗಳನ್ನು ಯುರೋಪಿನ ದೇಶಗಳಲ್ಲಿ ನಾವು ಕಾಣಬಹುದಾಗಿದೆ. ಅವರ ಕಪ್, ಬಸಿ, ಕೆಟಲ್ ಮೊದಲಾದುವು, ಅವರು ಬಳಸುವ ಹಾಸುಗಂಬಳಿ, ಉಡುಗೆಯ ಚಿಂಡ್ಸ—ಇವೆಲ್ಲ ಸುತ್ತಣ ಆವರಣದಿಂದ ಚೇತನ ಪಡೆದುವು. ಅವು ಕೇವಲ ಹಳೆಯವುಗಳ ಅನುಕರಣೆಗಳೂ ಅಲ್ಲ. ಆದರೆ ನಾಡಿನ ನೀರು ಗಾಳಿಯನ್ನುಂಡು ಬೆಳೆದ ಗಿಡಗಳಂತೆ ತಮ್ಮ ಹಿನ್ನೆಲೆಯ ಶಿಲ್ಪ, ವಾಸ್ತು, ಚಿತ್ರ, ಅಲಂಕಾರಿಕೆ ಮೊದಲಾದುವುಗಳಿಂದ ಪ್ರೇರಣೆಗೊಂಡು ಬೆಳೆದುವು. ಗ್ರೀಕ್, ಗಾಥಿಕ್, ನಾರ್ಮನ್ ವಾಸ್ತುಶೈಲಿಗಳನ್ನು ಇಂದೂ ಅವರ ಸಾರ್ವಜನಿಕ ಕಟ್ಟಡಗಳಲ್ಲಿ ಕಾಣಿಸಬಹುದಾಗಿದೆ. ಅವರ ದೇಶೀಯತೆ ಬಹುಮಂದಿ ವಾಸಿಸುವ ಮನೆ-ಮಠಗಳಲ್ಲಿ ಕಾಣಿಸುತ್ತದೆ.



ಈಗ ನಮ್ಮ ದೃಷ್ಟಿಯನ್ನು ನಮ್ಮ ಸಂಗೀತದ ಕಡೆಗೆ ಹರಿಯಿಸಿ ನೋಡುವ. ನಮ್ಮ ನಾಡಿನಲ್ಲಿ ನೂರಾರು ಬಗೆಯ ದೇಶೀಯ ಹಾಡುಗಳಿವೆ. ಅನೇಕ ಸುಂದರ ಗೀತರೂಪಗಳಿವೆ. ಅವನ್ನು ತಾಳ್ಮೆಯಿಂದ ಕಲೆಹಾಕುವ, ಅಭ್ಯಸಿಸುವ ಪ್ರಯತ್ನ ನಾವು ಮಾಡುತ್ತಿದ್ದೇವೆಯೇ? ಅವುಗಳ ಬೆಳವಣಿಗೆಗೆ ಯಾವ ಪ್ರೋತ್ಸಾಹವಿದೆ? ಅವುಗಳಿಂದಲೇ ಹುಟ್ಟಿ, ಸ್ವತಂತ್ರ ಬೆಳವಣಿಗೆ, ಪುಷ್ಟಿಯನ್ನು ಪಡೆದ— ಮಾರ್ಗಪದ್ಧತಿಯ ಸಂಗೀತದ ಶಾಸ್ತ್ರಸಂಪತ್ತು ವಿಶಾಲವಾಗಿದೆ; ಅದರ ಸೊಗಸೂ ಕಡಿಮೆಯಿಲ್ಲ. ಅವುಗಳ ಪರಂಪರೆಯನ್ನು ಕಾಯ್ದುಕೊಂಡು ಬಂದವರು ಅನೇಕರಿದ್ದಾರೆ. ಇವೆಲ್ಲ ಇರುವಾಗಲೇ—ನಮ್ಮ ದೇಶೀಯ ಸಂಗೀತದ ಅಣಕವೆಂಬಂತೆ ಕಾಣಿಸುವ ಹಿಂದೀ ಚಲಚ್ಚಿತ್ರ ಗೀತ— ಇಷ್ಟು ಬಿರುಸಿನಿಂದ, ಕ್ರಾಂತಿಯಿಂದ ಪ್ರಚಾರಗೊಳ್ಳಲು ಏನು ಕಾರಣ? ನಮ್ಮ ದೇಶೀಯ ಅಭಿರುಚಿಯನ್ನು ಕೆಡಿಸುವುದರಲ್ಲಿ ಅವು ಸಾಧಿಸಿದ ಯಶಸ್ಸಿಗೆ ಏನು ಕಾರಣ? ಒಮ್ಮೆಗೆ ನಮ್ಮ ಸಂಗೀತದಲ್ಲಿ ವಿದೇಶೀಯ ವಾದ್ಯಗಳ ಕಲಸುಮೇಲೋಗರದೊಂದಿಗೆ— ಜಾಜ್, ಮೊದಲಾದ ಪಾಶ್ಚಾತ್ಯ ಶೈಲಿಗಳು ಪ್ರವಾಹವಾಗಿ ಬರಲು, ಬಂದು ಜನರನ್ನು ಮೆಚ್ಚಿಸಿ ದ್ರವ್ಯ ಸುಲಿಯಲು ಹೇಗೆ ಸಾಧ್ಯವಾಯಿತು? ನಾವೇನೆ ದೇಶೀಯವಾದ ಗೀತ ಸಂಪ್ರದಾಯವನ್ನು ಪಾಮರಗೀತವೆಂದು ಮೂದಲಿಸಿ, ಅದರ ಕಾಲಾನುಗುಣದ ಬೆಳವಣಿಗೆಗೆ ನೆರವಾಗದವರು. ಇನ್ನು 'ಮಾರ್ಗ' ಸಂಗೀತವನ್ನು ಭದ್ರಮುಷ್ಟಿಯಲ್ಲಿರಿಸಿಕೊಂಡು "ಶಾಸ್ತ್ರಕ್ಕಾಗಿ ಶಾಸ್ತ್ರ"ವೆಂಬಂತೆ ಬೆಳಸಿ, ನಿತ್ಯಜೀವನಕ್ಕೂ ಸಂಗೀತಕ್ಕೂ ಇರುವ ಮೇಳವನ್ನು ಮರೆತು, ಬೆಳೆಯಿಸಿಕೊಂಡು ಬಂದವರು. ಹಲವರ ಗೀತವಾದ ದೇಶೀಯ ಗೀತ— ಅನಾಗರಿಕವೆನಿಸಿ ಕುಗ್ಗಿತು. ಕೆಲವರ ಮುಷ್ಟಿಯ ಬದುಕಾಗಿ ಬಿಟ್ಟ 'ಮಾರ್ಗ' ಗೀತ ಜನಸಾಮಾನ್ಯರ ಗುರುತಿಲ್ಲದೆ ಜೀವಿಸಿತು. ಇದರ ಒಟ್ಟು ಪರಿಣಾಮ— ಇವೆರಡೂ, ಅನ್ಯದೇಶೀಯ ಶೈಲಿಗಳು ನಮ್ಮೆದುರು ಬಂದು ಮೆರೆಯುವಾಗ, ತಂತಮ್ಮ ಭಕ್ತರನ್ನು ಕಳೆದುಕೊಳ್ಳುತ್ತಿರುವುದು.

ನಮ್ಮ ಗೀತನಿರ್ಮಾಪಕರು — ನವೀನತೆಯಿಂದ ಗೆದ್ದರು. ನವೀನವಾದ, ಅರ್ಥವಿಲ್ಲದ, ನಮ್ಮದರೊಡನೆ ಹೊಂದದ ಗೀತಾಲಾಪದ ತುಣುಕು, ಚೂರುಗಳನ್ನು ಇತ್ತು, ನಮ್ಮದರೊಡನೆ ಬೆರಸಿ—ವಿವಿಧ ವಾದ್ಯಗಳ ಕೋಲಾಹಲದೊಡನೆ ಬೆರೆಯಿಸಿ ಕೊಡುವಾಗ—ಅವುಗಳ ಅರ್ಥಕ್ಕೆ ಮನಸೋಲದಿದ್ದರೂ — ಅರ್ಭಟೆಗೆ, ವೈಖರಿಗೆ, ನಾವೀನ್ಯಕ್ಕೆ ಮೋಹಗೊಂಡೆವು. ಅವರ ವಿವಿಧ ವಾದ್ಯೋಪಕರಣಗಳೂ ಸಂಗೀತದ ಈ ದಾಳಿಗೆ ನೆರವಾದುವು. ಈ ದಾಳಿ ಎಷ್ಟು "ವಿಚಿತ್ರ"ವಾಗಿರುತ್ತದೊ ಅಂಥ ಮೆಚ್ಚಿಗೆ.

ನಮ್ಮ ದೇಶೀಯ ಗೀತದ ಸೊಗವೆಲ್ಲಿದೆ, ಶಕ್ತಿಯೆಲ್ಲಿದೆ ಎಂದು ಅಭ್ಯಸಿಸಿ ಸಾರುವ ಕೆಲಸವನ್ನು ನಮ್ಮ ಪಂಡಿತರು ಮಾಡುತ್ತಿದ್ದಾರೆಯೇ? ವಿಶ್ವವಿದ್ಯಾಲಯಗಳು ಮಾಡುತ್ತಿವೆಯೇ? ಮೊನ್ನೆಮೊನ್ನೆ ನಮ್ಮ ರಾಷ್ಟ್ರಾಧ್ಯಕ್ಷರು ಕೆಲವರು ಗಾಯನ ವಿದ್ವಾಂಸರನ್ನು ಗೌರವಿಸಿದರೆಂದು ಕೇಳಿದೆವು. ಇಷ್ಟರಿಂದ—ಸರಕಾರದ, ರಾಷ್ಟ್ರನೇತೃರ ಹೊಣೆ ಮುಗಿಯಿತೇ! ಒಬ್ಬ ಪಂಡಿತನ ಘನತೆಯನ್ನು ನಾವು ಒಪ್ಪುವುದೇ ಆದಲ್ಲಿ, ಅವನ ಬದುಕಿನೊಂದಿಗೆ ಮರೆಯಾಗುವ ಸ್ಫೂರ್ತಿ, ಪ್ರತಿಭೆ, ಗೀತಶೈಲಿಗಳನ್ನು, ರಾಷ್ಟ್ರಕ್ಕಾಗಿ ಕಾದಿರಿಸುವ ಹೊಣೆ ಯಾರದು? ಇವತ್ತು ವಿಜ್ಞಾನ ಆ ಕೆಲಸವನ್ನು ಸುಲಭವಾಗಿ ಮಾಡಿದೆಯಲ್ಲ....ನಮ್ಮ ಮುಪ್ಪಿನ ವಿದ್ವಾಂಸರ ಉತ್ತಮ ಕೃತಿಗಳನ್ನು ಸಂಗ್ರಹಿಸಿ ಇರಿಸಲಾರದವರು—ಶಾಲು, ಬಿರುದು, ಗೋರಿ ಕಟ್ಟಿದರೇನು ಬಿಟ್ಟರೇನು? ಕಲೆಯಂತೂ ಉಳಿಯುವುದಿಲ್ಲ. ಅಂಥ ವಿಚಾರ ಬಂದಾಗಲೆಲ್ಲ-ಸರಕಾರಕ್ಕೆ ಕಾಶ್ಮೀರ, ನಿರಾಶ್ರಿತ ಸಮಸ್ಯೆ ಮೊದಲಾದವೇ ಕೇವಲ ಗಮನಾರ್ಹವಾದ ವಿಷಯಗಳೆನಿಸುತ್ತವೆ. ಸಂಸ್ಕೃತಿ, ಸಾಹಿತ್ಯ, ಶಿಲ್ಪ... ತೀರ, ತೀರ ಅಮುಖ್ಯ ವಿಷಯಗಳು.

ಮೇಲಿನ ವಿಷಯಗಳಿಗಿಂತ ಗಾಢವಾಗಿ— ನಮ್ಮ ನಂಬಿಕೆ, ಮತಾಚಾರ, ನಡವಳಿಗಳಲ್ಲಿ ಸಂಸ್ಕೃತಿ ಹುದುಗಿದೆ. ಅದು ಎಷ್ಟು, ಹೇಗೆ ಎಂದು ನಮಗೇನೆ ತಿಳಿದಿರುವುದಿಲ್ಲ. ನಮ್ಮ ಕಾಳಿದಾಸ, ಬಾಣ, ಭಾಸರು, ಉಪನಿಷದ್‌ಯುಗದ ಋಷಿಗಳು, ಬುದ್ಧಮಹಾವೀರರು—ಬರಿಯ ನಾಮಮಾತ್ರರಾಗುತ್ತಾರೆ. ಅವರ ನಡತೆ, ಮನದ ವಿಸ್ತೃತಿ, ಕ್ರಿಯೆಗಳ ಉನ್ನತಿ ಇವೇ ಮೊದಲಾದುವನ್ನು ಜನಕ್ಕೆ ತಿಳಿಸಿ ಹೇಳುವ—ಗ್ರಂಥಗಳು,

ತರ್ಕಸರಣಿಗಳು, ವಿಮರ್ಶೆಗಳು ನಮ್ಮಲ್ಲಿ ಸಾಕಷ್ಟು ದೇಶೀಯ ಭಾಷೆಗಳಲ್ಲಿ ಉಂಟಾಗಿವೆಯೇ? ಕಾಳಿದಾಸ ಮಹಾಕವಿ, ಅವನೊಂದಿಗೆ ಶೇಕ್‌ಸ್ಪಿಯರ್ ಮಹಾಕವಿಯನ್ನು ಹೋಲಿಸೋಣವೇ? ಶೇಕ್‌ಸ್ಪಿಯರ್‌ನ ನಾಟಕಗಳು ಇಂಗ್ಲೆಂಡಿನಲ್ಲಿ ಸಾವಿರಾರು ಜನಗಳ ಮನ ಸೆಳೆಯುವ ಕೆಲಸವನ್ನು ಇಂದಿಗೂ ಮಾಡುತ್ತಿವೆ. ಕಾಳಿದಾಸ ತನ್ನ ಕೀರ್ತಿಗೆ — ಅಪಕ್ವರಾದ ಸಂಸ್ಕೃತಶಾಲಾ ವಿದ್ಯಾರ್ಥಿಗಳನ್ನು, ಶಾಲಾವರ್ಧಂತಿ ದಿನವನ್ನು ಕಾದು ಕುಳಿತಿರಬೇಕಾಗಿದೆ. ಆದರೂ ನಮಗೊಬ್ಬ ಕಾಳಿದಾಸನಿದ್ದಾನೆ ಎನ್ನುತ್ತೇವೆ, ಗಂಟಲುಬಿರಿದು. ಅವನಿಗೇನೆ ಈ ಉತ್ತರಸಂತತಿಯನ್ನು ಕಂಡರೆ ಹರ್ಷವಾದೀತೇ?

ನಮ್ಮ ವಿಶ್ವವಿದ್ಯಾಲಯಗಳು ಇಂದು ಕೇವಲ ಡಿಗ್ರಿ ಹಂಚುವ ಮನೆಗಳಾಗಿವೆ. ಅವುಗಳಲ್ಲಿ ನಾಳೆ ಕೆಲಸ ದೊರಕಿಸಿ ಕೊಡಬಲ್ಲ ಡಿಗ್ರಿಗಳಿಗೆ ಇರುವ ಗೌರವ ಸಾಂಸ್ಕೃತಿಕ ವಿಷಯಗಳಿಗಿಲ್ಲ. ನಾವು ವಿಶ್ವವಿದ್ಯಾಲಯಗಳ ಮಾದರಿಯನ್ನು ಪಾಶ್ಚಾತ್ಯರಿಂದ ಕಲಿತುದೇನೋ ನಿಜ. ಆದರೆ ಅವರು ಸಾಂಸ್ಕೃತಿಕ ವಿಷಯಗಳ ಬೋಧನೆಗಾಗಿ ಮಾಡಿರುವ ಏರ್ಪಾಟು, ನಡೆಸುವ ಸಂಶೋಧನೆ, ಒದಗಿಸಿರುವ ಗ್ರಂಥ, ನೇಮಿಸುವ ಪ್ರಾಧ್ಯಾಪಕ ವರ್ಗ-ಇವುಗಳನ್ನು ನಾವು ಅನುಸರಿಸುತಿರುವುದಿಲ್ಲ. ಜನಜೀವನದ ಸಂಸ್ಕೃತಿ, ಧರ್ಮ, ತತ್ವಜ್ಞಾನ, ಇವೇ ಮೊದಲಾದುವಕ್ಕೆ ಸಂಬಂಧಿಸುವ ಸಾಮಾಜಿಕ ಶಾಸ್ತ್ರಾಧ್ಯಯನ ಭಾಗಗಳು ನಮ್ಮಲ್ಲಿ ಹೆಚ್ಚಾಗಿ ಕಾಣಿಸುವುದಿಲ್ಲ. "ಜ್ಞಾನಕ್ಕಾಗಿ ಜ್ಞಾನ" ಎಂದು ಬರುವ ಜ್ಞಾನಭಿಕ್ಷುಗಳಿಗೆ-ನಾವು ತೆರೆದಿರಿಸಿದ ದಾರಿಗಳು ತೀರ ಕಡಿಮೆ.

ಈ ನಮ್ಮ ವಿಶ್ವವಿದ್ಯಾಲಯಗಳಂತೆಯೇ ಸಾಂಸ್ಕೃತಿಕ ವಿಚಾರದಲ್ಲಿ ನಮ್ಮ ಮ್ಯುಸಿಯಮುಗಳು ಮಾಡಿರುವ ಮತ್ತು ಮಾಡುತ್ತಿರುವ ಕೆಲಸಗಳು ಕಡಿಮೆ. ಪಾಶ್ಚಾತ್ಯ ಮ್ಯುಸಿಯಮುಗಳಲ್ಲಿ ಪ್ರಕಟಸಿರುವ ಗ್ರಂಥಗಳು, ನಡೆಸಿರುವ ಸಂಶೋಧನೆಗಳು, ಅಗತೆಗಳು, ಸಾರ್ವಜನಿಕರ ತಿಳಿವನ್ನು ಹೆಚ್ಚಿಸಲು, ಅಭಿರುಚಿ ಬೆಳೆಸಲು ಪ್ರಕಟಸುತ್ತಿರುವ ಸಾವಿರಾರು ಅಗ್ಗದ ಚಿತ್ರಗಳು ನಮ್ಮಲ್ಲಿ ಕಂಡು ಬರುತ್ತಿವೆಯೇ? ಇಷ್ಟೊಂದು ದೊಡ್ಡ ಸಾಂಸ್ಕೃತಿಕ ಸಂಪತ್ತಿದ್ದೂ ನಮ್ಮ ಮ್ಯುಸಿಯಮುಗಳು ಚೈತನ್ಯಶೂನ್ಯ ಸಂಗ್ರಹಾಲಯಗಳಾಗಿರಬೇಕೇಕೆ? ಡಾ॥ ಆನಂದ ಕುಮಾರ ಸ್ವಾಮಿ, ಇ. ಬಿ. ಹೆವೆಲ್‌ರಂಥ ಮಹಾನುಭಾವರು ಒಬ್ಬೊಬ್ಬರಾಗಿ ನಡೆಸಿದ ಪ್ರಚಾರವನ್ನು ನಮ್ಮ ಒಟ್ಟು ದೇಶ, ಸರಕಾರಗಳು ನಡೆಯಿಸಲಾರವೇ?



ಇಂತಹ ಪರಿಸ್ಥಿತಿಯಿಂದಾಗಿ ಜನಸಾಮಾನ್ಯರು, ಅನ್ಯ ದೇಶಗಳಿಂದ ಎಂತಹ 'ಕಚರಾ' ಬಂದರೂ ಅದರ ನಾವೀನ್ಯಕ್ಕೆ ಮನಸೋತು ಅದನ್ನು ಅನುಸರಿಸುತ್ತಾರೆ. ಹೊರಗಿನ ಆದೇಶಗಳು ನಮ್ಮ ಸಂಸ್ಕೃತಿಯಲ್ಲಿ ವಿಚಿತ್ರವಾಗಿ ಬೆರೆತುಕೊಂಡು, ನಮ್ಮದರ ಆತ್ಮನನ್ನು ನಾವು ಗುರುತಿಸಲಾರದಂತಹ ಹೀನ ಪರಿಸ್ಥಿತಿಯೂ ಉಂಟಾಗಬಹುದು. ಕೆಲವೊಮ್ಮೆ ವಿದೇಶೀಯ ಸೆಳೆತಗಳು ದೇಶೀಯ ವಸ್ತುಗಳ ನಿರ್ಮೂಲನಕ್ಕೆ ಕಾರಣವಾದಾವು. ರಾಷ್ಟ್ರೀಯ ಪುನರುಜ್ಜೀವನವೆಂಬುದನ್ನು ಬರಿಯ ರೂಪಾಯಿ ಆಣೆ ಪೈಗಳ ಸಂಸ್ಕಾರ ಎಂದು ತಿಳಿದುಕೊಂಡರೆ ನಮ್ಮ ಸ್ಥಿತಿ ಉತ್ತಮಗೊಳ್ಳಲಾರದು.

ನಿನ್ನಿನ ಹಿರಿತನ, ನಿನ್ನಿನ ಸಂಸ್ಕೃತಿಗಳಿಗೆ ಮಾತಿನ ಮನ್ನಣೆಯಾದರೂ ಸಲ್ಲುತ್ತಿದೆ, ಇಂದಿನ ಸಾಹಿತ್ಯಕಲೆಗಳಿಗೆ ಆ ಮನ್ನಣೆಯೂ ದೊರೆಯುತ್ತಲಿಲ್ಲ. ದೇಶವು ಇಂದು ತನ್ನ ಕಲಾವಿದರಿಗೆ, ಸಾಹಿತಿಗಳಿಗೆ—ಬದುಕಲು ಹಿತವಾದ ಆವರಣವನ್ನು ಕಲ್ಪಿಸುವುದು ಆವಶ್ಯಕ ಎಂದೇ ತಿಳಿದಿಲ್ಲ. ನಮ್ಮ ಮುಖಂಡರು, ತಮ್ಮ ಸುತ್ತ "ವಶೀಲಿ ಹಚ್ಚುವ" ನಾಲ್ಕು ತೋರಿಕೆಯ ಕಲಾವಿದರನ್ನು ಪರದೇಶಿ ರಾಯಭಾರಿಗಳ ಮುಂದೆ ನಲಿಸಿದರೆ— ಕಲಾಪ್ರೋತ್ಸಾಹವಾಯಿತು ಎಂದು ತಿಳಿಯುತ್ತಾರೆ.

ಈ ಮಾನದಿಂದ ಯುರೋಪಿನ ರಾಷ್ಟ್ರಗಳು, ಜನಗಳು, ನಾಯಕರು, ಸಂಘಸಂಸ್ಥೆಗಳು ಹೆಚ್ಚಿನ ಕೆಲಸವನ್ನು ಮಾಡಿರುತ್ತಾರೆ. ಅವರು ಸಾಂಸ್ಕೃತಿಕ ಸಂಶೋಧನೆಗಳಿಗಾಗಿ ನೀಡುತ್ತಿರುವ ನೆರವೂ ಬಹಳ. ತಮ್ಮ ಸಾಹಿತಿ, ಕಲಾವಿದ, ವಿದ್ವಾಂಸರುಗಳನ್ನು, ಸಂಶೋಧಕರನ್ನು- ನಾಡಿನ ಜೀವಾಳವೆಂಬ ಗೌರವದಿಂದ ನೋಡುತ್ತಾರೆ. ಈ ವಿಚಾರದಲ್ಲಿ ಚಿಕ್ಕ ದೇಶವಾದ ನಾರ್ವೆಯೊಂದೇ (ಜನಸಂಖ್ಯೆ ೩,೫೦,೦೦೦) ತೋರಿದ ವಿವೇಕವನ್ನು ಇಲ್ಲಿ ಬಣ್ಣಿಸುತ್ತೇನೆ. ಅವರು ಸ್ಥಾಪಿಸಿದ ಸಾಂಸ್ಕೃತಿಕ ಮ್ಯುಸಿಯಂ ಅವರ ನಗರಭವನಗಳಲ್ಲಿದೆ. ಇತ್ತೀಚೆಗೆ ಅಳಿದು ಹೋದ ಒಬ್ಬ ಶಿಲ್ಪಿಗಾಗಿ ತೋರಿದ ಆದರ, ಕಲ್ಪಿಸಿದ ಅನುಕೂಲತೆಗಳು ನನ್ನನ್ನು ಬೆರಗುಗೊಳಿಸಿದುವು. ಆತನ ಹೆಸರು ಗಸ್ಟಾವ್ ವೀಗ್‌ಲೆಂಡ್- ಎಂದು. ಹತ್ತು ವರ್ಷಗಳ ಹಿಂದೆ, ತನ್ನ ೭೩ನೆಯ ವಯಸ್ಸಿನಲ್ಲಿ ಆತ ತೀರಿಕೊಂಡ. ಇಂದು ಅವನ ಕೃತಿಗಳನ್ನು ನೋಡಲು ನಾವು ನಾರ್ವೆಯ ರಾಜಧಾನಿ ಓಸ್ಲೋವಿಗೇ ಬರಬೇಕು. ಅವನ ಹೆಸರಿನಲ್ಲಿ 'ವೀಗ್‌ಲೆಂಡ್ ಪಾರ್ಕ' ಎಂಬೊಂದು ವಿಶಾಲ ಉದ್ಯಾನ ರಚಿಸಿದ್ದಾರೆ. ನಮ್ಮ ದೇಶದಲ್ಲೂ ರಸ್ತೆಗಳಿಗೂ ಉದ್ಯಾನಗಳಿಗೂ ಮಡಿದವರ ಹೆಸರನ್ನೇ ಹಾಕಿ, ಅವರದೊಂದು ಗೊಂಬೆ ನಿಲ್ಲಿಸುವುದುಂಟು. ಇದು ಹಾಗಲ್ಲ. ಅಂಥ ಅಗ್ಗದ ಅನುಕಂಪಪ್ರದರ್ಶನ ಇದಲ್ಲ. ಈ ಉದ್ಯಾನವು ವೀಗ್‌ಲೆಂಡ್‌ನ ಕೃತಿಗಳಿಗೆ ಮೀಸಲಾಗಿದೆ. ಅವನೇ ನಿರ್ಮಿಸಿದ ೪೦೦-೫೦೦ ಭವ್ಯ ಶಿಲ್ಪಗಳನ್ನು ಅಲ್ಲಿ ಯೋಗ್ಯ ರೀತಿಯಿಂದ ನಿಲ್ಲಿಸಿದ್ದಾರೆ.

ಆತ-ಮಾನವನ ಜೀವನಾವಸ್ಥೆಯ ವಿವಿಧ ಹೋರಾಟ, ಪ್ರವೃತ್ತಿಗಳನ್ನು ವಯಸ್ಸನ್ನು ಚಲಿಸುವ ಭಾವರಸಗಳನ್ನು, ಚಿತ್ರಿಸಲು ಶಿಲ್ಪವನ್ನು ಸಾಧನವಾಗಿ ಮಾಡಿದ. ಅವನು ತನ್ನ ಅಸಂಖ್ಯಾತ ಶಿಲೆಯ, ಕಂಚಿನ ಪ್ರತಿಮೆಗಳಲ್ಲಿ ತೋರಿಸಿದ್ದಾನೆ. ತನ್ನ ಸುತ್ತಲಿನ ಜನಗಳ ಮನಸ್ಸನ್ನು ಕಲಕಿದ ರಾಗ, ದ್ವೇಷ, ಸುಖ, ದುಃಖ, ಶಾಂತಿ, ವಿವೇಚನೆಗಳೆಲ್ಲವೂ ಅವನ ಒಂದೊಂದು ಪ್ರತಿಮೆಯಲ್ಲಿ ಮೂಡಿಬಂದಿವೆ. ಅದೆಲ್ಲ ಅವನೊಬ್ಬನ ಜೀವಮಾನದ ಕೆಲಸ. ಒಂದೇ ಕಡೆಯಲ್ಲಿ ಅವನ್ನು ನಿಲ್ಲಿಸಲು ಹೇಗೆ ಸಾಧ್ಯವಾಯಿತು? ನಾರ್ವೆಯ ನಾಗರಿಕರಿಗೂ ಅರಸೂ ಅದಕ್ಕೆ ಬೇಕಾದ ಆರ್ಥಿಕ ತ್ಯಾಗ, ಸಹಾಯ, ಆವರಣ ಒದಗಿಸಿಕೊಟ್ಟುದರಿಂದಾಯಿತು. ಇದನ್ನು ರೂಪಾಯಿಗಳಲ್ಲೆಣಿಸಿದರೆ 'ಕೋಟಿ'ಯೂ ಆಗಬಹುದು.

ಇಂದು ವೀಗಲೆಂಡ್ ಉದ್ಯಾನ ನಾರ್ವೆಯ ಜನಕ್ಕೆ ಒಂದು ಹೆಮ್ಮೆಯ ಸ್ಥಳವಾಗಿದೆ. ವೀಗ್‌ಲ್ಯಾಂಡ್ ನಾರ್ವೆಯವನು, ತಮ್ಮವನು ಎಂದು ಅವರು ನಾರ್ವೆಗೆ ಬರುವ ಪ್ರತಿಯೊಬ್ಬನಿಗೂ ತೋರಿಸುತ್ತಾರೆ. ಅವರು ಆ ಶಿಲ್ಪಿಯನ್ನು ನೋಡಿ ಮೆಚ್ಚಿದುದಕ್ಕೆ ಸಮನಾದ ರೀತಿಯಲ್ಲೇ ಸಂಭಾವಿಸಿದರು. ಅವನ ಬದುಕಿನ ಕಾಣಿಕೆಯನ್ನು ನಾಳಿನ ನಾರ್ವೆಯ ಮಕ್ಕಳಿಗೂ ದೊರಕಿಸಿ ಕೊಟ್ಟರು.

ನಮ್ಮ ನಾಡಿನಲ್ಲಿ ಮೆರೆದ ಬುದ್ಧ, ಕಾಳಿದಾಸ, ಸೂರದಾಸ, ತ್ಯಾಗರಾಜರುಗಳಿಗೆ- ನಾವು ಈ ತೆರನ ಕಾಣಿಕೆ ಸಲ್ಲಿಸಬಲ್ಲೆವೇ? ಅದರಂತೆ ನಮ್ಮ ಸಂಸ್ಕೃತಿಯ ವಿವಿಧ ಅಂಗಗಳಿಗೆ ಮೆರುಗು ಕೊಟ್ಟವರನ್ನು ಜನ ತಿಳಿಯಲು ತಕ್ಕ ಆವರಣ ಕಲ್ಪಿಸುತ್ತಿದ್ದೇವೆಯೇ? ಹಾಗಿಲ್ಲವಾದರೆ 'ನಮ್ಮ ಸಂಸ್ಕೃತಿ' ಯೆಂಬ ಜಂಬ- ಮಾತಿನ ತೂಕಕ್ಕೆ ಬಾರದ ಸದ್ದು.

ಕಾಳಿದಾಸನ ಹೆಸರಿನ ಜಪಮಾಡಿದಾಕ್ಷಣ ಅವನ ಕಾವ್ಯದ ಸೊಗ ಹೇಗೆ ಕಾಣಿಸದೋ, 'ಸಂಸ್ಕೃತಿ, ಸಂಸ್ಕೃತಿ'- ಎಂದು ಒದರಿದುದರಿಂದ ನಾವು ಸಂಸ್ಕೃತರಾಗಲಾರೆವು. ಅದನ್ನರಿತು, ಅದಕ್ಕೆ ತಕ್ಕುದಾಗಿ ನಡೆದು, ನಮ್ಮ ಜೀವನದ ದಾರಿಗಳಲ್ಲಿ ಅದನ್ನು ನಡೆದು ತೋರಿಸಿದರೆ ಮಾತ್ರ- ನಮ್ಮ ಮಾತಿಗೆ ಹುರುಳು.

---

ವಿನಯವು ಶ್ರೇಷ್ಠ. ಪೃಥು ಮಹಾರಾಜನೂ ಸ್ವಾಯಂಭುವ ಮನುವೂ ವಿನಯಗುಣದಿಂದ ರಾಜ್ಯವನ್ನು ಹೊಂದಿದರು. ವಿನಯದಿಂದ ಕುಬೇರನು ಧನಸಂಪತ್ತನ್ನೂ ವಿಶ್ವಾಮಿತ್ರನು ಬ್ರಾಹ್ಮಣತ್ವವನ್ನೂ ಸಂಪಾದಿಸಿದರು.

— ಮನು




ಲೇಖಕರು : **ಸರದಾರ ಕೆ. ಎಂ. ಪಣಿಕ್ಕರ**

ಹಿಮಾಲಯ ಪರ್ವತಗಳು ಭಾರತವನ್ನು ರಕ್ಷಿಸಲು ಸಮರ್ಥವಾಗಿಲ್ಲ ಎಂಬ ಭ್ರಮೆಯು ವಿದೇಶೀ ಇತಿಹಾಸಕಾರರಿಂದ ಉಂಟುಮಾಡಲ್ಪಟ್ಟಿದೆ. ಆದರೆ ಇದು ನಿರಾಧಾರವಾಗಿದೆ. ಭಾರತದ ಜೀವನ, ಸಂಸ್ಕೃತಿಗಳನ್ನು ಹಿಮಾಲಯವು ಸಂತತವಾಗಿ ರಕ್ಷಿಸಿದೆ. ಆದರೆ ಇಂದಿನ ಬದಲಾದ ಯುದ್ಧ ತಂತ್ರದ ಪರಿಸ್ಥಿತಿಯಲ್ಲಿ ನಮ್ಮನ್ನು ಅದು ರಕ್ಷಿಸಬಹುದೆ? ರಶಿಯದ ಬಲ ಬೆಳೆದುದರಿಂದ, ಚೀನಿ ಕಮ್ಯುನಿಸ್ಟರು ತಿಬೇಟದ ಮೇಲೆ ಪ್ರತ್ಯಕ್ಷ ಪ್ರಭುತ್ವ ಸ್ಥಾಪಿಸಿರುವುದರಿಂದ, ಈ ಪ್ರಶ್ನೆಗೆ ಇಂದು ತುಂಬ ಮಹತ್ವ ಬಂದಿದೆ. ಹಿಮಾಲಯವು ಇನ್ನಾದರೂ ನಮ್ಮನ್ನು ರಕ್ಷಿಸಬಲ್ಲದೆಂದು ಅಧಿಕಾರಸಂಪನ್ನರಾದ ಲೇಖಕರು ಪ್ರತಿಪಾದಿಸಿದ್ದಾರೆ.

---

ಹಿಮಾಲಯವು ಭಾರತದ ಇತಿಹಾಸದ ಮೇಲೆ ಪ್ರಭಾವ ಬೀರಿದಂತೆ ಬೇರಾವ ದೇಶದ ಇತಿಹಾಸದ ಮೇಲೂ ಯಾವ ಪರ್ವತಶ್ರೇಣಿಯೂ ಪ್ರಭಾವ ಬೀರಿಲ್ಲ. ಭಾರತದ ರಾಜಕೀಯ ಜೀವನದ ಮೇಲೆ ಮಾತ್ರವಲ್ಲ, ಹಿಂದುಗಳ ಧರ್ಮ, ಪುರಾಣ, ಕಲೆ ಮತ್ತು ಸಾಹಿತ್ಯ ಇವೆಲ್ಲವುಗಳ ಮೇಲೂ ಈ 'ನಗಾಧಿರಾಜ'ನ ಮುದ್ರೆ ಒತ್ತಿದೆ. ಹಿಂದುಗಳಿಗೆ ಹಿಮಾಲಯವು ನಿರಂತರ ಆಶ್ಚರ್ಯದ ತವರುಮನೆ, ಭಯಭಕ್ತಿಯ ಆಗರ. ದೂರದಿಂದಲೂ ಗೋಚರವಾಗುವ ಶಿಖರಗಳ ಹಿಮಾವೃತ ಗಾಂಭೀರ್ಯ ಮತ್ತು ಅವುಗಳ ದುರ್ಗಮತ್ವ, ಮಹಾ ಹಿಮನದಿಗಳ ರಹಸ್ಯ, ಅದರ ದರಿಕಂದರಗಳಿಂದ ಉದ್ಭವಿಸುವ ಪ್ರಚಂಡ ನದಿಗಳು ಇವೆಲ್ಲವೂ ಸೇರಿ ಹಿಮಾಲಯಕ್ಕೆ ಅದ್ವಿತೀಯವಾದ ಮಹಿಮೆಯನ್ನು ಕೊಟ್ಟಿವೆ. ಆದರಿಂದಲೇ ಆದಕ್ಕೆ "ದೇವತಾತ್ಮಾ" ಎಂಬ ಬಿರುದನ್ನು ಹಿಂದುಗಳು ಕೊಟ್ಟಿದ್ದಾರೆ.

ಹಿಂದುಗಳಿಗೆ ಹಿಮಾಲಯವು ದೇವತೆಗಳ ನೆಲೆವೀಡು; ಪರಶಿವನ ಧಾಮ. ಅದರ ಆ ತುದಿಯಿಂದ ಈ ತುದಿಯವರೆಗೆ ಪವಿತ್ರ ಕ್ಷೇತ್ರಗಳ ಒಂದು ಮಾಲೆಯೇ ಹೆಣೆದಿದೆ—ಅಮರನಾಥ, ಜ್ವಾಲಾಮುಖಿ, ಹರಿದ್ವಾರ, ಕೇದಾರನಾಥ, ಬದರೀನಾಥ, ಪಶುಪತಿನಾಥ—ಮತ್ತು ಇವೆಲ್ಲವುಗಳ ಮೇಲೆ ಪರಮೇಶ್ವರನ ದುರ್ಗಮ ನಿವಾಸವಾದ ಕೈಲಾಸ. ಅವನ ಹೃದಯೇಶ್ವರಿ ಪಾರ್ವತಿಯೇ ಆ ಪರ್ವತರಾಜನ ಮಗಳು. ಪಾವಿತ್ರ್ಯದಲ್ಲಿ ನಿಸ್ಸೀಮವೆನಿಸಿದ ಗಂಗಾ, ಸಿಂಧು, ಯಮುನಾ, ಸರಸ್ವತಿ, ಬ್ರಹ್ಮಪುತ್ರಗಳು ಹಿಮಾಲಯದ ಕೂಸುಗಳು.

ಹಿಂದೂ ಪುರಾಣಗಳಲ್ಲಿ ಹಿಮಾಲಯಗಳ ಸ್ಥಾನ ಹಿರಿದು; ಹಿಂದುಗಳ ಸಾಹಿತ್ಯದಲ್ಲಿ ಕಾಲಿದಾಸ ಮೊದಲಾಗಿ ಅನೇಕ ಕವಿಗಳು ಹಿಮಾಲಯವನ್ನು ಹಾಡಿದಷ್ಟೂ ತಣಿದಿಲ್ಲ; ಹಿಂದೂ ಋಷಿಮುನಿಗಳ ಆಶ್ರಮ ಹಿಮಾಲಯದಲ್ಲಿ. ಹಿಂದುಗಳು ಹೋದಲ್ಲೆಲ್ಲ ಹಿಮಾಲಯದ ಕನಸನ್ನು ಸಂಗಡ ಒಯ್ದಿದ್ದಾರೆ. ಜಾವಾ ದ್ವೀಪದ "ಸಮರದಹನ" ಕಾವ್ಯದಲ್ಲಿ ಹಿಮನಿಷ್ಯಂದಿ ಪರ್ವತಗಳ ವರ್ಣನೆ ಬಂದಿದೆ. ಸಿಯಾಮ (ತಾಯಿಲಂಡ)ದ ಅರಸನ ಪಟ್ಟಾಭಿಷೇಕ ಇಂದಿಗೂ ನಡೆಯುವ ದೇವಾಲಯದ ಹೆಸರು ಕೈಲಾಸಗಿರಿಯೆಂದೇ. ಅಷ್ಟೇ ಏಕೆ, ಹಿಂದುಗಳ ಜಗತ್ತಿನ ಕಲ್ಪನೆಗೇ ಹಿಮಾಲಯ ಉತ್ತರದ ಗಡಿ. "ಹಿಮವತ್‌ಸೇತುಪರ್ಯಂತಮ್" "ಆಸೇತು ಹಿಮಾಚಲ"—ಇದು ಪುಣ್ಯಭೂಮಿ, ಇದು ಕರ್ಮಭೂಮಿ— ಇದರಾಚೆ ಜಗತ್ತು ಇಲ್ಲವೆಂದಲ್ಲ; ಆದರೆ ಅದು ಇದ್ದರೂ ಅಷ್ಟೇ, ಬಿಟ್ಟರೂ ಅಷ್ಟೇ. ಕ್ರಿ. ಪೂ. ನಾಲ್ಕನೇ ಶತಕದಲ್ಲಿದ್ದ ಕೌಟಲ್ಯನು ಹಿಮಾಲಯವು ಭಾರತದಲ್ಲೇ ಸೇರಿದ್ದೆಂದು ಹೇಳಿದ್ದಾನೆ.

★

ಕಟ್ಟುನಿಟ್ಟಾಗಿ ಹೇಳುವುದಾದರೆ ಹಿಮಾಲಯವು ಸಿಂಧೂ ನದಿಯಿಂದ ಬ್ರಹ್ಮಪುತ್ರಾ ನದಿಯವರೆಗೆ ೧೫೦೦ ಮೈಲುದ್ದಕ್ಕೆ ಹಬ್ಬಿದೆ. ಆದರೆ ಅದರ ಪಶ್ಚಿಮ-ಪೂರ್ವ ಕೋಡುಗಳಾದ ಹಿಂದೂಕುಶ್ ಮತ್ತು ಲುಶಾಯಿ ಪರ್ವತಗಳನ್ನೂ ಹಿಮಾಲಯದಲ್ಲೇ ಸೇರಿಸಬೇಕಾಗುವುದು. ಹಿಮಾಲಯ ಶ್ರೇಣಿಗಳ ಅಗಲು ಸರಾಸರಿ ೧೫೦ ಮೈಲು. ಈ ಶ್ರೇಣಿಗಳಲ್ಲಿ ಮಧ್ಯದ್ದು ಸರಾಸರಿ ೨೦,೦೦೦ ಫೂಟು ಎತ್ತರಕ್ಕೆ ತಲೆ ನೆಗ್ಗಿದ ಸದಾ ಹಿಮನಿಗೂಢ ದುರ್ಗಮ ಶಿಖರಗಳ ಸಾಲು; ಅದರ ಈಚೆಗೆ ೧೨-೧೫ ಸಾವಿರ ಫೂಟವ, ಋಷ್ಯಾಶ್ರಮಗಳಿಗೆ ಯೋಗ್ಯವಾದ ಶ್ರೇಣಿ; ಅದರ ಕೆಳಗೆ ಇನ್ನೂ ತಗ್ಗಾದ ಹಲವು ತಂಪಾದ ಪರ್ವತ ರಾಜಿಗಳು ಮನುಷ್ಯವಸತಿಗೆ ಯೋಗ್ಯವಾದವು.

ಹಿಮಾಲಯದ ಸಂರಕ್ಷಣಾತ್ಮಕ ಪ್ರಯೋಜನವನ್ನು ವಿಚಾರಿಸುವಾಗ ನಾವು ಹಿಮಾಲಯದ ಉತ್ತರಕ್ಕೆ ತಿಬೇಟದ ಪೀಠಭೂಮಿ ಹಬ್ಬಿರುವುದನ್ನೂ ಗಮನಿಸಬೇಕು. ಸ್ವತಃ ೧೫ ಸಾವಿರ ಫೂಟ ಎತ್ತರವಾದ ಈ ಜಗತ್ತಿನ "ರಹಸ್ಯ ಭೂಮಿ"ಯ ಉತ್ತರಕ್ಕೆ ಕ್ಯೂನ್‌ಲನ್ ಪರ್ವತ ಶ್ರೇಣಿಗಳು ಮಂಗೋಲಿಯದಿಂದ ಅದನ್ನು ಬೇರ್ಪಡಿಸಿವೆ; ಪಶ್ಚಿಮದಲ್ಲಿ ಕಾರಾಕೋರಾನ್ ಪರ್ವತ ಶ್ರೇಣಿಗಳೂ ಪೂರ್ವಕ್ಕೆ ಬೇರೆ ಪರ್ವತಶ್ರೇಣಿಗಳೂ ಗೋಡೆ ಕಟ್ಟಿವೆ. ದಕ್ಷಿಣಕ್ಕೆ, ಭಾರತದ ಪಾರ್ಶ್ವದ ದುರ್ಗಮತ್ವಕ್ಕೆ ಹಿಮಾಲಯದ ಶಿಖರಗಳ ಎತ್ತರವೇ ಸಾಕ್ಷಿ. ಹಿಮಾಲಯದ ಕೆಲ ಶಿಖರಗಳ ಎತ್ತರ ಈ ಕೆಳಗಿನಂತಿದೆ:

| | | | |
|---|---|---|---|
| ೨೪,೦೦೦ ಫೂ. | ಮೀರಿದ | ಶಿಖರಗಳು | ೭೪ |
| ೨೫,೦೦೦ ,, | ,, | ,, | ೪೮ |
| ೨೬,೦೦೦ ,, | ,, | ,, | ೧೬ |
| ೨೭,೦೦೦ ,, | ,, | ,, | ೫ |
| ೨೮,೦೦೦ ,, | ,, | ,, | ೩ |

ಹೀಗೆ ತಿಬೇಟ ಸಹಿತ ಹಿಮಾಲಯವು ೫,೦೦,೦೦೦ ಚದುರ ಮೈಲು ವಿಸ್ತಾರದ ಮಹಾ ದುರ್ಗಮ ಆಯತವನ್ನು ಭಾರತದ ಉತ್ತರಕ್ಕೆ ನಿರ್ಮಿಸಿದೆ. ಮ್ಯಾಕಿನ್‌ಟಾಯರನು ಹೇಳಿದಂತೆ, "೨,೦೦೦ ಮೈಲುದ್ದದ ಈ ಪರ್ವತರಾಜಿಯ ಗಿರಿಕಂದರ ಪ್ರಸ್ಥಭೂಮಿಮಯ ಪ್ರದೇಶದಲ್ಲಿ ಪ್ರಕೃತಿಯು ಅತ್ಯಂತ ಘೋರ ಹಾಗೂ ಸೌಮ್ಯ ರೂಪಗಳಲ್ಲಿ, ಅರಣ್ಯದ ಜ್ವಾಲಾಮಯ ನರಕ

ಮತ್ತು ಶಿಖರಗಳ ಶೀತನರಕಗಳಲ್ಲಿ ಪ್ರಕಟವಾಗುತ್ತಾಳೆ...ಕೊರೆಯುವ ಹಿಮವಾಯು ಬೀಸುವ ಪ್ರಸ್ಥಭೂಮಿ, ೧,೦೦೦ ಫೂಟ ದಪ್ಪದ ಹಿಮಖಂಡಗಳು ಪರ್ವತಗಳನ್ನೇ ಕೊರೆದು ಮಾಡಿದ ಮಹಾಪ್ರಪಾತಗಳು, ಕಡಿದಾದ ಪರ್ವತಗಳ ತುತ್ತತುದಿಯಿಂದ ಧುಡುಮ್ಮೆಂದು ಘೋರ ಸಪ್ಪಳದಿಂದ ಕೆಳಗೆ ಉರುಳುವ ಹಿಮಗಡ್ಡೆಗಳು, ಹವಾಮಾನದಲ್ಲಾಗುವ ಊಹಾತೀತ ಪರಿವರ್ತನೆಗಳು...” ಇದು ಹಿಮಾಲಯ ಮತ್ತು ಟಿಬೇಟದ ಸ್ವರೂಪ. ಈ ಪ್ರದೇಶವನ್ನು ದಾಟಲು ಯತ್ನಿಸಿದ ಸ್ವೆನ್ ಹೆಡಿನನಿಗೆ ೮೧ ದಿನಗಳವರೆಗೆ ಮನುಷ್ಯ ಪ್ರಾಣಿಯ ದರ್ಶನವೇ ಆಗಲಿಲ್ಲವಂತೆ. ಸುತ್ತಲೂ ತೋಳಗಳ ಕೂಗು, ಯಾಕ ಮೃಗಗಳ ದಾಳಿ, ಹವೆ ಒಮ್ಮಿಂದೊಮ್ಮೆ ಅಸಹನೀಯ ಸೆಕೆಯಿಂದ ಅಸಹನೀಯ ಚಳಿಗೆ ಬದಲಾಗುವುದು, ಆಕಸ್ಮಿಕ ಬಿರುಗಾಳಿಗಳು, ಅಷ್ಟೇ ಆಕಸ್ಮಿಕ ಶಾಂತಿ—ಎಂಥ ಮನುಷ್ಯನ ಎದೆಯನ್ನೂ ನಡುಗಿಸಬಹುದಾದ ಆವರಣ.

ಹಿಮಾಲಯದ ಉತ್ತರಕ್ಕಿರುವುದು ಈ ಅಮಾನುಷ ಪ್ರದೇಶ. ಅದರಾಚೆಗೆ ಹಿಮಾಲಯಕ್ಕಿಂತ ಸ್ವಲ್ಪ ಮಾತ್ರ ಕಡಿಮೆ ಪ್ರಚಂಡವಾದ ಕ್ಯೂನಲಲ್ ಶ್ರೇಣಿಗಳು; ಅದರಾಚೆಗೆ ಮಂಗೋಲಿಯ ಮತ್ತು ಗೋಬಿ ಮರುಭೂಮಿ. ಅಂತೂ ಭಾರತದಿಂದ ಉತ್ತರಕ್ಕೆ ೧,೦೦೦ ಮೈಲು ದೂರದ ವರೆಗೆ ಹಬ್ಬಿದ ಪ್ರಕೃತಿನಿರ್ಮಿತ ದುರ್ಗದಂಥ ಅನುಕೂಲತೆ ಬೇರಾವ ದೇಶಕ್ಕೂ ಇಲ್ಲ.



ಹಿಮಾಲಯವು ಭಾರತವನ್ನು ಪರಕೀಯರ ಆಕ್ರಮಣದಿಂದ ರಕ್ಷಿಸಿದೆಯೇ? ಎಂಬ ಐತಿಹಾಸಿಕ ಪ್ರಶ್ನೆ ಈಗ ಏಳುತ್ತದೆ. ಉತ್ತರದ ಹೆಚ್ಚು “ಗಟ್ಟಿಗ”ರಾದ ಜನರು ಭಾರತವನ್ನು ಸದಾ ಕಾಲವೂ ಆಕ್ರಮಿಸುತ್ತಲೇ ಬಂದಿದ್ದಾರೆಂಬ ಭಾವನೆ ಭಾರತದ ಇತಿಹಾಸ ಓದುವವರಿಗೆ ಆಗುವುದು ನಿಜ. ಆದರೆ ಅದು ವಿದೇಶೀಯರು ನಮ್ಮ ಇತಿಹಾಸ ಬರೆದದ್ದರಿಂದ ಉಂಟಾದ ಭ್ರಾಂತಿಯೆಂದು ಪರೀಕ್ಷಿಸಿದಾಗ ಸ್ಪಷ್ಟವಾಗುವುದು.

ಮೊದಲನೆಯದಾಗಿ, ಹಿಮಾಲಯದ ಕಡೆಯಿಂದ ಭಾರತದ ಮೇಲೆ ಎಂದೂ ದಾಳಿಯಾಗಿಲ್ಲವೆಂಬುದು ಗಮನಾರ್ಹವಾಗಿದೆ. ಕ್ರಿ. ಶ. ೬೪೭ ರಲ್ಲಿ ಟಿಬೇಟದಿಂದ ಒಬ್ಬ ಚೀನಿ ಸೇನಾಪತಿ ದಾಳಿ ಮಾಡಿ ಕೆಲ ಪ್ರದೇಶಗಳನ್ನು ಆಕ್ರಮಿಸಿದ್ದೂ ಕ್ರಿ.ಶ. ೧೮೪೪ರಲ್ಲಿ ಜಮ್ಮು ಮಹಾರಾಜ ಗುಲಾಬಸಿಂಗನ ಸೈನ್ಯಗಳು ಟಿಬೇಟದ ಮೇಲೆ ಆರಾರು ಸಲ ದಾಳಿಮಾಡಿ ಲಡ್ಡಾಕ ಮತ್ತು ಬಾಲ್ಟಿಸ್ತಾನಗಳನ್ನಾಕ್ರಮಿಸಿದ್ದೂ ನಿಜವಾದರೂ ಅವು ಆಕ್ರಮಣಗಳಾಗಿರದೆ ಕೇವಲ ಚಿಲ್ಲರೆ ದಾಳಿಗಳಾಗಿದ್ದವು, ಹೊರತು ಅವಕ್ಕೇನೂ ಐತಿಹಾಸಿಕ ಮಹತ್ವವಿಲ್ಲ.

ಇನ್ನು ವಾಯವ್ಯದ ಹಿಂದುಕುಶ ಪರ್ವತಗಳು ಭಾರತಕ್ಕೆ ನಿಜವಾದ ರಕ್ಷಣೆ ಕೊಡಲಿಲ್ಲವೆಂಬುದೂ ದುಡುಕಿನ ನಿರ್ಣಯವೇ ಸೈ. ಗಜನಿ ಮಹಮ್ಮದನ ದಾಳಿಯಂಥ ಕ್ಷಣಿಕ ಘಟನೆಗಳನ್ನೂ ಆಕ್ರಮಣಗಳ ಲೆಕ್ಕದಲ್ಲೇ ಹಿಡಿದು ಭಾರತದ ಇತಿಹಾಸವು ಪರಕೀಯ ಆಕ್ರಮಣಗಳಿಂದ ತುಂಬಿದೆಯೆನ್ನುವುದಾದರೆ ಡೇನ ಜನರು ಎಂಟನೇ ಶತಕದಲ್ಲಿ ಇಂಗ್ಲಂಡಿನ ಮೇಲೆ ಮಾಡಿದ ದಾಳಿಗಳನ್ನೆಲ್ಲ ಸೇರಿಸಿ ಇಂಗ್ಲಂಡೂ ಸದಾ ಆಕ್ರಮಣಗ್ರಸ್ತ ರಾಷ್ಟ್ರವೆನ್ನಬಹುದು. ವಸ್ತುತಃ ಭಾರತದ ಮೇಲಾದ ನಿಜವಾದ ಆಕ್ರಮಣಗಳು ತೀರ ವಿರಳ.

ಕ್ರಿ. ಶ. ೧೧೯೦ ರಿಂದ ೧೫೨೬ ರ ವರೆಗೆ—ಘೋರಿಯಿಂದ ಬಾಬರನ ತನಕ—ತೈಮೂರನ ದಾಳಿಯನ್ನು ಬಿಟ್ಟು, ಕೇವಲ ನಾಲ್ಕು ಆಕ್ರಮಣಗಳು ಹಿಂದುಕುಶ್ ಕಣಿವೆಯ ಮಾರ್ಗವಾಗಿ ಆದವು. ಅದೇ ಅವಧಿಯಲ್ಲಿ ಯುರೋಪಿನ ಇತಿಹಾಸವನ್ನು ಅವಲೋಕಿಸಿದರೆ ಫ್ರಾನ್ಸ್ ಒಂದೇ ಎಷ್ಟು ಬಾರಿ ಆಕ್ರಮಣಕ್ಕೊಳಗಾಯಿತು? ಆಂಗೆವಿನ್, ಬರ್ಗಂಡಿಯನ್ ಆಕ್ರಮಣಗಳು, ನೂರು ವರ್ಷಗಳ ಯುದ್ಧ—ಹೀಗೆ ಎಷ್ಟುದ್ದಕ್ಕೂ ಎಳೆಯಬಹುದು. ಬಾಬರನ ನಂತರ ಭಾರತದ ಮೇಲಾದ ಏಕಮಾತ್ರ ಮಹಾ ದಾಳಿಯೆಂದರೆ (೨೧೨ ವರ್ಷದ ನಂತರ) ೧೭೩೯ ರಲ್ಲಿ ನಾದಿರಶಹಾನದು. ಜರ್ಮನಿ, ಫ್ರಾನ್ಸ, ಇಟಲಿ ಮತ್ತು ಇತರ ಯುರೋಪಿನ ರಾಷ್ಟ್ರಗಳು ಪ್ರತಿ ಶತಮಾನದಲ್ಲಿಯೂ ಭೀಕರ ಆಕ್ರಮಣಗಳಿಗೆ ಗುರಿಯಾಗುತ್ತಲೇ ಇವೆ. ಅಮೇರಿಕದ ಸಂಯುಕ್ತ ಸಂಸ್ಥಾನದಂಥ ತೀರ ಎಳೆಯ ರಾಷ್ಟ್ರ ಕೂಡ ೧೮೧೨ ರಲ್ಲಿ ಆಕ್ರಮಣಕ್ಕೊಳಗಾಗಿ ಶ್ವೇತಭವನಕ್ಕೆ ಕೊಳ್ಳಿ ಹಚ್ಚಲಾಯಿತು. ಇದನ್ನೆಲ್ಲ ನೋಡಿದರೆ ಭಾರತದ ಮೇಲಾದ ದಾಳಿಗಳು ಕಡಿಮೆಯೆಂದು ಖಂಡಿತವಾಗಿ ಹೇಳಬಹುದು.

ಇಸ್ಲಾಮಿ ದಂಡಯಾತ್ರೆಯನ್ನೇ ವಿಚಾರಿಸಿದರೆ ಇರಾಣ, ಇಜಿಪ್ತ, ಆಫ್ರಿಕಗಳನ್ನು ಹಿಜರಿಯ ಒಂದನೇ ಶತಕದಲ್ಲಿ ಇಸ್ಲಾಮದ ಸೈನಿಕರು ವಶಪಡಿಸಿಕೊಂಡರೂ ಭಾರತದ ಮೇಲೆ ಅವರು ಏರಿ ಬಂದದ್ದು (ಸಿಂಧದ ಮೇಲಿನ ದಾಳಿ ಬಿಟ್ಟರೆ) ಹಜರತ ಮಹಮ್ಮದರ ಅನಂತರ ೫೭೦ ವರ್ಷಗಳ ಮೇಲೆ. ಪಂಜಾಬ, ದಿಲ್ಲಿಗಳ ನಿಜವಾದ ಆಕ್ರಮಣ ಘೋರಿ ಮಹಮ್ಮದನಿಂದ ೧೧೯೦ರಲ್ಲೇ ಆಯಿತು. ಆಗಿನ ಜಗತ್ತಿನ ಅರೆವಾಸಿಯನ್ನು ಇಸ್ಲಾಮದ ಅನುಯಾಯಿಗಳು ಗೆದ್ದಿದ್ದರೂ ಸಿಂಧ ಕೈವಶವಾದ ಮೇಲೂ ಭಾರತವೊಂದನ್ನು ಅವರೇಕೆ ಹಾಗೇ ಬಿಟ್ಟರು? ಭಾರತದ ಉತ್ತರದ ಪರ್ವತಶ್ರೇಣಿಗಳೇ ಅವರನ್ನು ತಡೆಯಲಿಲ್ಲವೆ?

ವಾಯವ್ಯದಿಂದ ಭಾರತದ ಮೇಲಾದ ದಾಳಿಗಳಲ್ಲಿ ಇನ್ನೊಂದು ಗಮನಾರ್ಹ ಅಂಶವಿದೆ. ಹಿಂದುಕುಶ ಪ್ರದೇಶದಲ್ಲಿ, ಅಂದರೆ ಈಗಿನ ಅಫಗಾಣಿಸ್ತಾನದಲ್ಲಿ ಪ್ರಬಲವಾದ ಸಾಮ್ರಾಜ್ಯವನ್ನು ಸಂಘಟಿಸಿದ ಹೊರತು ಯಾರೂ ಭಾರತದ ಮೇಲೆ ದಾಳಿ ಮಾಡಲು ಸಮರ್ಥರಾಗಿಲ್ಲ. ಸೆಲ್ಯೂಕಸನೇ ಆಗಲಿ, ೧,೨೦೦ ವರ್ಷಗಳ ನಂತರ ಗಜನಿಯೇ ಆಗಲಿ, ಮತ್ತೆ ಮೂರು ಶತಮಾನ ದಾಟದ ಮೇಲೆ ಬಾಬರನೇ ಆಗಲಿ, ಹಿಂದುಕುಶ ಪ್ರದೇಶದಲ್ಲಿ ಸಂಘಟಿತರಾಗಿ ಅಲ್ಲಿಂದ ಖೈಬರ ಮೂಲಕ ಪಂಜಾಬವನ್ನು ವಶಪಡಿಸಿಕೊಂಡರು. ದಿಲ್ಲಿಯಲ್ಲಿ ಬೇರೂರಿದ ಮೇಲೆಯೇ ಮುಸ್ಲಿಂ ಸುಲ್ತಾನರು ಉಳಿದ ಭಾರತದ ಮೇಲೆ ಕಣ್ಣಿಕ್ಕಲು ಸಮರ್ಥರಾದರು. ಪಂಜಾಬದಲ್ಲಿ ಬಲಿಷ್ಠ ಸಾಮ್ರಾಜ್ಯವಿದ್ದಾಗ ಹೊರಗಿನವರ ಪ್ರಯತ್ನ ವಿಫಲವೇ ಆಗಿದೆ.

ಈ ಎಲ್ಲ ಆಕ್ರಮಣಗಳೂ ಭಾರತದ ಜೀವನವನ್ನು ಅಲ್ಲೋಲಕಲ್ಲೋಲಗೊಳಿಸಲು ಸಮರ್ಥವಾಗಲಿಲ್ಲೆಂಬುದು ಇನ್ನೊಂದು ಗಮನಾರ್ಹ ಅಂಶ. ಬ್ರಿಟನ್ನಿನಲ್ಲಿ ಆಂಗ್ಲ-ಸ್ಯಾಕ್ಸನರ, ಫ್ರಾನ್ಸಿನಲ್ಲಿ ಫ್ರಾಂಕೀಶರ, ಗಾಥ ಮತ್ತು ವಿಸಿಗಾಥರ, ಪೂರ್ವ ಯುರೋಪಿನಲ್ಲಿ ಹೂಣರ ಮತ್ತು ಜಂಗಿಸ್ ಖಾನನ ಮಹಾ ಅಭಿಯೋಗಗಳಾದಂತೆ, ಅದರಿಂದ ಸಾಮಾಜಿಕ ಜೀವನ ಅಳಿಸಿ ಹೋದಂತೆ ಭಾರತದಲ್ಲೆಂದೂ ಆಗಲಿಲ್ಲ. ಮಧ್ಯ ಏಶಿಯವು ಅನಾಗರಿಕ ಪಡೆಗಳ ಕಾಲ್ತುಳಿತಕ್ಕೆ ಸಿಕ್ಕಿ ಪುಡಿಪುಡಿಯಾದಾಗ ಶಕರು ಭಾರತದ ಗಡಿಯಲ್ಲೆ ಹೊಡೆದಟ್ಟಲ್ಪಟ್ಟರು; ಹೂಣರು ಪಂಜಾಬ ಮುಟ್ಟುವುದರೊಳಗೇ ಸೋತು ನಿಸ್ಸತ್ವರಾಗಿ ಹೋಗಿದ್ದರು. ಭಾರತದ ಜೀವನವನ್ನು ಹದಗೆಡಿಸಲು ಯಾರೂ ಸಮರ್ಥರಾಗಲಿಲ್ಲ.

ಇಲ್ಲಿ, ಭಾರತದಲ್ಲಿ ವೇದಕಾಲದ ಜೀವನ ಪದ್ಧತಿಯೇ ಅಲ್ಪಸ್ವಲ್ಪ ಬದಲಾವಣೆಗಳೊಡನೆ ಇನ್ನೂ ನಡೆಯುತ್ತಿದೆ. ಬುದ್ಧನ ಕಾಲದಲ್ಲಿನಂತೆ ಈಗಲೂ ನಾವು ಅದೇ ಕರ್ಮ, ಅದೇ ಮಾಯೆಯನ್ನು ಚರ್ಚಿಸುತ್ತೇವೆ. ಅಂದಿನ ಮಹಾ ನಗರಗಳಾದ ಕಾಶಿ, ಮಥುರಾ, ಗಯೆಗಳು ಇನ್ನೂ ಹಾಗೇ ಉಳಿದಿವೆ. ಹಿಮಾಲಯ, ಹಿಂದುಕುಶ, ಲುಶಾಯಿ ಪರ್ವತಗಳು ನಮಗಿತ್ತ ಸಂರಕ್ಷಣೆಯೇ ಇದಕ್ಕೆ ಕಾರಣವಲ್ಲವೆ ?

ಅಜೇಯ ಹಿಮಾಲಯಗಳು ನಮಗೆ ಕೊಟ್ಟ ಈ ವರದೊಡನೆ ಕೆಲ ಚಿಕ್ಕ ಶಾಪಗಳೂ ನಮ್ಮ ಪಾಲಿಗೆ ಬಂದಿವೆ. ನಮ್ಮ ಜಗತ್ತು ಹಿಮಾಲಯಕ್ಕೆ ಮುಗಿದುದರಿಂದ ವಿದೇಶೀಯರೆಂದರೆ ನಮಗೆ ಉಪೇಕ್ಷೆಯುಂಟಾಯಿತು. ಇದರಿಂದ ನಾವು ಸಂಕುಚಿತ ಭಾವನೆಯನ್ನು ಬೆಳಸಿಕೊಂಡೆವು. ನಮಗೆ ನಿಜವಾದ ಸಂಪರ್ಕ ಬಂದದ್ದು ಅಫಗಾಣಿಸ್ತಾನದೊಡನೆ ಮಾತ್ರ; ಅದು ಸುಸಂಘಟಿತವಾಗಿದ್ದ ಕಾಲ ತೀರ ಕಡಿಮೆ. ಇರಾಣದ ಅಸ್ಥೆ ದೂರದ್ದಾಯಿತು. ಚೀನವಂತೂ ಭಾರತಕ್ಕೆ ಪೂರ್ತಿ ದುರ್ಗಮವಾಗಿತ್ತು. ಅದ್ದರಿಂದ ಇರಾಣ, ಚೀನಗಳು ಬೆಳಸಿಕೊಂಡಂತೆ ನಾವು ನಿರಂತರವಾದ ವಿದೇಶ ಸಂಪರ್ಕವನ್ನು ಬೆಳಸಿಕೊಳ್ಳಲಿಲ್ಲ. ನಮ್ಮ ರಾಜರ ಮಹತ್ವಾಕಾಂಕ್ಷೆ “ಆಸೇತು ಹಿಮಾಚಲ” ಭರತವರ್ಷದ ಚಕ್ರವರ್ತಿಯಾಗುವುದರಲ್ಲೇ ಮುಕ್ತಾಯವಾಗುತ್ತಿತ್ತು.

ಹಿಮಾಲಯದ ಅಭಯಹಸ್ತದಿಂದ ನಾವು ಸಂರಕ್ಷಣ ವಿಚಾರವನ್ನೂ ಅಸಡ್ಡೆಮಾಡುವಂತಾಯಿತು. ಮ್ಯಾಜಿನೋ ಕೋಟೆಗಳನ್ನು ನಂಬಿದ ಫ್ರಾನ್ಸಿನಂತೆ, ಯಾರಾದರೊಬ್ಬ ಪರಕೀಯ ದಾಳಿ

ಗಾರನು ಹಿಂದುಕುಶದಾಚೆ ಸನ್ನಾಹಮಾಡಿಕೊಳ್ಳುತ್ತಿದ್ದರೂ ಅವನು ನಮ್ಮ ರಾಜ್ಯದೊಳಗೆ ಕಾಲಿಟ್ಟು ದಾಳಿ ಹೂಡುವವರೆಗೂ ನಾವು ಅತ್ತ ಲಕ್ಷ್ಯವನ್ನೇ ಕೊಡುತ್ತಿದ್ದಿಲ್ಲ. ಆಮೇಲೆ ಗಡಬಡಿಸಿ ಎದ್ದು ಸನ್ನಾಹಮಾಡುವಷ್ಟರಲ್ಲಿ ಕೈಮೀರಿ ಹೋಗುತ್ತಿತ್ತು. ಯುರೋಪಿನಲ್ಲಿ ಪ್ರತಿಯೊಂದು ಯುದ್ಧದ ನಿರ್ಣಾಯಕ ಕದನವು ಆಯಾ ರಾಜ್ಯದ ಹೊರಗೆ ನಡೆದರೆ—ಉದಾ: ಬ್ಲೇನ್ಹೈಮ್, ಲೀಪಜಿಗ್, ವಾಟರ್ಲೂ—ಭಾರತದಲ್ಲಿ ಯಾವಾಗಲೂ ನಿರ್ಣಾಯಕ ಕದನ ಒಳಗೇ—ಪಾನಿಪತದಲ್ಲಿ ಜರಗಿತು. ಈ ವಿಚಿತ್ರ ಘಟನೆಗೆ ನಾವು ಹಿಮಾಲಯವನ್ನು ನಂಬಿ ಅದರಾಚೆಗೆ ನಡೆಯುತ್ತಿದ್ದುದನ್ನು ಅಲಕ್ಷಿಸಿದ್ದೇ ಕಾರಣ.



ಹಿಮಾಲಯವು ಈ ಹಿಂದೆ ಭಾರತಕ್ಕೆ ರಕ್ಷಣೆ ಕೊಟ್ಟಿರಬಹುದು; ಆದರೆ ವಿಮಾನಗಳ, ಆಕಾಶಬಾಣಗಳ ಈ ಯುಗದಲ್ಲಿ ಅದು ನಮ್ಮನ್ನು ಎಷ್ಟು ಮಟ್ಟಿಗೆ ಕಾಪಾಡಬಹುದು? ವಿಮಾನಯುಗವು ಯುದ್ಧಕಲೆಯ ಕಲ್ಪನೆಯಲ್ಲಿ ಕ್ರಾಂತಿಕಾರಕ ಬದಲಾವಣೆ ಮಾಡಿದೆ. ನೌಕಾಯುಗದಲ್ಲಿ ಒಂದು ನದಿ, ಒಂದು ಕಡಲುಗಾಲುವೆ, ಒಂದು ಚಿಕ್ಕ ಸಮುದ್ರಕ್ಕಿದ್ದ ಸಂರಕ್ಷಣಶಕ್ತಿ ಈಗ ಉಳಿದಿಲ್ಲ; ವಿಸ್ತಾರವಾದ ಮರುಭೂಮಿಗಳೂ ಇಂದಿನ ವೈಮಾನಿಕರಿಗೆ ಅಡ್ಡಗಾಲಿಕ್ಕಲಾರವು. ಆದರೆ ವಿಶಾಲವಾದ ಸಮುದ್ರಗಳು ಅವರನ್ನು ತಡೆಯಬಲ್ಲವು. ಹೀಗೆ ನೈಸರ್ಗಿಕ ರಕ್ಷಣೆಯ ಹಳೇ ಕಲ್ಪನೆಗಳು ಇಂದು ಮಾಯವಾದಂತೆ, ಹಿಂದೆ ಅಷ್ಟು ಮಹತ್ವದ್ದಲ್ಲದ ಇತರ ಸಂಗತಿಗಳಿಗೆ ಈಗ ಮಹತ್ವ ಬಂದಿದೆ.

ಈ ಬದಲಾದ ಯುದ್ಧಕಲ್ಪನೆಯಲ್ಲಿ ಹಿಮಾಲಯದ ಆಯಕಟ್ಟಿನ ಮಹತ್ವಬದಲಾಗಿದೆಯೆ? ಹಿಮಾಲಯವನ್ನು ಬರಿ ೧೫೦ ಮೈಲು ಅಗಲದ ಪರ್ವತಶ್ರೇಣಿಯೆಂದಿಷ್ಟೇ ಪರಿಗಣಿಸುವುದಾದಲ್ಲಿ ಅದರ ಶಿಖರಗಳ ಗಗನಚುಂಬಕತ್ವವು ಕೂಡ ಇಂದಿನ ವಿಮಾನಯುಗದಲ್ಲಿ ಪರಿಣಾಮಕರ ದುರ್ಗವಾಗಲಾರದೆಂದು ಒಪ್ಪಲೇಬೇಕು. ಆದರೆ ಮೊದಲೇ ಸ್ಪಷ್ಟಗೊಳಿಸಿದಂತೆ ಈ ೧೫೦. ಮೈಲಿನ ಪರ್ವತಶ್ರೇಣಿ ಮಾತ್ರ ಭಾರತದ ಉತ್ತರದ ದುರ್ಗವಲ್ಲ; ಅದರಾಚೆಗಿರುವ ೧೫,೦೦೦ ಫೂಟೆತ್ತರದ ತಿಬೇಟದ ಪೀಠಭೂಮಿ ಮತ್ತು ಅದನ್ನು ನಾಲ್ಕು ಸುತ್ತಲೂ ಗೋಡೆಯಂತೆ ಸುತ್ತುಗಟ್ಟಿರುವ ಪರ್ವತಗಳು ಈ ದುರ್ಗದಲ್ಲಿ ಸಮಾವೇಶ ಹೊಂದಿವೆ. ಹಿಮಾಲಯದ ಆಚೆಗೆ ಅದಕ್ಕೆ ಹತ್ತಿರವಾಗಿ ಎಲ್ಲಿಯೂ ಯುದ್ಧಸನ್ನಾಹವನ್ನು ಪರಿಣಾಮಕರವಾಗಿ ಕೇಂದ್ರೀಕರಿಸುವುದು ಸಾಧ್ಯವೇ ಇಲ್ಲ. ತಿಬೇಟದ ಪೀಠಭೂಮಿಯ ಹವಾಮಾನವು ವಿಮಾನ ಚಟುವಟಿಕೆಗೆ ಎಳ್ಳಷ್ಟೂ ಅನುಕೂಲವಿಲ್ಲ; ವಿಮಾನ ಬಲವನ್ನು ಕೇಂದ್ರೀಕರಿಸಬಹುದಾದ ಸ್ಥಳಗಳು ತೀರ ದೂರವಿರುವುದರಿಂದ ಅಲ್ಲಿಂದ ಹಿಮಾಲಯ ದಾಟಿ ಸಂತತವಾಗಿ ದಾಳಿ ಮಾಡುವುದು ಅಸಂಭವಕೋಟಿಯದಾಗುವುದು. ಅಂತೆಯೇ ಇಂದಿಗೂ ಹಿಮಾಲಯವು ನಮ್ಮ ಅಭೇದ್ಯ ದುರ್ಗವಾಗಿದೆಯೆಂದು ಹೇಳಬಹುದು.

ವಾಯುವ್ಯ ಪ್ರದೇಶದ ಬಗ್ಗೆ ಮಾತ್ರ ಹೀಗೆ ಹೇಳಲು ಶಕ್ಯವಿಲ್ಲ. ಹಿಂದುಕುಶ ಪರ್ವತಗಳು ಅಷ್ಟು ಎತ್ತರವೂ ಇಲ್ಲ, ಆಚೆಯ ಪ್ರದೇಶ ಅಷ್ಟು ಅಮಾನುಷವೂ ಇಲ್ಲ. ಅಫಗಾನಿಸ್ತಾನದಾಚೆಗೆ ಸಾಕಷ್ಟು ಶಕ್ತಿಸಂಚಯ ಮಾಡಿದರೆ ತಾಶಖಂಡ (ರಸಿಯ)ದಿಂದ ಪಂಜಾಬದ ಮೇಲೆ ಏಕೆ, ದಿಲ್ಲಿಯ ಮೇಲೂ ದಾಳಿ ಮಾಡಲು ಸಾಧ್ಯವಿದೆ.

ಆದರೆ ಇಲ್ಲಿಯೂ ಕೆಲ ವಿಷಯಗಳು ಭಾರತಕ್ಕೆ ಅನುಕೂಲವಾಗಿವೆ. ರಶಿಯದ ಔದ್ಯೋಗಿಕ ಮತ್ತು ಎಣ್ಣೆ ಕ್ಷೇತ್ರಗಳು ರಶಿಯದ ಗಡಿಗೆ ಸಮೀಪವಿದ್ದು ಗಡಿಯಲ್ಲಿ ಸಾಮುಗ್ರಿಗಳನ್ನು ಕೇಂದ್ರೀಕರಿಸಿ ಪಂಜಾಬ ಪ್ರದೇಶದಲ್ಲಿ ವಿಮಾನದಾಳಿ ಮಾಡಬಹುದಾದರೂ ಸದ್ಯಕ್ಕೆ ಬಾಂಬರ ವಿಮಾನಗಳ ಕಾರ್ಯಕ್ಷೇತ್ರ ೧,೦೦೦ ಮೈಲು ಮಾತ್ರ ಇರುವುದರಿಂದ (ಏಕೆಂದರೆ ಅದರಾಚೆ ಹಾರಿದರೆ ತಿರುಗಿ ಹೋಗಲು ಸಾಲುವಷ್ಟು ಎಣ್ಣೆ ವಿಮಾನದಲ್ಲಿ ಉಳಿಯುವುದಿಲ್ಲ.) ಬಹಳವಾದರೆ (ಭಾರತದ ಆಕಾಶರಕ್ಷಣೆ ಕುಸಿದುಬಿದ್ದ ಪ್ರಸಂಗದಲ್ಲಿ) ದಿಲ್ಲಿಯ ವರೆಗಿನ ನಗರಗಳನ್ನು ಪುಡಿ ಮಾಡಬಹುದೇ ಹೊರತು ಅದಕ್ಕೂ ಪೂರ್ವ ಮತ್ತು ದಕ್ಷಿಣದಲ್ಲಿರುವ ಭಾರತದ ಪ್ರಮುಖ ಔದ್ಯೋಗಿಕ ಪ್ರದೇಶಗಳನ್ನು ಕುಟ್ಟುವದು ಸಾಧ್ಯವಿಲ್ಲ. ನಮ್ಮ ಉಕ್ಕು, ಕಬ್ಬಿಣ, ಕಲ್ಲಿದ್ದಲಿ ಪ್ರದೇಶಗಳು ವಾಯುವ್ಯ ಗಡಿಯಾಚೆಯ ವಿಮಾನಗಳಿಂದ ಸುರಕ್ಷಿತವಾಗಿಯೇ ಇವೆ. ಕಳೆದ ಯುದ್ಧದಲ್ಲಿ ಬ್ರಹ್ಮದೇಶವನ್ನಾಕ್ರಮಿಸಿದ ಜಪಾನವು ಭಾರತದ ಔದ್ಯೋಗಿಕ ಕೇಂದ್ರಗಳ ಮೇಲೆ ಇದೇ ಕಾರಣದಿಂದ ದಾಳಿ ಮಾಡಲು ಅಸಮರ್ಥವಾಯಿತು. ನಿರಂತರ ವಿಮಾನ ಯುದ್ಧವೆಂದರೆ ಚಿನ್ನಾಟದ ಮಾತಲ್ಲ. ಅದನ್ನು ಹೂಡಬೇಕಾದರೆ ಪ್ರಚಂಡ ಸಾಮುಗ್ರಿ ಸಂಗ್ರಹ, ಸಂಘಟನೆ ಬೇಕಾಗುವುದು. ೧,೦೦೦ ಬಾಂಬರ ವಿಮಾನಗಳನ್ನು ಒಮ್ಮೆ ಕಳಿಸಬೇಕಾದರೆ ೨೮ ಗುಡ್ಸ್ ಟ್ರೇನುಗಳಲ್ಲಿ ಹಿಡಿಯುವಷ್ಟುಪೆಟ್ರೋಲೊಂದೇ ಬೇಕಾಗುವುದು. ಇಷ್ಟಾಗಿಯೂ ಔದ್ಯೋಗಿಕ ಕೇಂದ್ರಗಳನ್ನು ಮುಟ್ಟಲು ದಾಳಿಗಾರರಿಗೆ ಸಾಧ್ಯವಿಲ್ಲ. ಹೀಗಾಗಿ ಬ್ರಹ್ಮ, ಸಿಯಾಂಗಳನ್ನು ಭಾರತದ ಸಂರಕ್ಷಣ ವ್ಯವಸ್ಥೆಯಲ್ಲಿ ಸೇರಿಸಿಕೊಳ್ಳುವುದಾದರೆ, ವಿಮಾನದಾಳಿಯಿಂದ ನಮ್ಮನ್ನು ಬಗ್ಗಬಡಿಯಲು ಸಾಧ್ಯವಿಲ್ಲ.

ಇನ್ನು ವಿಮಾನ ಬಲವೊಂದೇ ಯುದ್ಧವನ್ನು ಗೆಲ್ಲಲು ಸಾಲದೆಂದು ಕಳೆದ ಮಹಾಯುದ್ಧವು ತೋರಿಸಿಕೊಟ್ಟಿದೆ. ಅಗಾಧ ವಿಮಾನ ಶಕ್ತಿಯಿಂದ ಹಿಟ್ಲರನು ಇಂಗ್ಲಂಡನ್ನು ಸೋಲಿಸಲು ಅಸಮರ್ಥನಾದ. ಇಂಗ್ಲಂಡೂ ಜರ್ಮನಿಯ ಮೇಲೆ ಮಾಡಿದ ಅಖಂಡ ವಿಮಾನ ದಾಳಿಗಳು ನಿರೀಕ್ಷಿಸಿದಷ್ಟು ಫಲಕೊಡಲಿಲ್ಲ. ಚಿಕ್ಕ ಅಸನ್ನದ್ಧ ರಾಷ್ಟ್ರವನ್ನು ಮಿಂಚಿನದಾಳಿದಿಂದ ವಿಮಾನಬಲವು ಪಾದಾಕ್ರಾಂತ ಮಾಡಬಹುದಾಗಲಿ, ದೊಡ್ಡ ರಾಷ್ಟ್ರವನ್ನಲ್ಲವೆಂದು ಈಗ ಅನುಭವಸಿದ್ಧವಾಗಿದೆ. ಭೂಬಲವೇ ಇಂದಿಗೂ ಯುದ್ಧದಲ್ಲಿ ನಿರ್ಣಾಯಕವಾಗಿದೆ.

ಈ ದೃಷ್ಟಿಯಿಂದ ಭಾರತದ ವಿಸ್ತಾರವು ಮಹತ್ವದ ಅನುಕೂಲವಾಗಿದೆ. ಹಿಮಾಲಯದ ಪಾರ್ಶ್ವದಿಂದ ಭಾರತವು ಭೂವ್ಯಾಕಾಶಗಳೆರಡರಿಂದಲೂ ದುರ್ಗಮವಾಗಿದೆಯೆಂದು ಈಗಾಗಲೆ ತೋರಿಸಲಾಗಿದೆ. ವಾಯುವ್ಯ ಪ್ರದೇಶದಿಂದ ಬರುವ ಭೂದಾಳಿಗಳು ಗಡಿನಾಡು, ಪಂಜಾಬಗಳ ಸಾವಿರಾರು ಮೈಲಿನ ಪ್ರದೇಶವನ್ನು ದಾಟಿ ಬರಬೇಕಾಗುವುದು. ಅಷ್ಟರೊಳಗೆ ಒಳನಾಡಿನಲ್ಲಿ ಸಂರಕ್ಷಣೆಯನ್ನು ಸಂಘಟಿಸಿಕೊಳ್ಳಲು ಸಾಧ್ಯವಿದೆ. ವಿಸ್ತಾರವಾದ ಪ್ರದೇಶಗಳು ಪ್ರಬಲ ಆಕ್ರಮಣಕಾರನನ್ನೂ ಹಣ್ಣು ಮಾಡಬಹುದೆಂದು ನೆಪೋಲಿಯನ್ ಮತ್ತು ಹಿಟ್ಲರರು ರಶಿಯದಲ್ಲೂ ಜಪಾನವು ಚೀನದಲ್ಲೂ ಕೈಸುಟ್ಟುಕೊಂಡು ಕಲಿತವು. ಭಾರತಕ್ಕೂ ಈ ಅನುಕೂಲತೆಯಿದೆ. ಹಿಮಾಲಯವೇ ಅದಕ್ಕೆ ಬಹಳ ಮಟ್ಟಿಗೆ ಕಾರಣ.

ಹೀಗೆ ಭಾರತವು ಭೂಸೀಮೆಯಿಂದ ಅಜಿಂಕ್ಯಪ್ರಾಯವಾಗಿದೆ. ಆದರೆ ಸಮುದ್ರದ ಬದಿಯಿಂದ ಮಾತ್ರ ಹಾಗಲ್ಲ. ಭಾರತದ ಸಮುದ್ರಗಳ ರಕ್ಷಣೆ ಸರಿಯಾಗಿ ಆಗದಿದ್ದರೆ ದಿಗ್ಬಂಧನದಿಂದ ಭಾರತದ ಆರ್ಥಿಕ ಜೀವನವನ್ನು ಮೆಲ್ಲಮೆಲ್ಲಗೆ ಉಸಿರುಕಟ್ಟಿಸಿಬಿಡಬಹುದಿಷ್ಟೇ ಅಲ್ಲ, ಪ್ರಮುಖ ಔದ್ಯೋಗಿಕ ಕೇಂದ್ರಗಳನ್ನು ಕೂಡ ಪುಡಿಪುಡಿ ಮಾಡಬಹುದು. ನಿರಂತರ ವಿಮಾನ ದಾಳಿಗೆ ವಿಮಾನವಾಹಕ ಹಡಗುಗಳು ಸಾಕಷ್ಟು ಉಪಯುಕ್ತವಲ್ಲದಿದ್ದರೂ ಭಾರತದ ಪ್ರಮುಖ ಔದ್ಯೋಗಿಕ ಜೀವಕೇಂದ್ರಗಳಾದ ಮುಂಬಯಿ, ಕಲಕತ್ತಾ, ಅಹಮ್ಮದಾಬಾದ, ಜಮಶೆದಪುರ, ಝುರಿಯಾ ಕಲ್ಲಿದ್ದಲಿ ಗಣಿಗಳನ್ನೂ ಮುಖ್ಯ ರೇಲ್ವೆ ಕೇಂದ್ರಗಳಾದ ತಿರುಚಿನಾಪಳ್ಳಿ, ಬೇಜಿನ್ ಬ್ರಿಜ್, ಕಲ್ಯಾಣ, ದಾದರ, ಆಸನಸೋಲ ಮೊದಲಾದವುಗಳನ್ನೂ ವಿಮಾನವಾಹಕಗಳಿಂದ ಬಂದ ವಿಮಾನಗಳು ಬೇಕಾದಂತೆ ಧ್ವಂಸ ಮಾಡಬಹುದು. ಇಂಥ ಭಯಂಕರ ಅನರ್ಥವನ್ನು ತಪ್ಪಿಸಲು ಸಮುದ್ರದ ಮೇಲೆ ಪ್ರಭುತ್ವ ಸ್ಥಾಪಿಸುವುದು ಅಪರಿಹಾರ್ಯ.

---

ಯುದ್ಧವೆಂದರೊಂದು ಮಹಾ ವೈಭವವೆಂದು ಬಗೆಯುವ ಯುವಕರಿದ್ದಾರೆ: ಆದರೆ ನಾನೆನ್ನುವೆ, ಅದು ಶುದ್ಧ ನರಕ.

—ಜನರಲ್ ಶರ್ಮಾನ್

# ಕಮ್ಮಾರ ವೀರಭದ್ರಾಚಾರಿ ಜೋಯಿಸನಾದುದು

ವಿಶ್ವಕರ್ಮ, ಸರ್ವತಂತ್ರ ಸ್ವತಂತ್ರ ಇತ್ಯಾದಿ ಬಿರುದಾಂಕಿತನಾದ ವೀರಭದ್ರಾಚಾರಿ ಹಳ್ಳಿಗೆ ಒಬ್ಬನೇ ಕಮ್ಮಾರ, ಬಡಗಿ, ಗಾರೆ ಕೆಲಸಗಾರ ಎಲ್ಲವೂ ಆಗಿದ್ದನು. ಆದರೆ ಅವನೊಂದು ದಿನ ಜೋಯಿಸನಾಗಿಬಿಟ್ಟ. ಅದರಿಂದಾದ ಅವಸ್ಥೆ ಏನು ಕೇಳುತ್ತೀರಿ ! . . . . . . . .

ಲೇಖಕರು: ಶ್ರೀ. ಗೊರೂರು ರಾಮಸ್ವಾಮಯ್ಯಂಗಾರ್, ಎಂ. ಎ.

ನಮ್ಮೂರ ಕಮ್ಮಾರ ವೀರಭದ್ರಾಚಾರಿ ಒಳ್ಳೆಯ ಕಟ್ಟುಮಸ್ತಾದ ಆಳು. ಅವನಿಗೆ ಅನೇಕ ಬಗೆಯ ಕೆಲಸಗಳು ಬರುತ್ತಿದ್ದುದರಿಂದ ಅವನನ್ನು ನಾವು ಸರ್ವತಂತ್ರಸ್ವತಂತ್ರನೆನ್ನುತ್ತಿದ್ದೆವು. ಕಬ್ಬಿಣದ ಕೆಲಸ ಮಾಡುವದರಲ್ಲಿ ಅವನು ಯಾವಾಗಲೂ ನಿಸ್ಸೀಮ. ಸಾಧಾರಣವಾಗಿ ಕಮ್ಮಾರರು ತಾವು ಕಬ್ಬಿಣವನ್ನು ಕಾಯಿಸುತ್ತಾ, ಆ ಕಾದ ಕಬ್ಬಿಣವನ್ನು ಕೊಡತಿಯಿಂದ ಹೊಡೆಯಲು ಬೇರೆಯವರಿಗೆ ಗಂಟುಹಾಕುತ್ತಾರೆ. ಕೊಡತಿ ಭಾರವಾದುದರಿಂದ ನಿಶ್ಯಕ್ತರೂ ಮೈಗಳ್ಳರೂ ಆದ ಕಮ್ಮಾರರು ಮಾಡುವ ಉಪಾಯ ಅದು. ಆದರೆ ನಮ್ಮೂರ ವೀರಭದ್ರಾಚಾರಿ ಎತ್ತಲಾರದ ಕೊಡತಿ ಯಾವುದೂ ಇಲ್ಲವೇ ಇಲ್ಲ. ಉಳಿದ ಬಡ ಆಳುಗಳು ಏದುತ್ತಾ ಕೊಡತಿಯ ಭಾರಕ್ಕೆ ತಾವೇ ಓಲಾಡುತ್ತಿರುವಾಗ ವೀರಭದ್ರಾಚಾರಿ, ಲೀಲಾಜಾಲವಾಗಿ ಒಂದು ಸಣ್ಣ ಕಡ್ಡಿಯನ್ನು ಎತ್ತುವಂತೆ ಕೊಡತಿಯನ್ನು ಎತ್ತಿ ಕಾದ ಕಬ್ಬಿಣದ ಮೇಲೆ ಇಳಿಸುತ್ತಿದ್ದನು. ಆ ಏಟನ್ನು ತಾಳಲಾರದೆ ಕಬ್ಬಿಣದಿಂದ ಸಿಡಿಯುತ್ತಿದ್ದ ಉರಿವ ಹೊಟ್ಟು ಮತ್ತು ಕೆಂಡಗಳು, ಕತ್ತಿಗೆ ಕತ್ತಿ ಎದುರಾದಾಗ ಅವುಗಳ ತೀಕ್ಷ್ಣ ಅಲಗುಗಳಿಂದ ಹಾರುವ ರತ್ನ ಕಿಡಿಗಳಂತೆ ಕಾಣುತ್ತಿದ್ದವು. ಸಂಜೆಯ ಮಬ್ಬುಗತ್ತಲೆಯಲ್ಲಿ ಕಮ್ಮಾರನ ಮನೆಯ ಮುಂದೆ ಕೆಲಸ ನಡೆಯುತ್ತಿರುವಾಗ ಕತ್ತಲೆಯಲ್ಲಿ ರಾಮಬಾಣದಂತೆ ಹೊರಡುತ್ತಿದ್ದ ಹೂಬಾಣಗಳನ್ನು, ಕಿಡಿಗಳ ಪ್ರಸರಣವಿನ್ಯಾಸವನ್ನು ನೋಡಲು



ಹಳ್ಳಿಯ ಹುಡುಗರೆಲ್ಲ ಕಮ್ಮಾರನ ಮನೆಯ ಮುಂದೆ ಸೇರುತ್ತಿದ್ದರು. ಹುಡುಗರಿಗೆ ಅಲ್ಲಿ ನಿತ್ಯವೂ ಬಾಣ ಬಿರುಸುಗಳ ನಯನಮನೋಹರ ಪ್ರದರ್ಶನವೇ. ಆ ಮಬ್ಬು ಬೆಳಕಿನಲ್ಲಿ ಸೊಂಟದವರೆಗೆ ಮಾತ್ರ ಒಂದು ಚೌಕವನ್ನು ಸುತ್ತಿಕೊಂಡು ಕಾದ ಕಬ್ಬಿಣದಿಂದ ಹಾರುತ್ತಿರುವ ಕಿಡಿಬಾಣಗಳು ತನ್ನ ಮೈಮೇಲೆಯೇ ಪುಷ್ಪವೃಷ್ಟಿ ಮಾಡುವುವೋ ಎಂಬಷ್ಟು ಅವುಗಳ ಹತ್ತಿರದಲ್ಲಿ ಕುಳಿತಿರುತ್ತಿದ್ದ ಅರೆಮೈಯಿನ ಕಮ್ಮಾರ, ಬಾಲಕರಿಗೆ ಅಲ್ಲಾವುದ್ದೀನನ ಮಾಯಾದೀಪದ ಮಾಂತ್ರಿಕನಾಗಿ ತೋರುತ್ತಿದ್ದನು.

ಕಮ್ಮಾರ ವೀರಭದ್ರಾಚಾರಿ ಸರ್ವತಂತ್ರಸ್ವತಂತ್ರನೆಂದು ಹೇಳಿದೆ. ಅದು ಬಹಳ ದೊಡ್ಡ ಬಿರುದು. ಕರ್ಮಕುಶಲಿಯಾಗಿ ಕರ್ಮದಕ್ಷನಾದವನಿಗೆ, ನಾನಾ ಕರ್ಮಗಳನ್ನು ಕಲಿತವನಿಗೆ ಮಾತ್ರ, ಕೊಡುವ ಬಿರುದು ಅದು. ಎಂತಹ ವೇದಾಂತಿಯಾದರೂ ಕರ್ಮಕುಶಲನಾಗಿರಬೇಕೆಂಬುದನ್ನು ತೋರಿಸುವುದಕ್ಕಾಗಿಯೇ ಎಂಬಂತೆ, ವೈರಾಗ್ಯ ಚಕ್ರವರ್ತಿಯೂ ಕವಿತಾರ್ಕಿಕಸಿಂಹರೂ ಆದ ವೇದಾಂತ ದೇಶಿಕರಿಗೆ ಆ ಬಿರುದನ್ನು ಕೊಟ್ಟಿದ್ದಾರೆ. ಅವರಿಗೆ ಆ ಬಿರುದನ್ನು ಕೊಟ್ಟುದು ಅವರು ಒಂದು ಸಲ, ಅಳತೆಗೆ ಸರಿಯಾಗಿ ಪಾದರಕ್ಷೆಯನ್ನು ಹೊಲಿದು ಕಸಬುದಾರರಿಗೆ ಪಾಠಕಲಿಸಿದುದಕ್ಕಾಗಿ. ವೇದಾಂತ ದೇಶಿಕರು ಮಾಡಿದುದರಲ್ಲಿ, ಯಾವುದಕ್ಕೂ ಮತ್ತೊಬ್ಬರನ್ನು ಕುರಿಯಬಾರದೆಂಬ ತತ್ವವೂ ಅಡಕವಾಗಿತ್ತು. ಇದೇ ತತ್ವವನನ್ನುಸರಿಸಿಯೆ, ಮಹಾತ್ಮಗಾಂಧಿಯವರೂ ನಮ್ಮ ಕಾರ್ಯಕ್ಕಾಗಿ ಇತರರನ್ನು ಕುರಿಯಬಾರದೆಂದು ಹೇಳುತ್ತಿದ್ದರು. ಕಮ್ಮಾರ ವೀರಭದ್ರಾಚಾರಿಯದೂ ಅದೇ ತತ್ವ. ಆದರೆ ಅದೊಂದು ತತ್ವವೆಂಬುದು ಅವನಿಗೆ ತಿಳಿದಿರಲಿಲ್ಲ. ವೇದಾಂತ ದೇಶಿಕರ ಹೆಸರನ್ನಂತೂ ಅವನು ಎಂದೂ ಕೇಳಿರಲಿಲ್ಲ. ಆದರೆ ಪ್ರತಿ ಒಂದು ಕೆಲಸವನ್ನೂ ತಾನೇ ಮಾಡುವುದು ಅವನ ಸ್ವಭಾವವಾಗಿತ್ತು. ಇದೊಂದು ಒಳ್ಳೆ ಗುಣ, ತತ್ವ ಎಂದು ಯಾರಾದರೂ ಅವನಿಗೆ ಹೇಳಿದ್ದರೆ ಅದು ಅವನಿಗೆ ಅರ್ಥವಾಗುತ್ತಿರಲಿಲ್ಲ.

ಬಾಚಿ ಹಿಡಿದುಕೊಂಡು ಅವನು ಮರ ಕೆತ್ತಲು ಪ್ರಾರಂಭಿಸಿದರೆ, ಒಂದು ಆಳಿಗೆ ಎತ್ತಲು ಸಾಧ್ಯವಾಗದಂತಹ ದೊಡ್ಡದೊಡ್ಡ ಚಕ್ಕೆಗಳು ರಣಹದ್ದು ಹಾರಿದಂತೆ ದೂರ ಹಾರಿ ಬೀಳುತ್ತಿದ್ದವು. ಮನೆಗಳನ್ನು ಕಟ್ಟುವುದರಲ್ಲಿಯೂ ಆಯವನ್ನು ನಿರ್ಣಯಿಸುವುದರಲ್ಲಿಯೂ ಮಣ್ಣಿನ ಗೋಡೆಗಳನ್ನೆ ಸಹ ಇಟ್ಟಿಗೆ ಗೋಡೆಗಳಂತೆ ನಿರ್ಣಯವಾಗಿ ಕಟ್ಟುವುದರಲ್ಲಿಯೂ ಬಾಗಿಲುವಾಡಗಳನ್ನು ಕೂಡಿಸುವುದರಲ್ಲಿಯೂ ಕೀಲು ಚಿಲಕಗಳನ್ನು ಮಾಡುವುದರಲ್ಲಿಯೂ ಮಹಡಿಗಳಿಗೆ ಹಲಗೆ ಸೇರ್ವೆ ಮಾಡುವುದರಲ್ಲಿಯೂ ನಮ್ಮ ಪ್ರಾಂತ್ಯದಲ್ಲೆಲ್ಲ ವೀರಭದ್ರಾಚಾರಿ ಪ್ರಸಿದ್ಧನಾದನು. ಹತ್ತು ಜನ ಕಮ್ಮಾರರು-ಬಡಗಿಗಳು- ಮಣ್ಣುಗಾರೆ ಕೆಲಸಗಾರರ ಕಾರ್ಯವನ್ನೆಲ್ಲ ಅವನೊಬ್ಬನೇ ಮಾಡಿ ನಮ್ಮ ಪ್ರಾಂತ್ಯದಲ್ಲಿ ನೂರಾರು ಮನೆಗಳನ್ನು ಕಟ್ಟಿದನು. ನಮ್ಮ ಹಳ್ಳಿಗಳಲ್ಲಿ ಎಲ್ಲೆಲ್ಲಿ ನೋಡಿದರೂ ವೀರಭದ್ರಾಚಾರಿ ಕಟ್ಟಿದ ಮನೆಗಳೇ. ಆ ಮನೆಗಳ ಬಿಗಿಯನ್ನೂ ಚೆಂದವನ್ನೂ ಆಯವನ್ನೂ ನೋಡಿದರೆ ನೂರಾರು ವರ್ಷಗಳು ಆ ಮನೆಗಳಿಗೆ ಯಾವ ಅಪಾಯವೂ ಇಲ್ಲವೆಂದು ಯಾರಿಗಾದರೂ ಕಣ್ಣಿಗೇ ಕಾಣುತ್ತಿದ್ದಿತು.

ನಮ್ಮೂರ ಪೂಜಾರಿ ನರಸಿಂಹಯ್ಯನ ಮನೆಯನ್ನು ವೀರಭದ್ರಾಚಾರಿ ಕಟ್ಟಿದ್ದನಷ್ಟೆ. ಪಟ್ಟಣಗಳಲ್ಲಿದ್ದರೆ ಆ ಮನೆಗೆ ಅರವತ್ತು ಎಪ್ಪತ್ತು ಸಾವಿರ ಬೀಳುತ್ತಿದ್ದಿತು. ಹಳ್ಳಿಯೇ ಆದರೂ ನಮ್ಮ ಊರಿನಲ್ಲಿ ಆಗಿನ ಕಾಲದಲ್ಲಿಯೆ, ಅದಕೆ ಹತ್ತು ಸಾವಿರ ರೂಪಾಯಿ ಬಿದ್ದಿತ್ತು. ಬೆಲೆಯ ದೃಷ್ಟಿಯಿಂದಲೂ ಉಪಯೋಗಿಸಿದ ಸಾಮಾನುಗಳ ಯೋಗ್ಯತೆಯಿಂದಲೂ ನರಸಿಂಹಯ್ಯನ

ಮನೆಯೇ ವೀರಭದ್ರಾಚಾರಿ ಅದುವರೆಗೆ ಕಟ್ಟಿದ ಮನೆಗಳಲ್ಲೆಲ್ಲ ಶ್ರೇಷ್ಠವಾದುದು. ಹಿಂದೆ ನರಸಿಂಹಯ್ಯ ದೇವರ ಪೂಜೆ ಮಾಡುತ್ತಿದ್ದರೂ ವ್ಯವಸಾಯಗಾರನಾಗಿದ್ದುದರಿಂದ, ಊರಿನ ಜೋಯಿಸರಿಗೆ ಪದ್ಧತಿಯಂತೆ ಒಂದು ಹೊರೆ ರಾಗಿ ಹುಲ್ಲನ್ನು ಕಣದಲ್ಲಿ ಕೊಡುತ್ತಿದ್ದನು. ಅದು ಅನೇಕ ತಲೆಮಾರುಗಳಿಂದ ನಡೆದುಕೊಂಡು ಬಂದ ಪದ್ಧತಿ. ಆದರೆ ಈಚೆಗೆ ನರಸಿಂಹಯ್ಯ ತಾನೇ ದೇವರ ಪೂಜಾರಿಯಾಗಿರುವಾಗ, ತಾನು ಜೋಯಿಸರಂತೆಯೇ ಮನುಷ್ಯಶಕ್ತಿಯನ್ನು ಮೀರಿದ ಶಕ್ತಿಯನ್ನು ಅವಲಂಬಿಸಿಕೊಂಡಿರುವಾಗ ಈ ಹುಲ್ಲಿನ ಕಾಣಿಕೆಯನ್ನು ಜೋಯಿಸರಿಗೆ ತಾನು ಕೊಡುವುದು ಅನವಶ್ಯಕವೆಂದು ಭಾವಿಸಿದನು. "ಜೋಯಿಸರದು ನಕ್ಷತ್ರ ಗ್ರಹಗಳ ಪೂಜೆ. ನನ್ನದು ಅವುಗಳಿಗಿಂತ ಹೆಚ್ಚಾದ ಆಂಜನೇಯನ ಪೂಜೆ. ನನ್ನದೇನು ಕಡಿಮೆ?" ಎಂದು ಕೊಂಡನು. ಆ ವರುಷ ಜೋಯಿಸರು ಅವನ ಕಣಕ್ಕೆ ಹುಲ್ಲಿಗಾಗಿ ಬಂದಾಗ, ಪೂಜಾರಿಯು "ಇನ್ನು ನನ್ನ ಮೇಲೆ ನಿಮ್ಮ ಗ್ರಹಗಳ ಆಟ ನಡೆಯುವುದಿಲ್ಲ. ನಿಮಗೆ ಗ್ರಹಗಳಿದ್ದರೆ ನನಗೆ ಆಂಜನೇಯ ಇದೆ. ಹೋಗಿ!" ಎಂದನು. ತನಗೆ ಕೊಡುವವರ ಸಂಖ್ಯೆ ದಿನದಿನಕ್ಕೆ ಕಡಿಮೆಯಾಗುತ್ತಲೇ ಹೋಗುತ್ತಿದ್ದುದರಿಂದ ಜೋಯಿಸರಿಗೆ ಇದರಿಂದ ಆಶ್ಚರ್ಯವಾಗಲಿಲ್ಲ. ಅವನು ಮಾತನಾಡದೆ ಬಂದ ದಾರಿ ಹಿಡಿದು ಹೊರಟನು.

ಆದರೆ ಪೂಜಾರಿ ನರಸಿಂಹಯ್ಯ, ಸ್ವಲ್ಪ ದಿನಗಳಲ್ಲಿಯೇ ಜೋಯಿಸರಲ್ಲಿಗೆ ಗೃಹಪ್ರವೇಶದ ದಿನವನ್ನು ಕೇಳಲು ಬರಬೇಕಾಯಿತು. ಹನುಮಂತರಾಯನನ್ನು ಎಷ್ಟೇ ಸ್ವಾಧೀನದಲ್ಲಿಟ್ಟುಕೊಂಡಿದ್ದರೂ ಅವನು ಗ್ರಹಗಳ ಮತ್ತು ನಕ್ಷತ್ರಗಳ ಗತಿಯನ್ನು ಜೋಯಿಸನ ಕೈಯಿಂದ ಕಿತ್ತುಕೊಳ್ಳುವುದು ಸಾಧ್ಯವಿಲ್ಲ. ಜೋಯಿಸನಲ್ಲಿ ಹೋಗಲು ಪೂಜಾರಿ ನರಸಿಂಹಯ್ಯನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಅವನ ಹೆಂಡತಿ "ಹಿಂದಲಿಂದ ಬಂದ ಜೋಯಿಸರು. ಅವರ ಮಾತಿನಂತೆ ಗೃಹಪ್ರವೇಶ ನಡೆಸಿದವರಿಗೆಲ್ಲ ಒಳ್ಳೆಯದಾಗಿದೆ. ಅವರನ್ನೇ ದಿವಸ ಕೇಳಿ ಬನ್ನಿ" ಎಂದು ಬಲವಂತ ಮಾಡಿದಳು. ನರಸಿಂಹಯ್ಯನು ಆ ಜೋಯಿಸನ ಮಾತೆಲ್ಲ ಬರಿಯ ಬುರುಡೆ. ಆ ಗ್ರಹಗಳಿಗೂ ನಕ್ಷತ್ರಗಳಿಗೂ ಪಾಪ, ಬೇರೆ ಕೆಲಸವಿಲ್ಲವೆ ನನ್ನನ್ನೂ ನನ್ನ ಮನೆಯನ್ನೂ ಹುಡುಕಿಕೊಂಡು ತಿರುಗೋಕೆ? ಎಂದುಕೊಂಡು ಜೋಯಿಸನಲ್ಲಿ ಹೋದನು. ಹೊಸ ಮನೆಗೆ ಯಾವತ್ತು ಹೋಗಬಹುದೆಂದು ನರಸಿಂಹಯ್ಯ ಕೇಳಿದುದಕ್ಕೆ ಜೋಯಿಸನು "ಅದರ ಆಯ ನಿನ್ನ ಹೆಸರಿನ ಬಲಕ್ಕೆ ಸರಿಯಾಗಿಲ್ಲ. ನೀನು ಆ ಮನೆಯಲ್ಲಿ ವಾಸಮಾಡಿದರೆ ನಿನಗೆ ಏಳಿಗೆಯಿಲ್ಲ. ಪ್ರಬಲವಾದ ಶಾಂತಿ ಮಾಡಬೇಕು. ಖರ್ಚು ವಿಪರೀತವಾಗುತ್ತೆ. ಐವತ್ತು ರೂಪಾಯಿಗಳಿಗೆ ಕಡಿಮೆ ಆಗುವುದಿಲ್ಲ" ಎಂದುಬಿಟ್ಟನು. ಜೋಯಿಸನಿಗೆ ತನ್ನ ಮೇಲೆ ಅಸಮಾಧಾನವಿರುವುದು ನರಸಿಂಹಯ್ಯನಿಗೆ ತಿಳಿದಿದ್ದುದರಿಂದ ಅವನು "ನಿನ್ನ ಪುರಾಣ ಕೇಳೋಕಲ್ಲ ನಾನಿಲ್ಲಿ ಬಂದಿರುವುದು. ನಿನ್ನ ಉಜೂರೇ ಇಲ್ಲದೆ ಗೃಹಪ್ರವೇಶ ಮಾಡಿಕೊಳ್ಳುತ್ತೇನೆ" ಎಂದು ಹೊರಟುಹೋದನು.

ಪೂಜಾರಿ ನರಸಿಂಹಯ್ಯ ಮನೆಗೆ ಬಂದವನೇ ಹೆಂಡತಿಯೊಂದಿಗೆ "ನಾನು ಮೊದಲೇ ಹೇಳಲಿಲ್ಲವೆ? ನನ್ನಿಂದ ೫೦ ರೂಪಾಯಿ ಕೀಳೋಕೆ ಜೋಯಿಸ ಹೊಂಚು ಹಾಕ್ತಿದಾನೆ. ಇದ್ಕೆಲ್ಲ ನಾನು ಬಗ್ಗತೇನೆಯೆ? ನಾಡದ್ದು ಹೊಸ ಮನೆಗೆ ಹೋಗುವುದೆ!" ಎಂದನು. ಅವನ ಹೆಂಡತಿ "ಎಲ್ಲಾದರೂ ಉಂಟೆ! ಇಷ್ಟೊಂದು ಖರ್ಚು ಮಾಡುವುದನ್ನು ಮಾಡಿಯಾದ ಮೇಲೆ ಶಾಸ್ತ್ರವಿಲ್ಲದೆ ದನಗಳನ್ನು ಕೊಟ್ಟಿಗೆಗೆ ಕೂಡುವಂತೆ ಹೋಗಿ ಸೇರಿಕೊಂಡು ಬಿಡುವುದೆ? ಆಗದು, ಬದುಕಿ ಬಾಳೋ ಮನೆ. ಮಕ್ಕಳುಮರಿಗೆ ಒಳ್ಳೆದಾಗಬೇಡವೆ? ನನ್ನ ಕಾಲವೇನೋ ಆಗಿಹೋಯಿತು. ಆದರೆ ಮಕ್ಕಳ ತಲೆ ಮೇಲೆ ಕಲ್ಲು ಎತ್ತಿ ಹಾಕಬೇಡಿ" ಎಂದಳು. ಹಳ್ಳಿಗಳಲ್ಲಿ ಯಾವ ಸಮಾಚಾರವೂ ಬಹು ಬೇಗ ಹರಡುತ್ತದೆ. ನರಸಿಂಹಯ್ಯ, ಗೃಹಪ್ರವೇಶವೇ ಇಲ್ಲದೆ, ಶಾಂತಿ ಮಾಡದೆ ಕೆಟ್ಟ ಗ್ರಹದಲ್ಲಿ ಹೊಸ ಮನೆಗೆ ಸೇರುವ ಸುದ್ದಿ ತಿಳಿದು ಊರವರು "ಅವನ ಹಣದ ಕೊಬ್ಬು ಅವನನ್ನು ಹಾಗೆ ಆಡಿಸುತ್ತಿದೆ" ಎಂದರು. ಅದು ನರಸಿಂಹಯ್ಯನ ಕಿವಿಗೂ ಬಿತ್ತು. ಕೆಲವು ಹಿರಿಯರಾದ ಮಹಿಳೆಯರು ನರಸಿಂಹಯ್ಯನ ಮನೆಗೆ ಹೋಗಿ ಇದೇನು ಕೇಡು ಎಂದು ಅವನ ಹೆಂಡತಿಯನ್ನು ಬೈದರು. ಕೊನೆಗೆ ನಿರ್ಧಿಯಿಲ್ಲದೆ ನರಸಿಂಹಯ್ಯ ಗೃಹಪ್ರವೇಶಕ್ಕೂ ಶಾಂತಿಗೂ ಒಪ್ಪಿದ. "ಆದರೆ ಜೋಯಿಸನಿಂದ ಮಾಡಿಸುವುದಿಲ್ಲ. ವೀರಭದ್ರಾಚಾರಿಯಿಂದಲೇ ಮಾಡಿಸುತ್ತೇನೆ" ಎಂದು ತೀರ್ಮಾನಿಸಿದ.

ನರಸಿಂಹಯ್ಯ ಹಾಗೆ ತೀರ್ಮಾನಿಸಲು ಒಂದು ಕಾರಣವಿತ್ತು. ಕಮ್ಮಾರ ವೀರಭದ್ರಾಚಾರಿ ಆಗಿಂದಾಗ್ಗೆ "ನನಗೂ ಜ್ಯೋತಿಷ್ಯ ಬರುತ್ತೆ. ಮನೆಯನ್ನು ಕಟ್ಟುವವನಿಗೆ ಅದರೊಳಕ್ಕೆ ಹೋಗುವುದನ್ನು ಹೇಳುವುದಕ್ಕೆ ತಿಳಿಯುವುದಿಲ್ಲವೆ?" ಎನ್ನುತ್ತಿದ್ದನು. ವೀರಭದ್ರಾಚಾರಿ ಯಾವ ಕಾರ್ಯವನ್ನೂ ಮಾಡಬಲ್ಲನೆಂಬ ನಂಬಿಕೆ ನಮ್ಮೂರ ಇತರರಿಗೆ ಇದ್ದಂತೆ ನರಸಿಂಹಯ್ಯನಿಗೂ ಇದ್ದಿತು. ಅಲ್ಲದೆ ಜೋಯಿಸನ ಮುಖಭಂಗ ಮಾಡಲು ಸಿಕ್ಕಿದ ಈ ಅವಕಾಶವನ್ನು ಅವನು ಬಿಡಲು ಇಷ್ಟಪಡಲಿಲ್ಲ. "ಈ ಜೋಯಿಸ ತನ್ನ ಕೋಳಿ ಕೂಗದಿದ್ದರೆ ಬೆಳಗೇ ಆಗುವುದಿಲ್ಲವೆಂದು ತಿಳಿದಿದ್ದಾನೆ" ಎಂದುಕೊಂಡನು ಅವನು. ಅದೇ ದಿನ ನರಸಿಂಹಯ್ಯ ವೀರಭದ್ರಾಚಾರಿಯನ್ನು ಕಂಡು "ಗೃಹಪ್ರವೇಶ ಮುಹೂರ್ತ ನೀನೇ ನಿರ್ಣಯಿಸಿಕೊಡು" ಎಂದನು. ಸ್ವಲ್ಪ ಅನುಮಾನಿಸಿದ ನಂತರ ವೀರಭದ್ರಾಚಾರಿ "ಆಗಲಿ" ಎಂದನು.

ವೀರಭದ್ರಾಚಾರಿಗೆ ಸ್ವಲ್ಪಮಟ್ಟಿಗೆ ಓದುವುದು ಬರುತ್ತಿತ್ತು. ಅವನು ಕೂಡಲೇ ಪಂಚಾಂಗ ತರಿಸಿ ಹೇಗೋ ಒಂದು ದಿನವನ್ನು ಗೊತ್ತುಮಾಡಿದನು. ಅನಂತರ ಗೃಹಪ್ರವೇಶ ಸಂದರ್ಭಗಳಲ್ಲಿ ಜೋಯಿಸ ಹೇಗೆ ಹೇಗೆ ಮಾಡುತ್ತಾನೆ ಇವುಗಳ



ನ್ನೆಲ್ಲ ಜ್ಞಾಪಿಸಿಕೊಂಡುದಲ್ಲದೆ ಗೃಹಪ್ರವೇಶವಾಗಿದ್ದವರ ಮನೆಯ ಯಜಮಾನರಿಂದಲೂ ಸಂಗತಿಗಳನ್ನೆಲ್ಲ ತಿಳಿದುಕೊಂಡನು. ಹೂವು ಹಣ್ಣು ಎಲೆ ಅಡಿಕೆ ತೆಂಗಿನಕಾಯಿ ಹೊಸಬಟ್ಟೆ ಕಲಶಗಳು ದೀಪಗಳು ಬೇಯಿಸಿದ ಬಣ್ಣಬಣ್ಣದ ಅನ್ನ; ತನಗೆ ತನ್ನ ಹೆಂಡತಿಗೆ ಪಂಚೆ, ಸೀರೆ; ಕೊನೆಗೆ ಜೋಯಿಸ ಕೇಳಿದ್ದ ಶಾಂತಿಯ ವಿಷಯ ತಿಳಿದನಂತರ ವೀರಭದ್ರಾಚಾರಿಯೂ ಶಾಂತಿಯ ಕಡೆಗೆ ನೂರು ರೂಪಾಯಿ ಬೇಕೆಂದು ಕೇಳಿದನು. ನರಸಿಂಹಯ್ಯ ಪೂಜಾರಿಗೆ ಒಳ್ಳೆಯ ಪೀಕಲಾಟಕ್ಕೆ ಬಂತು. ಆದರೆ ಅವನೇನೂ ಮಾಡುವಂತೆ ಇರಲಿಲ್ಲ. ಈ ಕೊನೆಯ ಗಳಿಗೆಯಲ್ಲಿ ಆಚಾರಿ ಕೈಕೊಟ್ಟುಬಿಟ್ಟರೆ ಮಾಡಿದ ಅಡಿಗೆಯೆಲ್ಲ ವ್ಯರ್ಥವಾಗಿ ಊರವರ ಮುಂದೆ ತನ್ನ ಮಾನ ಹೋಗುವುದು ಮಾತ್ರವಲ್ಲದೆ ಜೋಯಿಸನ ತಲೆಯ ಮೇಲಿನ ಕೋಡು ಇನ್ನು ನಾಲ್ಕು ಬೆರಳು ಬೆಳೆಯುವುದೆಂಬ ಅಸೂಯೆಯಿಂದ ಅವನು ಆಚಾರಿ ಕೇಳಿದುದನ್ನೆಲ್ಲ ಕೊಟ್ಟುಬಿಟ್ಟನು. ಅವನ ಮುಖವು ಕೋಪದಿಂದ ಕೆಂಕಿಕೆಂಕಿಯಾಗಿತ್ತು. ಆಚಾರಿ ತನ್ನ ಕಾರ್ಯಗಳನ್ನೆಲ್ಲ ಮುಗಿಸಿ ಹೊಸ ರೇಶಿಮೆ ಅಂಚಿನ ಪಂಚೆಯುಟ್ಟುಕೊಂಡು ಹೊಸ ಸೀರೆಯುಟ್ಟಿದ್ದ ಹೆಂಡತಿಯನ್ನು ಜತೆಯಲ್ಲಿ ಕೂಡಿಸಿಕೊಂಡು ಪೂಜಾರಿ ಅಯ್ಯನಿಂದ ಎಲೆ ಅಡಿಕೆ ತೆಗೆದುಕೊಂಡು ತನ್ನ ಮನೆಗೆ ಹೊರಟನು. ಪೂಜೆಗಾಗಿ ಉಪಯೋಗಿಸಿದ್ದ ಅಕ್ಕಿ ಭತ್ತ ಬೆಲ್ಲ ನವಧಾನ್ಯ ಕಾಯಿ ಹಣ್ಣು, ಎರಡು ಆಳಿನ ಹೊರೆಯನ್ನು ಆಚಾರಿ ಹೊಸ ಮಂಕರಿಗಳಲ್ಲಿ ಹಾಕಿಸಿ ಹೊರಿಸಿಕೊಂಡು ಮನೆಗೆ ಹೊರಟನು. ಏಕಕಾಲದಲ್ಲಿ, ನಾಲ್ಕು ತಿಂಗಳು ಕಷ್ಟಪಟ್ಟು ಮನೆ ಕಟ್ಟಿದುದಕ್ಕಿಂತ ಈ ಒಂದು ದಿನದ ಕಾರ್ಯದಲ್ಲಿಯೇ ಹೆಚ್ಚು ಸಂಪಾದನೆಯಾಯಿತೆಂದು ಅವನಿಗೂ ಪೂಜಾರಿ ಅಯ್ಯನಿಗೂ ಹೊಳೆಯಿತು. ಗೃಹಪ್ರವೇಶಕ್ಕೆ ನಮ್ಮೂರ ಜೋಯಿಸನಿಗೆ ಯಾರೂ ಅಷ್ಟೊಂದು ಮರ್ಯಾದೆ ಮಾಡಿರಲಿಲ್ಲ.

ವೀರಭದ್ರಾಚಾರಿ ಗಂಧಾಕ್ಷತೆಗಳನ್ನು ಚೆನ್ನಾಗಿ ಹಚ್ಚಿ ನೆತ್ತಿಗೆ ದುಂಡಾದ ಕುಂಕುಮದ ಬಟ್ಟನಿಟ್ಟು ಕೊಂಡು ಪೂಜಾರಿಯಿಂದ ಉಡುಗೊರೆಯಾಗಿ ಸಂದಿದ್ದ ಹೊಸ ಪಂಚೆಯುಟ್ಟು ಕಟ್ಟುಮಸ್ತಾದ ಮೈಯ್ಯನ್ನು ಬೆಳಗಿಸುತ್ತಾ ಹೆಂಡತಿಯೊಡನೆ ಮನೆಗೆ ಹೊರಟಾಗ ಅವರಿಬ್ಬರೂ ಶಿವಪಾರ್ವತಿಯ ರಂತೆ ಕಂಡರು. ನಮ್ಮ ಊರವರು "ಭೇಷ್ ಇವನು ಹುಟ್ಟು ಜೋಯಿಸನಂತೆಯೇ ಕಾಣು ತ್ತಾನೆ. ಯಾವುದಕ್ಕೂ ಸೈ" ಎಂದು ಮೆಚ್ಚಿನ ಮಾತುಗಳನ್ನಾಡುತ್ತಾ ತಮ್ಮತಮ್ಮ ಮನೆಗಳಿಗೆ ಹೋದರು.

★

ಆದರೆ ಈ ಸಂಗತಿಯಿಂದ ಆಚಾರಿಯ ಮನ ಸ್ಸಿನ ಮೇಲೆ ವಿಚಿತ್ರವಾದ ಪರಿಣಾಮವುಂಟಾ ಯಿತು. ಅವನ ಮುಂದೆ ಒಂದು ಹೊಸ ಜಗತ್ತು, ಹೊಸ ಅವಕಾಶ, ಹೊಸ ಹುದ್ದೆ ತೆರೆದಂತಾ ಯಿತು. ಆ ಹುದ್ದೆ ಬಹು ಸುಲಭವಾಗಿಯೂ ಅವನಿಗೆ ತೋರಿತು. "ಜೋಯಿಸನಾಗುವುದು ಆಚಾರಿಯಾಗುವುದಕ್ಕಿಂತ ಸುಲಭ. ಅದರಲ್ಲಿ ಹೆಚ್ಚು ಲಾಭವೂ ಇದೆ. ಗಾಂಭೀರ್ಯ, ಗೌರವ, ಘನತೆಯೂ ಇವೆ. ಕೆಲಸವೂ ಕಡಿಮೆ. ನಾನು ಮೂರು ತಿಂಗಳು ಮನೆ ಕಟ್ಟುವುದೂ ಒಂದೇ ಒಂದು ದಿವಸ ಜೋಯಿಸನಾಗಿರುವುದೂ ಒಂದೇ" ಎಂದು ಅವನಿಗೆ ತೋರಿತು. ಈ ಹೊಸ ಉತ್ಸಾಹ ದಲ್ಲಿ ಅವನಿಗೆ ತಾನು, ನಮ್ಮಪ್ರಾಂತದಲ್ಲಿ ಕಟ್ಟಿರುವ ಆ ನೂರಾರು ಮನೆಗಳೂ ತಾನಿಲ್ಲದಿದ್ದರೆ ಆ ಮನೆಗಳೇ ಆಗುತ್ತಿರಲಿಲ್ಲವೆಂಬುದೂ ಆ ಮನೆ ಗಳಲ್ಲಿ ಪ್ರತಿನಿತ್ಯ ತನ್ನ ಹೆಸರು ಎಲ್ಲರ ಬಾಯಲ್ಲೂ ಇರುವುದೂ ಮರೆತೇ ಹೋಯಿತು. "ತಾನು ಮನೆಯ ಕಂಬ, ಜೋಯಿಸ ಬರಿಯ ಮನೆಯ ಬಣ್ಣ" ಎಂಬುದು ಅವನಿಗೆ ಮರೆಯಿತು. ನಿಜ ವಾಗಿ ಜೋಯಿಸನಾಗುವ ಮರುಳು, ಮರೀಚಿಕೆ ಅವನ ಮನವನ್ನಾಕ್ರಮಿಸಿತು. ಮರುದಿನವೇ ಅವನು ಜ್ಯೋತಿಷ್ಯ ಚಿಂತಾಮಣಿ, ಆರೂಢ ಪ್ರಶ್ನ ಚಂದ್ರಿಕೆ, ವಿದ್ಯಾಗುರು ಮುಂತಾದ ಗ್ರಂಥಗಳ ನ್ನೆಲ್ಲ ತರಿಸಿ ನಕ್ಷತ್ರಗಳನ್ನು ಉರು ಹಾಕತೊಡಗಿ ದನು. ಅವನ ಉಳಿ, ಗರಗಸ, ಕೈಬಾಚಿ, ಹತ್ತರಿ ಒಂದೊಂದು ಆಯುಧವೂ ಒಂದೊಂದು ರಾಜ್ಯ ವನ್ನು ಕಟ್ಟಲು ಸಮರ್ಥವಾದುವು, ಉಪೇಕ್ಷಿತ ವಾಗಿ ತುಮುರು ಹಿಡಿದು ಮೂಲೆ ಬಿದ್ದು ಕೊರ ಗುತ್ತಿದ್ದವು. ಆಚಾರಿ ಉಪಯೋಗಿಸುತ್ತಿದ್ದಾಗ ಯೌವನದ ಉತ್ಸಾಹದ ಹೊಸ ಹೊಳಪಿನಲ್ಲಿ ಜ್ವಲಿಸುತ್ತಿದ್ದ ಆ "ಹತ್ಯಾರು"ಗಳು ಅವನ ಔದಾಸೀನ್ಯಕ್ಕೆ ಪಾತ್ರವಾಗಿ ನಿರ್ಮಾಲ್ಯವಾಗಿ ಮುಪ್ಪಡಿಸಿದಂತೆ ತೋರುತ್ತಿದ್ದವು. ಆಚಾರಿ ಮಾತ್ರ ಅವುಗಳ ಕಡೆ ನೋಡುವುದನ್ನೇ ಬಿಟ್ಟು ನಾಡೀಕೂಟ, ಗ್ರಹಮೈತ್ರಿಕೂಟ, ಗ್ರಹಕೂಟ, ದಶಾಭುಕ್ತಿ ಇವುಗಳನ್ನು ಪಟಕಿಸುತ್ತಿದ್ದನು.

ಅಲ್ಲಿಂದ ಮುಂದೆ ವೀರಭದ್ರಾಚಾರಿಯೇ ನಮ್ಮೂರ ಜೋಯಿಸನಾದನು. ಲಗ್ನ ಕಟ್ಟು ವುದು, ಜಾತಕ ಬರೆಯುವುದು ಗೃಹಪ್ರವೇಶ, ಶಕುನ ಮಾಟ ಕಟ್ಟು ಕವಣೆ ಯಾವುದಕ್ಕೂ ಜನ ಅವನಲ್ಲಿಗೆ ಬರತೊಡಗಿದರು. ಆಚಾರಿ ಏನೋ ಇದರಿಂದ ತನ್ನ ಘನತೆಯೂ ಯೋಗ್ಯತೆಯೂ ಏರಿತೆಂದೇ ಭಾವಿಸಿದನು. ಮೊದಲೇ ಕಡಿಮೆ ಯಾಗಿದ್ದ ಉದ್ಯೋಗ ಜೋಯಿಸರಿಗೆ ಇನ್ನೂ ಕಡಿಮೆಯಾಯಿತು.

ಸ್ವಲ್ಪ ದಿನಗಳಲ್ಲಿಯೇ ವೀರಭದ್ರಾಚಾರಿಗೆ ತನಗೂ ಉದ್ಯೋಗವಿಲ್ಲ ಎಂಬ ಭಾವನೆ ಬರ ತೊಡಗಿತು. ನಮ್ಮೂರಿನಲ್ಲಿ ಮನೆಗಳೆಲ್ಲ ಒಂದು ಕಡೆಯಿಂದ ಬೀಳತೊಡಗಿದ್ದವು. ಪಿಳ್ಳೈಕಾಲು ಮುರಿದುಕೊಂಡರೆ ಸರಿಮಾಡುವವರಿಲ್ಲ. ಚಿಲಕ ಮುರಿದರೆ ಸರಿಮಾಡುವವರಿಲ್ಲ. ಗುದ್ದಲಿ ಪಿಕಾಶಿ ಕುಡಗೋಲು ಕೊಡಲಿ ಯಾವುದನ್ನೂ ಹೆಣೆಯುವವರಿಲ್ಲ. ಗಾಡಿಪಟ್ಟೆ ಬಿಡುವವರಿಲ್ಲ, ನೇಗಿಲು ಇಕ್ಕುವವರಿಲ್ಲ. ಹಜಾಮನ ಕತ್ತಿ ಹತ್ತರಿ ಹಿಡಿದುಕೊಡುವವರು ಯಾರೂ ಇಲ್ಲ. ಹಳ್ಳಿಯಲ್ಲಿ ಬಡಗಿ ಕಮ್ಮಾರ ಎಲ್ಲವೂ ವೀರ ಭದ್ರಾಚಾರಿಯೇ ಆಗಿದ್ದದ್ದರಿಂದ ಅವನು ಮಾಡುವ ಕೆಲಸವೆಲ್ಲ ನಿಂತುಹೋಗಿ ಊರು ಖಿಲವಾಗತೊಡಗಿತು. ಗ್ರಾಮದವರು ಪ್ರತಿ ಯೊಂದು ಕಾರ್ಯಕ್ಕೂ ನೆರೆಯ ಗ್ರಾಮಕ್ಕೆ ಹೋಗ ಬೇಕಾಯಿತು. ಗೃಹಪ್ರವೇಶ ಮಾಡಿಸಲು ವೀರಭದ್ರಾಚಾರಿ ಕಾಯ್ದುಕೊಂಡು ಕೂತಿ ದ್ದರೂ ಒಂದಾದರೂ ಹೊಸ ಮನೆ ಏಳಲಿಲ್ಲ. ಬೇರೆ ಊರುಗಳಿಂದ ಕಮ್ಮಾರ ಬಡಗಿಗಳನ್ನು ತರುವುದು ಹಳ್ಳಿಯವರಿಗೆ ಸಾಧ್ಯವಿರಲಿಲ್ಲ. ಮೊದಲು ಒಬ್ಬ ಜೋಯಿಸ ಇದ್ದಲ್ಲಿ ಇಂದು ಇಬ್ಬರಾಗಿದ್ದರು. ಇಬ್ಬರಿಗೂ ಕೆಲಸವಿರಲಿಲ್ಲ, ಸೋಮಾರಿಗಳು, ಪರಾವಲಂಬಿಗಳು, ಸುಮ್ಮನೆ ಆಕಾಶ ನೋಡುವವರು. ವೀರಭದ್ರಾಚಾರಿ ಯಂತಹ ಒಬ್ಬನು ಇದ್ದರೆ ನೂರಾರು ಮನೆಗಳು ವರ್ಷ ವರ್ಷವೂ ಎದ್ದು ಇನ್ನೂ ಇಂತಹ ನಾಲ್ಕಾರು ಮೈಗಳ್ಳ ಜೋಯಿಸರಿಗೆ ಕೆಲಸ ಸಿಕ್ಕುತ್ತಿತ್ತು. ಹಿಂದೆ ವೀರಭದ್ರಾಚಾರಿ, ವೀರ ಭದ್ರಾಚಾರಿಯೇ ಆಗಿದ್ದಾಗ ಅವನಿಗೆ ಒಂದು ಗಳಿಗೆಯೂ ವಿರಾಮವಿರಲಿಲ್ಲ. ಕೈತುಂಬ ಕೆಲಸ. ಬೆಳಗಿನಿಂದ ರಾತ್ರಿಯವರೆಗೆ ಒಂದೇ ಸಮನಾಗಿ ದುಡಿಯುತ್ತಿದ್ದನು. ಗಾಳಿಗೂ ಬಿಸಿಲಿಗೂ ಒಡ್ಡಿದ ಅವನ ಮೈ ಕಂಚಿನಂತೆ ಗಟ್ಟಿ ಯಾಗಿತ್ತು. ಮನಸ್ಸು ಗಾಳಿಯಂತೆ ಹಗುರ ವಾಗಿತ್ತು. ಅವನು ಸೃಷ್ಟಿಕರ್ತನಾದ ಪರ ಮಾತ್ಮನ ಒಂದು ಸಣ್ಣ ನಕಲು ಆಗಿ ತೋರು ತ್ತಿದ್ದನು. ಅವನಿಗೆ ಬರದ ಯಾವ ಕೈಕೆಲಸವೂ ಇರಲಿಲ್ಲ. ಆಗ ನಮ್ಮೂರಿನಲ್ಲಿ ಒಂದು ಮನೆಯ ಕಿಟಕಿ ಕದವೂ ಮುರಿದಿರಲಿಲ್ಲ. ಒಂದು ತೊಲೆಯೂ ಬಗ್ಗಿರಲಿಲ್ಲ. ಒಂದು ಕಂಬವೂ ಸೊಟ್ಟವಾಗಿರಲಿಲ್ಲ. ಅನ್ನದಲ್ಲಿ ಕಲ್ಲು ಇದ್ದರೆ ಹೇಗೆ ಸಹಿಸುವದಿಲ್ಲವೋ ಹಾಗೆ ವೀರಭದ್ರಾ ಚಾರಿ ಬೀಳುತ್ತಿರುವ ಮನೆಗಳನ್ನು ಸಹಿಸುತ್ತಿರ ಲಿಲ್ಲ. ವಿಶ್ವಕರ್ಮನೆಂಬ ಹೆಸರು ಅವನಿಗೆ ಅನ್ವರ್ಥವಾಗಿತ್ತು. ಐವತ್ತು ವರುಷಗಳು ದುಡಿದಿದ್ದರೂ ಅವನಿಗೆ ವಯಸ್ಸಾದಂತೆಯೇ ಕಂಡಿರಲಿಲ್ಲ. ಆದರೆ ಈಚೆಗೆ ಎರಡೇ ವರುಷ ದಲ್ಲಿ ಅವನ ಹೊಟ್ಟೆ ದಪ್ಪವಾಗಿತ್ತು. ಮೈ ಢಿಕ್ಕಾ ಪಾಲಾಗಿ ಬೆಳೆದಿತ್ತು. ಮುಖದಲ್ಲಿ ಸೋಮಾರಿ ತನದ ವಿಕಾರಗಳೆಲ್ಲ ಕಾಣುತ್ತಿದ್ದವು. ಹಿಂದೆ ಒಂದಾದರೂ ಬಿಳಿಯ ಕೂದಲಿಲ್ಲದ ಅವನ ಮೀಸೆ ಇಂದು ಪೂರ್ತಿ ಬಿಳಿದಾಗಿತ್ತು. "ಈ ಗ್ರಹಗಳ ಕಾಟದಿಂದ ನಮ್ಮ ಮನೆಗಳು ನಿರ್ಮೂಲ ವಾದುವು. ಈ ನಕ್ಷತ್ರಗಳನ್ನೇ ನಾಶಮಾಡ ಬೇಕು" ಎಂದು ಜನ ಜ್ಯೋತಿಷ್ಯವನ್ನೇ ಬಯ್ಯ ತೊಡಗಿದರು. ಮನೆ ಒಳಗೆ ಹರಕಲು ರೇಶಿಮೆ ಅರಿವೆ ಚೂರಿನಲ್ಲಿ ಜೋತಿಷ್ಯಪುಸ್ತಕ ಪಂಚಾಂಗ ಕವಡೆ ಸ್ಲೇಟುಗಳನ್ನು ಕಟ್ಟುತ್ತಾ ಬಿಚ್ಚುತ್ತಾ ಯಾರಾದರೂ ಜೋತಿಷ್ಯ ಕೇಳಲು ಬರು ತ್ತಾರೋ ಎಂದು ಕಿಟಕಿಯಿಂದ ನೋಡುತ್ತಾ ಕಾಯುತ್ತಿದ್ದ ವೀರಭದ್ರಾಚಾರಿ ಇವೊಂದನ್ನೂ ಅರ್ಥಮಾಡಿಕೊಳ್ಳದೆ ಮೀಸೆ ತಿರುವುತ್ತಾ ಕುಳಿ ತಿದ್ದನು. ಹಿಂದೆ ಯಾವಾಗಲೂ ಒಂದು ಜಾತ್ರೆ ಯಂತೆ ಜನಭರಿತವಾಗಿದ್ದ ಅವನ ಮನೆ, ಅವನು ಹೀಗೆ ನಿರುಪಯೋಗಿಯಾದುದರಿಂದ ನಿರ್ಜನ ವಾಗಿತ್ತು.

★

ಎರಡು ವರುಷಗಳು ಕಳೆಯುವುದರೊಳ ಗಾಗಿ ವೀರಭದ್ರಾಚಾರಿಯ ಮನೆ ಇತರರ

ಮನೆಗಳಂತೆ ಸೋರಲು ಪ್ರಾರಂಭಿಸಿತು. ಸೂರಿಗೆಲ್ಲ ಗೆದ್ದಲು ಹತ್ತಿತು. ಹೊಡೆಗಳೂ ಪಿಳ್ಳೆ ಕಾಲುಗಳೂ ಬಾಗಿ ತಮ್ಮ ಜಾಗಬಿಟ್ಟು ನಾಲ್ಕಾರು ಮೊಳ ಆಚೆ ಈಚೆ ಕದಲಿದವು. ಸೂರಿಗೆ ಹಾಕಿದ್ದ ಗಳುಗಳೆಲ್ಲ ಒಂದೊಂದಾಗಿ ನೆಲಕ್ಕೆ ಬೀಳತೊಡಗಿದವು. ವೀರಭದ್ರಾಚಾರಿ ಜೋಯಿಸನಾಗುವುದಕ್ಕೆ ಮುಂಚೆ ಮನೆ ಸ್ವಲ್ಪ ಹೆಚ್ಚು ಕಡಿಮೆಯಾದರೂ ತತ್‌ಕ್ಷಣ ಉಳಿ ಬಾಚಿ ಹಿಡಿದುಕೊಂಡು ಅದನ್ನು ಸರಿಮಾಡಿಬಿಡುತ್ತಿದ್ದನು. ಸೂರಿನ ಹೆಂಚುಗಳನ್ನು ಇಳಿಸುವುದು ಏರಿಸುವುದು ಅವನಿಗೆ ಲೀಲಾಜಾಲವಾಗಿತ್ತು. ಊರಿನ ಮನೆಗಳನ್ನೆಲ್ಲ ಸರಿಪಡಿಸುತ್ತಿದ್ದವನಿಗೆ ತನ್ನ ಮನೆ ಭಾರವೆ? "ಬೆಟ್ಟ ನುಂಗುವವನಿಗೆ ಕದ ಹಪ್ಪಳ." ಗಂಡನ ಈ ಉತ್ಸಾಹವನ್ನು ನೋಡಿ ಹೆಂಡತಿ ಸಹ ಮನೆಯನ್ನು ಸಾರಿಸಿ ಸುಣ್ಣ ಬಣ್ಣ ಮಾಡಿ ಒಳ್ಳೆ ಕನ್ನಡಿಯಂತೆ ಇಟ್ಟಿದ್ದಳು. ಆದರೆ ಈಚೆಗೆ ಆಚಾರಿ, ನಕ್ಷತ್ರ, ಗ್ರಹ, ಆರೂಢ ಪ್ರಶ್ನಚಂದ್ರಿಕೆ, ವಿದ್ಯಾಗುರುಗಳ ಬೆನ್ನುಹತ್ತಿ ಉಳಿ ಬಾಚಿಗಳನ್ನು ಮೂಲೆಗೆ ಹಾಕಿದ ಮೇಲೆ ಅವನ ಸ್ವಾಭಾವಿಕವಾದ ಕೈಕೆಲಸದ ಶಕ್ತಿ ಮರೆಯಾಯಿತು. ತನ್ನ ಮನೆ ಒಂದು ಕಡೆಯಿಂದ ಬೀಳುತ್ತಿದ್ದರೂ ಹೆಳವನಾದವನು ತೆಂಗಿನ ಮರದ ಮೇಲಿನ ಕಾಯಿಗಳನ್ನು ನೋಡುವಂತೆ ಆಚಾರಿ ಸುಮ್ಮನೆ ಸೂರನ್ನೂ ಆಯುಧಗಳನ್ನೂ ನೋಡುತ್ತಿದ್ದನು. ಒಂದು ದಿನ ರಾತ್ರಿ ಬಹಳ ಗಟ್ಟಿಯಾದ ಮಳೆ ಬಂದಾಗ ಸೂರಿನ ಹಂಚುಗಳೆಲ್ಲ ಜೊರ್‍ರೆಂದು ಕೆಳಕ್ಕೆ ಸರಿದು ಮನೆ ಪೂರ್ತ ನೆಲಸಮವಾಯಿತು. ದೇವರ ದಯದಿಂದ ಯಾರಿಗೂ ಅಪಾಯವಾಗಲಿಲ್ಲ.

ತನ್ನ ಬಾಳಿನಲ್ಲಿ ನೂರಾರು ಮನೆಗಳನ್ನು ಕಟ್ಟಿದ್ದ ಆಚಾರಿಗೆ, ತನಗಾಗಿ ಹೊಸ ಮನೆಯೊಂದನ್ನು ಕಟ್ಟಿಕೊಳ್ಳುವುದು ಕಷ್ಟವಾಗಿರಬೇಕಾಗಿರಲಿಲ್ಲ. ಹಿಂದೆ ಜೋಯಿಸನಾಗುವುದಕ್ಕೆ ಮುಂಚೆ, ಅವನು ಎಷ್ಟೋ ಸಲ ತನ್ನ ಹಳೆಯ ಮನೆಯನ್ನು ಕೆಡವಿ ಹೊಸ ಮನೆಯನ್ನು ಕಟ್ಟಿಕೊಳ್ಳಬೇಕೆಂದು ಯೋಚಿಸಿದ್ದನು. ಆದರೆ ಅದು ಅವನಿಗೆ ಬರಿಯ ಎಂಟು ಹತ್ತು ದಿನಗಳ ಕೆಲಸವಾಗಿ ತೋರಿದುದರಿಂದ, ಇದೇನು ಮಹ? ಸಣ್ಣ ಕೆಲಸ, ಯಾವತ್ತಿದ್ದರೂ ಮಾಡಿಕೊಳ್ಳಬಹುದೆಂದು ಸುಮ್ಮನಾಗಿದ್ದನು. ಅಲ್ಲದೆ ಇತರರ ಮನೆಗಳನ್ನು ಕಟ್ಟುವುದರಲ್ಲಿ ತೊಡಗಿದ್ದ ಅವನಿಗೆ ಆಗ ಒಂದು ಗಳಿಗೆಯೂ ವಿರಾಮವಿರಲಿಲ್ಲ. ಆದರೆ ಈಗ ತನ್ನ ಮನೆ ಬಿದ್ದ ಮೇಲೆ ಹೊಸ ಮನೆಯನ್ನು ಕಟ್ಟದೆ ಅವನಿಗೆ ನಿರ್ವಾಹವೇ ಇರಲಿಲ್ಲ. ಕಟ್ಟಲು ಪ್ರಾರಂಭಿಸಿದನು.

ವೀರಭದ್ರಾಚಾರಿ ತಾನೇ ಜೋಯಿಸನಾದುದರಿಂದ ಮನೆಗೆ ತಳಹದಿ ಹಾಕುವ ದಿನ ಗುದ್ದಲಿ ಪೂಜೆಯ ಆಟಾಟೋಪವನ್ನೇ ಬಹಳ ಮಾಡಿದನು. ಊದುಕಡ್ಡಿ, ಕಾಯಿ, ಕುಂಕುಮ, ಬಣ್ಣದ ಅನ್ನ, ಹಣತೆಗಳು ರಂಗುರವಾಲ್ ಮಾಡಿದನು. ಊರಿನವರಿಗೆ, "ಎಷ್ಟು ಕಲ್ಪ ಕಳೆದರೂ ಅಲುಗಾಡದ ರೀತಿಯಲ್ಲಿ ಆಯ ಹಾಕಿದ್ದಾನೆ. ಅದಕ್ಕೇ ಇಷ್ಟು ಮಂತ್ರ ತಂತ್ರ" ಎಂಬ ಭಾವನೆ ಬಂದಿತು. ಗುದ್ದಲಿ ಪೂಜೆಯಾದ ನಂತರ ತಳಪಾಯವನ್ನು ತೆಗೆಯಬೇಕಷ್ಟೆ. ಹಿಂದಲ ಕಾಲದಲ್ಲಾಗಿದ್ದರೆ ಆಚಾರಿ ತಾನೇ ಪಿಕಾಸಿ ಹಿಡಿದುಕೊಂಡು, ಇಬ್ಬರು ಮುವ್ವರು ಮುಯ್ಯಾಳುಗಳೊಂದಿಗೆ ಸೊಂಟದವರೆಗೆ ತಳಹದಿಯನ್ನು ಇಡಿದುಬಿಡುತ್ತಿದ್ದನು. ಇವನ ಸಹಾಯ ಊರವರಿಗೆ ಬೇಕಾಗಿದ್ದುದರಿಂದ ಮುಯ್ಯಾಳುಗಳು ಬರುತ್ತಲೂ ಇದ್ದರು. ಆದರೆ ಈಗ ಆಚಾರಿ ಎಲ್ಲ ಕಾರ್ಯಗಳನ್ನೂ ಹಣ ಕೊಟ್ಟು ಆಳುಗಳ ಮೂಲಕವೇ ಮಾಡಿಸಬೇಕಾಗಿತ್ತು. ಪಿಕಾಸಿ ಗುದ್ದಲಿಗಳ ಕಾವು ಹೋದರೂ ಅದನ್ನು ಅವನು ಹಾಕಲಾರದವನಾಗಿದ್ದನು. ಮೂರು ದಿನಗಳಲ್ಲಿ ಆಗಬೇಕಾಗಿದ್ದ ತಳಹದಿ ಅಗೆಯುವುದು ಮೂವತ್ತು ದಿನಗಳಾದರೂ ಮುಗಿಯಲಿಲ್ಲ. ಹಿಂದೆ ಮನೆಯ ಗೋಡೆಗಳನ್ನೆಲ್ಲ ತಾನೇ ಹಾಕುತ್ತಿದ್ದ ಆಚಾರಿ ಇಂದು ತನ್ನ ಮನೆ ಗೋಡೆಗಳನ್ನೇ ಗುತ್ತಿಗೆಗೆ ಹೊಲೆಯರಿಗೆ ಕೊಟ್ಟನು. ಕಂಚಿನಂತಹ ಗೋಡೆಗಳನ್ನು ಹಾಕಿ ಅಭ್ಯಾಸವಾಗಿದ್ದ ಅವನಿಗೆ ಕೂಲಿ ಆಳುಗಳು ಮಣ್ಣನ್ನೇ ಸರಿಯಾಗಿ ಕಲಿಸದೆ ಚೊಟ್ಟಪಟ್ಟನಾಗಿ ಹಾಕಿದ ಗೋಡೆಗಳನ್ನು ಕಂಡು ಮೈ-ಉರಿಯಿತು. ಹಾಗೂ ಹೀಗೂ ಗೋಡೆ ಎದ್ದ ಮೇಲೆ ಆಚಾರಿ ಮನೆಯ ಮರಕೆಲಸವನ್ನೆಲ್ಲ ಒಬ್ಬ ಬಡಗಿಗೆ ಗುತ್ತಿಗೆಗೆ ಕೊಟ್ಟನು. ಆ ಬಡಗಿ ಅಷ್ಟು ಬುದ್ಧಿವಂತನಲ್ಲ. ಆದರೆ ಬಹಳ ದುರಾಶೆಯವ. ಅವನು ಕೆಲಸ ಪ್ರಾರಂಭಿಸುವುದಕ್ಕೆ ಮುಂಚೆಯೇ ಹಾಗೂ ಹೀಗೂ ತನಗೆ ಬರಬೇಕಾದ ಹಣವನ್ನೆಲ್ಲ ಆಚಾರಿಯಿಂದ ಎಳೆದೇ ಬಿಟ್ಟ. ಗೋಡೆಗಳು ಸೊಟ್ಟಪಟ್ಟಾಗಿ ನಿಂತಿದ್ದವು. ಮನೆಯ ಸುತ್ತ ತೊಲೆಗಾಗುವ ಮರಗಳು ಬಿದ್ದಿದ್ದವು. ತಳಪಾಯ ಪ್ರಾರಂಭಿಸಿ ೪ ತಿಂಗಳ ಮೇಲಾಗಿತ್ತು. ಮಧ್ಯೆ ಒಂದು ಸಲ ಅಕಾಲದ ಮಳೆ ಬಂದು ಗೋಡೆ ಬಿರುಕು ಬಿಟ್ಟಿತ್ತು. ಮಳೆಗಾಲವು ಹತ್ತಿರವಾಗುತ್ತ ಬರುತ್ತಿದ್ದಿತು. ಅಷ್ಟರಲ್ಲಿ ಬಡಗಿ ಬಂದು ಮನೆ ಕಟ್ಟುವನೆಂದು ಊರವರಿಗೆ ತೋರಲಿಲ್ಲ. ವೀರಭದ್ರಾಚಾರಿ ಕೋಪದಿಂದ ಹಿರಣ್ಯಕಶಿಪುವಿನಂತೆ ಎಲ್ಲರ ಮೇಲೂ ಸಿಡಿಗುಟ್ಟುತ್ತಿದ್ದನು. ಹಿಂದೆ ಇಂತಹ ಮನೆಯನ್ನು ಅವನು ಒಂದೇ ತಿಂಗಳಿನಲ್ಲಿ ಕಟ್ಟಿ ಮುಗಿಸಿದ್ದನು. ಬಾಚಿ ಹಿಡಿದು ಅವನು ನಿಂತರೆ ಒಂದೇ ದಿನದಲ್ಲಿ ಒಂದು ಮನೆಗೆ ಬೇಕಾದ ತೊಲೆಗಳನ್ನೆಲ್ಲ ಕೆತ್ತಿಹಾಕುತ್ತಿದ್ದನು. ಮಧ್ಯೆ ಮಧ್ಯೆ ಒಂದೊಂದು ಸಲ ಆಸೆಯಿಂದ ಅವನ ದೃಷ್ಟಿ ಮೂಲೆಯಲ್ಲಿ ಬಿದ್ದಿದ್ದ ಬಾಚಿ ಗರಗಸ ಉಳಿಗಳ ಕಡೆಗೆ ಹೋಗುವುದು. ಹಿಂದೆ ಕುಲುಮೆ ಕೆಲಸ ಮಾಡುತ್ತಿದ್ದಾಗ ಹಾಕಿಕೊಳ್ಳುತ್ತಿದ್ದ ಚಡ್ಡಿಯನ್ನು—ಅದು ಇನ್ನೂ ಗಟ್ಟಿಯಾಗಿದ್ದುದರಿಂದ ಬೀದಿಗೆ ಎಸೆಯಲು ಮನಸ್ಸು ಬಂದಿರಲಿಲ್ಲ— ಗೂಟಕ್ಕೆ ನೇತುಹಾಕಿದ್ದುದು ಅವನ ಕಣ್ಣಿಗೆ ಬಿತ್ತು. ಮಣ್ಣು ಕಬ್ಬಿಣ ಮರ ಮೂರರ ಕೆಲಸ ಮಾಡುತ್ತಿದ್ದವನು ಅವನು. ಅವನ ದೃಷ್ಟಿ ನಿಧಾನವಾಗಿ ತನ್ನ ಕಂಬಿಯ ಪಂಚೆ, ಕವಡೆಗಳು, ಜ್ಯೋತಿಷ ಪುಸ್ತಕಗಳ ಗಂಟು ಇದರ ಕಡೆಗೆ ಹಿಂದಿರುಗಿತು. ಗೃಹ ಪ್ರವೇಶಕ್ಕೆ ಯೋಗ್ಯವಾದ ದಿನವನ್ನು ಗೊತ್ತು ಮಾಡಲು ಅವನು ಜ್ಯೋತಿಷಸರ್ವವಿಷಯಾಮೃತವನ್ನೂ ಪಂಚಾಂಗವನ್ನೂ ಬಿಚ್ಚಿಕೊಂಡು, ಸ್ಲೇಟಿನ ಮೇಲೆ ಲೆಕ್ಕಹಾಕತೊಡಗಿದನು. ತಾನೇ ಜೋಯಿಸನಾದುದರಿಂದ ಸ್ವಲ್ಪವೂ ಹೆಚ್ಚು ಕಡಿಮೆಯಾಗದಂತೆ ಸರಿಯಾದ ಲಗ್ನವನ್ನು ಗೊತ್ತುಮಾಡುವುದು ಅವನ ಗುರಿಯಾಗಿತ್ತು.

★

ಲೆಕ್ಕದ ಗೊಂದಲದಲ್ಲಿ ಸಿಕ್ಕಿಕೊಂಡ ಆಚಾರಿಗೆ ಸಂಧ್ಯಾಕಾಲವಾದುದು ಗೊತ್ತಾಗಲೇ ಇಲ್ಲ. ಅವನ ಹೆಂಡತಿ ಒಳಕ್ಕೆ ಬಂದು "ನೀವು ಇಲ್ಲಿ ಗುಣಿಸ್ತ ಕೂತಿರಿ. ಮಳೆಬರೋ ಹಾಗಿದೆ.

ನಾಲ್ಕು ಹನಿ ಹಾಕಿದರೂ ಸಾಕು. ಗೋಡೆ ಬೀಳುತ್ತೆ. ಆ ಮೇಲೆ ನಮಗೆ ಈ ಹುಲ್ಲುಗುಡಿಸಲೇ ಎಂದೆಂದಿಗೂ'' ಎಂದಳು. ಮಳೆಯ ಹೆಸರನ್ನು ಕೇಳಿದಕೂಡಲೆ ಆಚಾರಿಗೆ ಚೇಳು ಕುಟುಕಿದಂತೆ ಆಯಿತು. ಅವನು ಸರ್ರನೆ ಎದ್ದು



ಬೀದಿಗೆ ಬಂದು ಅಂತರಿಕ್ಷದ ಕಡೆ ನೋಡಿದನು. ಕಪ್ಪಾದ ಮೋಡಗಳು ಆನೆಗಳ ಹಿಂಡುಗಳಂತೆ ಒಂದರ ಮೇಲೊಂದು ನುಗ್ಗುತ್ತಿದ್ದವು. ಗುಡುಗಿನ ಆರ್ಭಟವೂ ಮಿಂಚಿನ ಹೊಳವೂ ವಿಶೇಷವಾಗಿತ್ತು. ಆದರೆ ಮಿಂಚು ವಾಯುವ್ಯ ದಿಕ್ಕಿನಲ್ಲಿ ಬೀಸುತ್ತಿದ್ದುದರಿಂದ ಪ್ರಾಯಶಃ ಅಂದು ಮಳೆ ಬರಲಾರದೆಂದೂ ಅಂದು ತಪ್ಪಿದರೆ ಇನ್ನೂ ಆರು ಏಳು ದಿನ ಮಳೆ ಬರುವುದಿಲ್ಲವೆಂದೂ ಆಚಾರಿಗೆ ತಿಳಿಯಿತು. ಆಚಾರಿಯ ದೃಷ್ಟಿ ಅಭದ್ರವಾಗಿದ್ದ ಹೊಸ ಗೋಡೆಗಳ ಮೇಲೆ ಹಾಯಿತು. ಮನೆಯ ಸುತ್ತ ಬಿದ್ದಿದ್ದ ತೊಲೆಗಾಗಿ ತಂದ ಮರಗಳು, ಬಿದಿರು, ಹಳೆಯ ಮನೆಯ ಹೆಂಚು ಇವನ್ನೆಲ್ಲ ಅವನು ನೋಡಿದನು. ಅವು ದೈನ್ಯದಿಂದ "ನಾವೆಲ್ಲ ಇದ್ದೇವೆ. ನಮ್ಮನ್ನು ಸರಿಯಾಗಿ ಯೋಜಿಸುವವರಿಲ್ಲ'' ಎಂದು ಬೇಡುವಂತೆ ಅವನಿಗೆ ತೋರಿತು. ಆ ವೇಳೆಗೆ ಆಕಾಶದಲ್ಲಿ ಮತ್ತೊಮ್ಮೆ ಗುಡುಗು ಆರ್ಭಟಿಸಿತು. ಆಚಾರಿಗೆ ಯಾವುದೋ ಒಂದು ಬಗೆಯ ಆವೇಶ ಬಂದಂತೆ ಆಯಿತು. ಅವನ ಮುಖದಲ್ಲಿ ಒಂದು ಬಗೆಯ ಹೊಸ ನಿಶ್ಚಯವೂ ಚಟುವಟಿಕೆಯೂ ತೋರತೊಡಗಿತು. ಅವನ ನಡಿಗೆ ಹಗುರವಾಯಿತು. ಅವನು ಉಟ್ಟಿದ್ದ ಆ ಪಂಚಕಚ್ಚೆಯ ಕಂಬಿಯ ಪಂಚೆ ಅವನಿಗೆ ಸಂಕೋಲೆಯಂತೆ ತೋರಿತು. ಅವನು ಮಧುವನ್ನು ಹೀರಿದ ದುಂಬಿಯಂತೆ ಸರಸರನೆ ತನ್ನ ಗುಡಿಸಲಿನೊಳಕ್ಕೆ ಬಂದನು. ಅವನ ನಡಿಗೆಯಲ್ಲಿ ಆ ವೇಗವನ್ನೂ ಲಘುತ್ವವನ್ನೂ ಅವನ ಹೆಂಡತಿ ಕಂಡಿದ್ದುದು ಅವನು ಜೋಯಿಸನಾಗುವುದಕ್ಕೆ ಮುಂಚೆ. ಅವಳು ಆಶ್ಚರ್ಯದಿಂದ ತನ್ನ ಕಡೆ ನೋಡುತ್ತಿದ್ದರೂ ಆಚಾರಿ ಅವಳನ್ನು ಗಮನಿಸದೆ ನೆಟ್ಟಗೆ ಗೂಟದ ಬಳಿ ಹೋಗಿ ನಿಂತುಕೊಂಡು ತನ್ನ ಹಳೆ ಚಡ್ಡಿಯನ್ನು ಧರಿಸಿದನು. ಸೊಂಟದಿಂದ ಕೆಳಕ್ಕೆ ಸರಿದ ಕಂಬಿಪಂಚೆ ಅಲ್ಲಿಯೇ ಉಳಿಯಿತು. ಪಂಚಾಂಗ, ಆರೂಢ ಪ್ರಶ್ನ ಚಂದ್ರಿಕೆ, ಕವಡೆಗಳನ್ನು ಕಟ್ಟಿದ್ದ ಮಾಸಿದ ರೇಶಿಮೆ ಅರಿವೆಯ ಗಂಟನ್ನು ಹೊರಕ್ಕೆ ತೆಗೆದುಕೊಂಡು ಹೋಗಿ ಎಸೆದನು. ಕಾಲುಮಣೆಯ ಮೇಲೆ ಕುಂಕುಮ, ಅರಿಸಿನ ರಾಶಿ ಹುಯ್ದು ಜ್ಯೋತಿಷ್ಯ ಹೇಳಲು ಅದರ ಮೇಲೆ ಇಟ್ಟಿದ್ದ ದೇವರ ಕಲಶವನ್ನು, ಕುಂಕುಮ ಸಹಿತವಾಗಿ ಕೈಯ್ಯಲ್ಲಿ ಕೆಳಕ್ಕೆ ನೂಕಿಬಿಟ್ಟನು. ಅವನ ಹೆಂಡತಿ ಇವನಿಗೆ ಹುಚ್ಚು ಹತ್ತಿದೆ ಎಂದು ಗಾಬರಿಯಿಂದ ನೋಡುತ್ತಿದ್ದಳು. ಆಚಾರಿ ಬಾಚಿಯನ್ನು ತೆಗೆದುಕೊಂಡು ಹೊರಕ್ಕೆ ಹೋದನು. ಅವನ ಹೆಂಡತಿ "ಯಾಕೆ ಯಾಕೆ?'' ಎಂದುಕೊಂಡು ಮಾತನಾಡದೆ ಅವನನ್ನೇ ಅನುಸರಿಸಿದಳು. ಆಚಾರಿ ಮಾತನಾಡದೆ ಆವೇಶಗೊಂಡವನಂತೆ ಬಾಚಿಯನ್ನು ಮಸೆದನು. ಕುಮರು ಹಿಡಿದಿದ್ದ ಬಾಚಿ ಆ ಕತ್ತಲೆಯಲ್ಲಿ ಬೆಳ್ಳಿಯ ಗೆರೆಯಂತೆ ಹೊಳಪಾಗಿ ತೋರಿತು. ಮೋಡಗಳು ಚದುರಿ ಆಕಾಶದಲ್ಲಿ ಸುಮಾರಾಗಿ ನಕ್ಷತ್ರಗಳು ಕಾಣತೊಡಗಿದವು. ಪಂಚಾಂಗವನ್ನು ನೋಡಲು ಪ್ರಾರಂಭಿಸುವುದಕ್ಕೆ ಮುಂಚೆ, ಆಚಾರಿ ಇಷ್ಟು ಬೆಳಕಿನಲ್ಲಿಯೇ ಕೆಲಸಮಾಡುತ್ತಿದ್ದನು. ಈಗಲೂ ಆಚಾರಿ ಬಂದವನೇ, ತೊಲೆಗಾಗಿ ಅಲ್ಲಿ ಬಂದು ಬಿದ್ದಿದ್ದ ಮರವನ್ನು ಕೆತ್ತಲು ಪ್ರಾರಂಭಿಸಿದನು. ಠಣಾಕ್ ಠಣಾಕ್ ಎಂದು ದಪ್ಪ ದಪ್ಪ ಚಕ್ಕೆಗಳು ಹಾರತೊಡಗಿದವು. ಸದ್ದನ್ನು ಕೇಳಿ ಊರವರೆಲ್ಲಾ ಆಚಾರಿಯ ಮನೆಯ ಬಳಿಗೆ ಬಂದರು. ಆಚಾರಿಗೆ ಮೈಮೇಲೆ ಪ್ರಜ್ಞೆ ಇದ್ದಂತೆಯೇ ತೋರಲಿಲ್ಲ. ಅವನು ಆ ರಾತ್ರಿಯೆಲ್ಲ ಕೆಲಸ ಮಾಡುತ್ತಲೇ ಇದ್ದನು. ಬೆಳಗಾಗುವುದರೊಳಗೆ ಅಲ್ಲಿ ಬಿದ್ದಿದ್ದ ಎಲ್ಲ ತೊಲೆಗಳನ್ನೂ ಕೆತ್ತಿ ಸರಿಮಾಡಿದನು. ನಾಲ್ಕು ಗಾಡಿ ಚೆಕ್ಕೆ ಬಿತ್ತು. ಆ ರಾತ್ರಿಯೇ ಊರವರಿಗೆಲ್ಲ ಸಂಭ್ರಮ. "ಊರಿಗೆ ಬಂದಿದ್ದ ಶನಿ ತೊಲಗಿತು'' ಎಂದು ಅವರು ಸಂತೋಷಪಟ್ಟರು. ನಿರ್ಜನವಾಗಿದ್ದ ಆಚಾರಿಯ ಗುಡಿಸಲ ಮುಂದೆ ಹಿಂದಲಂತೆ ಹಳೆಯ ಗಾಡಿಗಳೂ ನೇಗಿಲು ಗುಳಗಳೂ ಕುಲುಮೆ ತಿದಿ ಎಲ್ಲ ಬಂದು ಬಿದ್ದವು. ಆಚಾರಿಯಿಂದ ತಮಗೆ ಕೆಲಸವಾಗಬೇಕಾದುದರಿಂದ ಊರವರೆಲ್ಲ ಬಂದು ಸೇರಿ ನಾಲ್ಕೇ ದಿನಗಳಲ್ಲಿ ಹೆಚ್ಚಿಗೆ ಹೆಂಚು ಹೇರಿ ಆಚಾರಿಯ ಮನೆಯನ್ನು ಕಟ್ಟಿಬಿಟ್ಟರು.

ಆಚಾರಿಯ ಮನೆಯ ಮುಂದೆ ಕುಲುಮೆ ನಡೆಯುತ್ತಿರುವುದನ್ನೂ ಆಚಾರಿಯ ಕೈಯಲ್ಲಿದ್ದ ಬಾಚಿಯನ್ನೂ ನೋಡಿ ಹಿಂದಲ ಮಾಮೂಲು ಜೋಯಿಸರು "ನನಗೆ ಎರಡು ವರುಷಗಳಿಂದ ಕೆಲಸವಿರಲಿಲ್ಲ. ಮನೆ ಕಟ್ಟುವವರೂ ಇಲ್ಲ. ಗೃಹಪ್ರವೇಶವೂ ಇಲ್ಲ. ಇನ್ನು ಮೇಲೆ ಆಚಾರಿಗೆ ಹಿಡಿದಿದ್ದ ಶನಿ ಬಿಡುಗಡೆ ಆಯಿತು. ಮನೆಗಳೂ ಏಳುತ್ತವೆ. ಗೃಹಪ್ರವೇಶವೂ ನಡೆಯುತ್ತದೆ'' ಎಂದುಕೊಂಡು ಪಂಚಾಂಗ ಒದರಿ ಇಟ್ಟುಕೊಂಡರು.

---

# ಪ್ರೇಮ ದೀಪಾವಳಿ

— ೧ —

ಬಾ ಚನ್ನೆ ರಸರನ್ನೆ
ಬಾರೆನ್ನ ಬಳಿಗೆ
ನಿನ್ನೊಲವಿನಾ ದೀಪ
ತಾರೆನ್ನ ಇಳೆಗೆ

— ೨ —

ನೂರಾರು ದೀಪಗಳ
ಹಚ್ಚಿರುವರಲ್ಲಿ
ಬೆಳಗಿಸಿಹೆ ನಾನೊಂದೆ
ದೀಪವನ್ನಿಲ್ಲಿ

— ೩ —

ಬೆಳಕಿನರ್ಥವು ನೂರು
ಸಾವಿರದೊಳಿಲ್ಲ
'ಜ್ಯೋತಿ'ಯೆಂಬೊಂದರೊಳೆ
ಅಡಗಿರುವುದೆಲ್ಲ

— ೪ —

ನಿನ್ನೊಲುಮೆಯೇ ನನಗೆ
'ಜ್ಯೋತಿ'ಯಾಗಿರಲಿ
ನನ್ನೊಲುಮೆಯೇ ನಿನಗೆ
ಜ್ಯೋತಿಯಾಗಿರಲಿ

— ೫ —

ಬೆಳಗಲೆಂದೆಂದಿಗೂ
ನಂದದೀ ಜ್ಯೋತಿ
ಇಳೆಗೆಲ್ಲ ಬೆಳಕೀಯ-
ಲೀ ಬಾಳ ಜ್ಯೋತಿ

—ಶಿಗ್ಗಾಂವಿ ವೀರೇಶ್ವರ

---

# ನಾನು, ನನ್ನ ವಧು

ಕಾ. ನಾ. ಕೃಷ್ಣಮೂರ್ತಿ, ಕಾಸರವಳ್ಳಿ

ಮೊಗಕೆ ಮೊಗ
ಎದೆಗೆ ಎದೆ
ನಾನು ನನ್ನ ವಧು
ಮಾಯೆ ಎಸೆಯೆ
ಜೀವನದಿ
ಕುಡಿಸಿ ಮತ್ತ ಮಧು

(ರವೀಂದ್ರನಾಥರ ಕವನ ಒಂದರ ಭಾಷಾಂತರ)

# ಕರ್ನಾಟಕದ ಔದ್ಯೋಗಿಕ ಪ್ರಗತಿ

## ಆದದ್ದು ಮತ್ತು ಆಗಬೇಕಾದ್ದು

ಹಲವು ಆಡಳಿತೆಗಳಲ್ಲಿ ಹರಿಹಂಚಾದ ಕರ್ನಾಟಕ ಔದ್ಯೋಗಿಕ ಪ್ರಗತಿಯಲ್ಲಿ ಸಹಜವಾಗಿಯೇ ಹಿಂದುಳಿದಿದೆ. ಆದರೆ ನಮ್ಮ ಬಂಡವಳಗಾರರು ಧೈರ್ಯದಿಂದ ಮುಂದೆ ಬಂದರೆ ಮಾಡಬಹುದಾದ ಕಾರ್ಯ ಎಷ್ಟೋ ಇದೆ. ಯಾವ ಕ್ಷೇತ್ರದಲ್ಲಿ ಏನು ಸಾಧಿಸಲ್ಪಟ್ಟಿದೆ, ಸಾಧಿಸಲ್ಪಡಬಹುದು ಎಂದು ಈ ಲೇಖ ಸೂಚಿಸುತ್ತದೆ.

ಲೇಖಕರು: **ಪ್ರೊ. ಎನ್. ಆರ್. ಅಪರಂಜಿ, ಎಂ. ಎ.**

---

ಈಗಿನ ಯಂತ್ರಯುಗದಲ್ಲಿ ಯಾವುದೇ ದೇಶವು ಮುಂದುವರಿದ ದೇಶವೆನ್ನಿಸಿಕೊಳ್ಳಬೇಕಾದರೆ ಅದು ತನ್ನ ಯಂತ್ರೋದ್ಯೋಗಗಳನ್ನು ಬೆಳೆಸಿಕೊಂಡು ಬಂದಿರಬೇಕು. ಈ ದೃಷ್ಟಿಯಿಂದ ನೋಡಿದಲ್ಲಿ ಪಾಶ್ಚಿಮಾತ್ಯ ದೇಶಗಳು ಮುಂದುವರಿದ ದೇಶಗಳೆನ್ನಿಸಿಕೊಳ್ಳುವವು. ಚೀನ ಮತ್ತು ಭಾರತಗಳು ಈ ಉದ್ಯಮಗಳನ್ನು ಇತರರಷ್ಟು ಹೆಚ್ಚು ಬೆಳೆಸಿಕೊಂಡಿಲ್ಲವಾದ್ದರಿಂದ ಹಿಂದುಳಿದ ರಾಷ್ಟ್ರಗಳೆನ್ನಿಸಿಕೊಂಡಿವೆ. ಈ ಮಾತು ಕರ್ನಾಟಕಕ್ಕೂ ಅಷ್ಟೇ ಸಮನಾಗಿ ಅನ್ವಯಿಸುತ್ತದೆ. ಆದರೆ ಈ ಇಪ್ಪತ್ತೈದು ವರ್ಷಗಳಲ್ಲಿ ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಔದ್ಯೋಗಿಕ ಪ್ರಗತಿಯೆಡೆಗೆ ಕೆಲವು ಪ್ರಯತ್ನಗಳು ನಡೆದಿವೆ. ಈ ಪ್ರಯತ್ನಗಳು ಎಷ್ಟರ ಮಟ್ಟಿಗೆ ಫಲಕಾರಿಯಾಗಿವೆ? ಅವು ಎಷ್ಟರ ಮಟ್ಟಿಗೆ ನಮ್ಮ ಜನರ ಜೀವನಮಟ್ಟವನ್ನು ಏರಿಸಿವೆ? ಇನ್ನೂ ಕೈಕೊಳ್ಳಬೇಕಾದ ಉದ್ಯಮಗಳೆಷ್ಟಿವೆ? ಇವೇ ಮೊದಲಾದ ವಿಷಯುಗಳನ್ನು ಈ ಪುಟ್ಟ ಲೇಖನದಲ್ಲಿ ವಿಮರ್ಶಿಸೋಣ.

ಕನ್ನಡ ನಾಡಿನ ಒಟ್ಟು ಜನಸಂಖ್ಯೆ ಸುಮಾರು ಎರಡು ಕೋಟಿ. ಇಪ್ಪತ್ತು ಜಿಲ್ಹೆಗಳಲ್ಲಿ ಈ ಜನಸಂಖ್ಯೆ ಹಂಚಿದೆ. ಹೈದರಾಬಾದ ಸಂಸ್ಥಾನದಲ್ಲಿ ಮೂರು ಜಿಲ್ಹೆ ಮತ್ತು ಮೈಸೂರಿನಲ್ಲಿ ಒಂಬತ್ತು ಜಿಲ್ಹೆಗಳನ್ನು ಬಿಟ್ಟರೆ ಉಳಿದ ಭಾಗವೇ ಒಕ್ಕೂಟ ಕರ್ನಾಟಕವೆನಿಸುವದು. ಮುಂಬಯಿ ರಾಜ್ಯದ ಧಾರವಾಡ, ವಿಜಾಪುರ, ಕಾರವಾರ ಮತ್ತು ಬೆಳಗಾಂವಿ; ಮದರಾಸು ರಾಜ್ಯದ ಬಳ್ಳಾರಿ, ದಕ್ಷಿಣ ಕನ್ನಡ ಮತ್ತು ನೀಲಗಿರಿ ಜಿಲ್ಹೆಗಳು ಮತ್ತು ಕೊಡಗು ರಾಜ್ಯ ಒಕ್ಕೂಟ ಕರ್ನಾಟಕದ ಭಾಗಗಳು. ಈ ಲೇಖನದಲ್ಲಿ ಒಕ್ಕೂಟ ಕರ್ನಾಟಕದ ಔದ್ಯೋಗಿಕ ಪ್ರಗತಿಯನ್ನು ಮಾತ್ರ ವಿವರಿಸಲಾಗುವದು.

### ಪ್ರಾಂತೀಕರಣದ ಕೂಗಿನ ಹಿನ್ನೆಲೆ

ಕರ್ನಾಟಕವು ಒಂದು ಪ್ರಾಂತವಾಗಬೇಕು; ಅದರಲ್ಲಿ ಕನ್ನಡ ಮಾತನಾಡುವವರೆಲ್ಲ ಸಮಾವೇಶ ಹೊಂದಬೇಕು ಎಂಬ ಕೂಗು ಬಹು ಹಳೆಯದು. ಕರ್ನಾಟಕಕ್ಕೆ ಏತಕ್ಕೆ ಒಂದು ಪ್ರಾಂತ ಬೇಕು ಎಂಬುದಕ್ಕೆ ಅನೇಕ ಕಾರಣಗಳನ್ನು ಕೊಡಬಹುದು: ೧. ಒಕ್ಕೂಟ ಕರ್ನಾಟಕವು ಐದು ಆಡಳಿತಗಳಲ್ಲಿ ಹರಿದು ಹಂಚಿಹೋಗಿದೆ. ಮುಂಬಯಿ ಕರ್ನಾಟಕ ಮತ್ತು ಮದ್ರಾಸ ಕರ್ನಾಟಕಗಳು ಆಯಾ ರಾಜ್ಯದ ಮೂಲೆಯುಲ್ಲಿವೆ. ಹೀಗಾಗಿ ಅವುಗಳ ಔದ್ಯೋಗಿಕ ಪ್ರಗತಿಯ ಕಡೆಗೆ ಆಯಾ ಸರಕಾರಗಳು ಹೆಚ್ಚು ಗಮನ ಕೊಟ್ಟಿಲ್ಲ. ೨. ಕರ್ನಾಟಕದಲ್ಲಿ ಹೇರಳವಾದ ನೈಸರ್ಗಿಕ ಸಂಪತ್ತು ಇದೆ. ಇದನ್ನು ಕನ್ನಡಿಗನ ಜೀವನ ಮಟ್ಟವನ್ನು ಎತ್ತರಿಸಲು ಯಾವ ರೀತಿಯಿಂದಲೂ ಉಪಯೋಗಿಸಿಕೊಂಡಿಲ್ಲ. ೩. ಕರ್ನಾಟಕದಲ್ಲಿ ಕ್ಷಾಮಕ್ಕೆ ತುತ್ತಾಗುವ ಭಾಗಗಳು ಬಹಳವಿದ್ದು ನದೀನೀರಾವರಿ ಯೋಜನೆಯನ್ನು ಯಾವ ಸರಕಾರವೂ ಕೈಕೊಂಡಿಲ್ಲ. ೪. ಕರ್ನಾಟಕದ ಸಮುದ್ರ ಕರಾವಳಿಯಲ್ಲಿ ಇಡೀ ಭಾರತದಲ್ಲಿಯೇ ಅನುಕೂಲವಾಗಬಹುದಾದ ಬಂದರುಗಳ ಸ್ಥಳಗಳಿವೆ. ಸರಕಾರಗಳು ಇಂತಹ ಬಂದರುಗಳನ್ನು ನಿರ್ಮಿಸಲು ಯಾವ ಕಾರ್ಯಕ್ರಮಗಳನ್ನೂ ಕೈಕೊಂಡಿಲ್ಲ. ಇದರಿಂದ ನಮ್ಮ ವ್ಯಾಪಾರ ಕುಂಠಿತವಾಗಿದೆ. ಈ ಮತ್ತು ಇನ್ನಿತರ ಕಾರಣಗಳಿಗಾಗಿ ಕನ್ನಡಿಗರು ತಮ್ಮ ಕುಂದುಕೊರತೆಗಳನ್ನು ಹೇಳಿಕೊಳ್ಳುತ್ತಾರೆ. ಕರ್ನಾಟಕಕ್ಕೆ ತನ್ನದೇ ಆದ ಪ್ರಾಂತವಿದ್ದಿದ್ದರೆ ಪ್ರಾಂತಿಕ ಸರಕಾರಗಳು ಈ ಕುಂದುಕೊರತೆಗಳನ್ನು ಹೋಗಲಾಡಿಸಬಹುದೆಂಬ ಆಶೆಯಿಂದ ಕನ್ನಡಿಗರು ತಮ್ಮದೇ ಆದ ಒಂದು ಪ್ರಾಂತದ ನಿರ್ಮಾಣದ ಬೇಡಿಕೆಯನ್ನು ಕೇಂದ್ರ ಸರಕಾರದ ಎದುರಿಗೆ ಇರಿಸಿದ್ದಾರೆ. ಕರ್ನಾಟಕದ ಔದ್ಯೋಗಿಕ ಪ್ರಗತಿಯಾಗಬೇಕು, ಕನ್ನಡಿಗನ ದಾರಿದ್ರ್ಯ ಹೋಗಬೇಕು ಎಂಬುದೇ ಎಲ್ಲ ಕನ್ನಡಿಗರ ಅಪೇಕ್ಷೆ. ಈ ಸಂದರ್ಭದಲ್ಲಿ ನಾವು ಸಾಧಿಸಿದ ಔದ್ಯೋಗಿಕ ಪ್ರಗತಿ ಎಷ್ಟು, ಇನ್ನೂ ಸಾಧಿಸಬೇಕಾದದ್ದು ಎಷ್ಟಿದೆ ಎಂಬುದನ್ನು ತಿಳಿದುಕೊಳ್ಳಬೇಕಾದದ್ದು ಅಗತ್ಯ.

### ಸದ್ಯದ ಔದ್ಯೋಗಿಕ ಪ್ರಗತಿ

ಕರ್ನಾಟಕವು ಭಾರತದಲ್ಲಿ ಹತ್ತಿಯನ್ನು ಬೆಳೆಯುವ ಮುಖ್ಯವಾದ ಪ್ರದೇಶಗಳಲ್ಲಿ ಒಂದು. ಸುಮಾರು ೧೭ ಲಕ್ಷ ಎಕರೆಗಳಲ್ಲಿ ನಾವು ಹತ್ತಿಯನ್ನು ಬೆಳೆಯುತ್ತೇವೆ. ಭಾರತದ ೨೫ ಲಕ್ಷ ಬೇಲುಗಳ ಹತ್ತಿಯ ಉತ್ಪಾದನೆಯಲ್ಲಿ ಕರ್ನಾಟಕದ ಉತ್ಪಾದನೆ ಐದು ಲಕ್ಷ ಬೇಲುಗಳು. ಈ ಐದು ಲಕ್ಷ ಬೇಲು ಹತ್ತಿಯನ್ನು ಹಿಂಜಿ, ಬೀಜ ತೆಗೆದು ಒತ್ತುವ ಜಿನ್ ಮತ್ತು ಪ್ರೆಸ್ ಕಾರ್ಖಾನೆಗಳು ಕರ್ನಾಟಕದಲ್ಲಿ ಒಟ್ಟು ೩೨೨ ಇವೆ. ಇವುಗಳಲ್ಲಿ ಕೆಲಸದಲ್ಲಿ ತೊಡಗಿದವರ ಸಂಖ್ಯೆ ೧೨,೦೦೦. ಈ ಉದ್ಯಮದಲ್ಲಿ ತೊಡಗಿದ ಖಾಸಗಿ ಬಂಡವಲು ಸುಮಾರು ನಾಲ್ಕು ಕೋಟಿ ರೂಪಾಯಿ ಇದೆ. ಮೈಸೂರಿನಲ್ಲಿ ಇಂತಹ ೨೧ ಕಾರ್ಖಾನೆಗಳಿವೆ. ಅವುಗಳಲ್ಲಿ ೧,೦೦೦ ಜನ ಕೆಲಸ ಮಾಡುತ್ತಾರೆ. ಹೈದರಾಬಾದು ಕರ್ನಾಟಕದಲ್ಲಿ ಮಾತ್ರ ಮೂರು ಜಿಲ್ಹೆಗಳಲ್ಲಿ ೪೮ ಜಿನ್ ಮತ್ತು ಪ್ರೆಸ್ ಕಾರ್ಖಾನೆಗಳಿದ್ದು ಅವುಗಳಲ್ಲಿ ೨,೫೬೦ ಜನರು ಕೆಲಸ ಮಾಡುತ್ತಾರೆ.

### ಹತ್ತಿ ಗಿರಣಿಗಳು

ಕರ್ನಾಟಕದಲ್ಲಿ ದೊಡ್ಡದಾಗಿ ಕಂಡುಬರುವ ಹತ್ತಿಬಟ್ಟೆಯ ಗಿರಣಿಗಳೆಂದರೆ ಹುಬ್ಬಳ್ಳಿಯ ಭಾರತ ಮಿಲ್ಲು, ಗೋಕಾಕದ ಮಿಲ್ಲು ಮತ್ತು ಗದಗಿನ ಎನ್. ಸಿ. ಮಿಲ್ಲು. ಇವಲ್ಲದೆ ಇನ್ನೂ ಅನೇಕ ಪುಟ್ಟ ಗಿರಣಿಗಳೆಲ್ಲ ಸೇರಿ ನಮ್ಮಲ್ಲಿ ೧೮ ಗಿರಣಿಗಳಿವೆ. ಅವುಗಳಲ್ಲಿ ಸುಮಾರು ೭,೫೦೦ ಜನ ಕೆಲಸ ಮಾಡುತ್ತಾರೆ.

ಇಡೀ ಭಾರತದ ಉತ್ಪಾದನೆಯಲ್ಲಿ ೧/೫ದಷ್ಟು ಹತ್ತಿಯನ್ನು ನಾವು ಉತ್ಪಾದನೆ ಮಾಡಿ ಕೇವಲ ಕೆಲವೇ ಗಿರಣಿಗಳನ್ನು ನಡೆಸಿದರೆ ಅದು ನಮಗೆ ಲಾಭಕಾರಿಯಲ್ಲ. ಸದ್ಯಕ್ಕೆ ನಾವು ಬೆಳೆದ

ಬಹು ಹತ್ತಿ ಮುಂಬಯಿ ಮಿಲ್ಲುಗಳಿಗೆ ಹೋಗುತ್ತದೆ. ಅದಕ್ಕೆ ಪ್ರತಿಯಾಗಿ ಕರ್ನಾಟಕದಲ್ಲಿಯೆ ನಾವು ಇನ್ನೂ ಕೆಲವು ಗಿರಣಿಗಳನ್ನು ಸ್ಥಾಪಿಸಬಹುದು. ಇದರಿಂದ ನಮ್ಮ ಕಚ್ಚಾ ವಸ್ತುವನ್ನು ನಾವೇ ಉಪಯೋಗಿಸಿದಂತಾಗುವುದಲ್ಲದೆ ನಮ್ಮ ಕೆಲಸಗಾರರಿಗೂ ಕೆಲಸ ಒದಗಿಸಿದಂತಾಗುತ್ತದೆ. ನಮ್ಮಲ್ಲಿ ತಯಾರಾದ ಬಟ್ಟೆಯ ವಿತರಣೆಗೂ ಇದು ಸಹಕಾರಿಯಾಗಿ ಸಾರಿಗೆಯ ಖರ್ಚನ್ನು ಕಡಿಮೆ ಮಾಡಬಹುದು. ಆದ್ದರಿಂದ ಹತ್ತಿ ಬಟ್ಟೆಯ ಉದ್ಯಮವನ್ನು ನಾವು ಇನ್ನೂ ಬೆಳೆಸಿಕೊಳ್ಳಲು ಬಹಳ ಅಸ್ಪದವಿದೆಯೆನ್ನಬಹುದು.

ಮೈಸೂರಿನಲ್ಲಿ ೬೬ ಗಿರಣಿಗಳಿದ್ದು ಅವುಗಳಲ್ಲಿ ೧೧,೦೦೦ ಕೆಲಸಗಾರರು ತೊಡಗಿದ್ದಾರೆ. ಹೈದರಾಬಾದು ಕರ್ನಾಟಕದಲ್ಲೂ ಒಂದು ಗಿರಣಿ ಇದ್ದು ಅದರಲ್ಲಿ ೩,೦೦೦ ಜನ ತೊಡಗಿದ್ದಾರೆ.

## ಇಂಜನಿಯರಿಂಗ್ ವರ್ಕಶಾಪುಗಳು

ಕರ್ನಾಟಕದಲ್ಲಿ ವೆಲ್ಡಿಂಗ್, ಮೋಲ್ಡಿಂಗ್ ಮತ್ತು ಯಂತ್ರದ ಸಾಮಾನುಗಳನ್ನು ತಯಾರು ಮಾಡುವದಕ್ಕೆ ಒಟ್ಟು ಮೂವತ್ತು ಕಾರ್ಖಾನೆಗಳಿವೆ. ಇವುಗಳಲ್ಲಿ ೪,೦೦೦ ಜನರು ಕೆಲಸಮಾಡುತ್ತಾರೆ. ನಮ್ಮ ಪ್ರಾಂತದ ಔದ್ಯೋಗಿಕ ಪ್ರಗತಿಯು ಅಷ್ಟಾಗಿ ಆಗದಿದ್ದುದೇ ಈ ಉದ್ಯಮವು ಹಿಂದುಳಿಯಲು ಕಾರಣವಾಗಿದೆ. ಹಿಟ್ಟಿನ ಗಿರಣಿಗಳನ್ನು ತಯಾರು ಮಾಡುವದು, ಶೇಂಗಾ ಬೀಜವನ್ನು ಒಡೆಯುವ ಯಂತ್ರವನ್ನು ತಯಾರಿಸುವದು ಮತ್ತು ಒಕ್ಕಲತನದ ಸಲಕರಣೆಗಳನ್ನು ತಯಾರು ಮಾಡಲು ನಮ್ಮ ಇಂಜನಿಯರಿಂಗ್ ಉದ್ಯಮಗಳು ಮುಂದೆ ಬರಬೇಕು. ಈ ತಯಾರಿ ಮಾಲುಗಳು ಸದ್ಯ ಹೊರಗಿನಿಂದ ನಮಗೆ ಬರುತ್ತಿರುವುದರಿಂದ ಅವು ಇಲ್ಲಿಯೇ ತಯಾರಾದರೆ ಅವುಗಳಿಗೆ ಗಿರಾಕಿಗಳು ಸಾಕಷ್ಟು ಇರುತ್ತಾರೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಮೈಸೂರು ಕರ್ನಾಟಕವಾಗಲಿ ಹೈದರಾಬಾದು ಕರ್ನಾಟಕವಾಗಲಿ ಈ ದಿಶೆಯಲ್ಲಿ ಬಹು ಮುಂದುವರಿಯದಿರುವುದು ಶೋಚನೀಯ.

## ಎಣ್ಣೆ ಕಾರ್ಖಾನೆಗಳು

ಹತ್ತಿಯನ್ನು ಬಿಟ್ಟರೆ ಎಣ್ಣೆಯ ಕಾಳುಗಳನ್ನೇ ಕರ್ನಾಟಕವು ಹೆಚ್ಚಾಗಿ ಬೆಳೆಯುತ್ತದೆ. ಸದ್ಯಕ್ಕೆ ಇಲ್ಲಿ ೫-೧/೨ ಲಕ್ಷ ಎಕರೆಗಳಲ್ಲಿ ಬೆಳೆದ ಎಣ್ಣೆ ಕಾಳಿನಲ್ಲಿ ಸ್ವಲ್ಪ ಭಾಗವನ್ನು ಮಾತ್ರ ನಮ್ಮ ೫೦ ಕಾರ್ಖಾನೆಗಳು ಹಿಂಡಿ ಎಣ್ಣೆ ತೆಗೆಯುತ್ತವೆ. ಇತರ ಕಾಳುಗಳು ಮುಂಬಯಿಗೆ ಸಾಗುತ್ತವೆ. ಸುಮಾರು ೪,೦೦೦ ಕೆಲಸಗಾರರು ಈ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಾರೆ. ಇದು ನಿಜವಾಗಿಯೂ ನಮ್ಮ ದುರ್ದೈವ. ಏಕೆಂದರೆ ಸಂಪತ್ತನ್ನು ನಾವಾಗಿಯೇ ಕಳೆದುಕೊಳ್ಳುತ್ತಿದ್ದೇವೆ. ನಾವು ಬೆಳೆದ ಎಲ್ಲ ಎಣ್ಣೆಕಾಳುಗಳನ್ನು ನಾವು ಇಲ್ಲಿಯೇ ಹಿಂಡಿ ಎಣ್ಣೆ ತೆಗೆಯಲು ತಕ್ಕಷ್ಟು ಕಾರ್ಖಾನೆಗಳನ್ನು ಸ್ಥಾಪಿಸಬೇಕು. ಎಣ್ಣೆಯೊಂದರಿಂದ ಇತರ ಉದ್ಯಮಗಳನ್ನೂ ಸ್ಥಾಪಿಸಲು ಅವಕಾಶವಿದೆ. ವನಸ್ಪತಿ ಕೈಗಾರಿಕೆ, ಸೋಪು ತಯಾರಿಕೆ, ಹೇರಾಯಿಲ್ ತಯಾರಿಕೆ ಇವೇ ಮೊದಲಾದ ಉದ್ಯಮಗಳನ್ನು ಕರ್ನಾಟಕವು ಯಶಸ್ವಿಯಾಗಿ ಪ್ರಾರಂಭಿಸಬಹುದು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಣ್ಣೇ ಟೆಕ್ನಾಲಜಿ ಎಂಬ ಹೊಸ ಅಭ್ಯಾಸ ಕ್ರಮವನ್ನೂ ಅಳವಡಿಸಿಕೊಂಡು ಭಾರತದಲ್ಲಿಯೇ ಎಣ್ಣೆ ವಿಷಯದಲ್ಲಿ ತಜ್ಞ ತರಬೇತು ಕೊಡುವ ಸ್ಥಿತಿಗೆ ಬರಬೇಕು. ಹೊರಗಿನಿಂದ ತಜ್ಞರನ್ನು ಕರೆತಂದು ಮತ್ತು ನಮ್ಮ ತಜ್ಞರ ಸಹಾಯ ಪಡೆದು ಪ್ರಗತಿಯನ್ನು ಸಾಧಿಸಲು ಸಾಧ್ಯವಿದೆ.

## ರಾಸಾಯನಿಕ ಪದಾರ್ಥಗಳ ಉದ್ಯಮ

ನಾನಾ ರಾಸಾಯನಿಕ ಪದಾರ್ಥಗಳನ್ನು ತಯಾರು ಮಾಡುವ ಕಾರ್ಖಾನೆಗಳು ನಮ್ಮಲ್ಲಿ ಹತ್ತು ಇದ್ದು ಒಟ್ಟು ಅವುಗಳಲ್ಲಿ ೫೦೦ ಜನ ಕೆಲಸಗಾರರು ದುಡಿಯುತ್ತಾರೆ. ಹುಬ್ಬಳ್ಳಿಯಲ್ಲೀಗ ರಾಸಾಯನಿಕ ಗೊಬ್ಬರದ ಕಾರ್ಖಾನೆಯೊಂದಿದೆ. ಈ ಕಾರ್ಖಾನೆಗೆ ನಮ್ಮ ಪೂರ್ಣ ಸಹಾನುಭೂತಿ ಬೇಕು. ಅಷ್ಟೇ ಅಲ್ಲ, ಈ ಒಂದೇ ಕಾರ್ಖಾನೆಯು ನಮಗೆ ಬೇಕಾಗುವ ಎಲ್ಲ ಗೊಬ್ಬರಗಳನ್ನೂ ಒದಗಿಸದು. ಆದ್ದರಿಂದ ಇಂತಹ ಕಾರ್ಖಾನೆಗಳ ಸಂಖ್ಯೆ ನಮ್ಮಲ್ಲಿ ಇನ್ನೂ ಹೆಚ್ಚುವದು ಒಳಿತು. ಸದ್ಯಕ್ಕೆ ಗದುಗಿನಲ್ಲಿ ಕರ್ನಾಟಕ ಕೆಮಿಕಲ್ ವರ್ಕ್ಸ ಎಂಬ ರಾಸಾಯನಿಕ ಶಾಲೆ ಇದೆ. ಇದು ತಜ್ಞರಾದ ಡಾ. ತುಮ್ಮಿನಕಟ್ಟಿಯವರ ನೇತೃತ್ವದಲ್ಲಿ ನಡೆಯುತ್ತಿದೆ. ಇದನ್ನು ಬೆಂಗಾಲ್ ಕೆಮಿಕಲ್ ವರ್ಕ್ಸ್‌ ಮಾದರಿಯಾಗಿ ಮಾಡಬೇಕೆಂಬ ಅವರ ಹಂಬಲ ಸ್ತುತ್ಯವಾಗಿದೆ. ಸಲ್ಫ್ಯುರಿಕ್ ಆಸಿಡ್, ಕಾಸ್ಟಿಕ್ ಸೋಡ ಇವೇ ಮೊದಲಾದ ಆಮ್ಲಗಳನ್ನು ತಯಾರಿಸುವ ಕಾರ್ಖಾನೆಗಳು ನಮ್ಮಲ್ಲಿ ಹೆಚ್ಚಬೇಕಾಗಿದೆ.

## ಹಂಚು ಮತ್ತು ಇಟ್ಟಿಗೆಯ ಕಾರ್ಖಾನೆಗಳು

ಕರ್ನಾಟಕದಲ್ಲಿ ಹಂಚು ಮತ್ತು ಇಟ್ಟಿಗೆಗಳನ್ನು ತಯಾರು ಮಾಡುವ ಕಾರ್ಖಾನೆಗಳು ಮಂಗಳೂರಿನ ಸುತ್ತುಮುತ್ತಲೇ ಗೊಂಚಲ ಕಟ್ಟಿಕೊಂಡಿರುವುದು ಸೋಜಿಗ. ಆದರೂ ಕೆಲವು ನೈಸರ್ಗಿಕ ಕಾರಣಗಳಿಗಾಗಿ ಈ ಉದ್ಯಮ ಅಲ್ಲಿ ಬಹು ದಿನಗಳಿಂದ ನಡೆಯುತ್ತಿದೆ. ಮಂಗಳೂರು ಹಂಚುಗಳು ಭಾರತದಲ್ಲಿಯೇ ಪ್ರಸಿದ್ಧಿಯಾಗಿವೆ. ಇಂತಹ ೪೩ ಕಾರ್ಖಾನೆಗಳು ಮಂಗಳೂರಿನಲ್ಲಿವೆ. ಇವುಗಳಲ್ಲಿ ಸುಮಾರು ೪,೦೦೦ ಜನರು ಕೆಲಸ ಮಾಡುತ್ತಾರೆ. ಮೈಸೂರಿನಲ್ಲಿ ಈ ಉದ್ಯಮದ ಪ್ರಗತಿ ಅಷ್ಟಾಗಿ ಆಗಿಲ್ಲ. ಅಲ್ಲಿ ಕೇವಲ ೧೫ ಕಾರ್ಖಾನೆಗಳಿದ್ದು ಅವುಗಳಲ್ಲಿ ೧,೦೦೦ ಜನ ಕೆಲಸಗಾರರಿದ್ದಾರೆ. ಹಂಚಿನ ಕಾರ್ಖಾನೆಗಳನ್ನು ತೆರೆಯಲು ಹುಬ್ಬಳ್ಳಿಯು ಸೊಗಸಾದ ಜಾಗವಾಗಿದೆ. ಕಚ್ಚಾ ವಸ್ತುಗಳು, ಕೆಲಸಗಾರರು ಮತ್ತು ಪೇಟೆಯ ದೃಷ್ಟಿಯಿಂದ ಈ ಯೋಜನೆಯು ಸಮಂಜಸವಾಗಿದೆ. ಹಾಗೆಯೇ ಬೆಳಗಾವಿಯಲ್ಲಿ ಕೂಡ ಈ ಉದ್ಯಮವನ್ನು ಲಾಭದಾಯಕವಾಗಿ ಮಾಡಬಹುದು. ಇಟ್ಟಿಗೆಯ ಸಾಗಾಟಕ್ಕೆ ಬಹು ವೆಚ್ಚ ತಗಲುವುದರಿಂದ ಇದನ್ನು ಸರ್ವಸಾಧಾರಣವಾಗಿ ಎಲ್ಲ ಪ್ರದೇಶಗಳಲ್ಲಿಯೂ ತಯಾರಿಸಬಹುದು. ಆದರೆ ಯಂತ್ರಗಳಿಗೆ ಬೇಕಾಗುವ, ಬಹು ಜಳವನ್ನು ತಡೆಯುವ ಇಟ್ಟಿಗೆಗಳನ್ನು ಖಾನಾಪುರದಲ್ಲಿ ಬೃಹತ್‌ಪ್ರಮಾಣದಲ್ಲಿ ತಯಾರಿಸಲು ಅನುಕೂಲಗಳಿವೆ.

ಬಾನಾಪುರದ ಚೀನಾ ಮಣ್ಣು ನಮ್ಮ ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದಿದ್ದು, ಅದು ಈಗಾಗಲೇ ಕಪ್ಪು, ಬಸಿ ಇತ್ಯಾದಿಗಳನ್ನು ತಯಾರಿಸುತ್ತಿದೆ. ಆದರೆ ಈ ಉದ್ಯಮಕ್ಕೆ ಅಲ್ಲಿ ಇನ್ನೂ ಹೆಚ್ಚು ಬಂಡವಲು ತೊಡಗಿಸಿ, ದೊಡ್ಡ ಪ್ರಮಾಣದಲ್ಲಿ ಯಾಂತ್ರಿಕವಾಗಿ ತಯಾರಿಕೆಯನ್ನು ಪ್ರಾರಂಭಿಸಬೇಕು.

ಪ್ರಿಂಟಿಂಗ್ ಪ್ರೆಸ್ಸುಗಳು, ಹಿಟ್ಟಿನ ಮತ್ತು ತೊಗಲಿಗೆ ಸಂಬಂಧಿಸಿದ ಉದ್ಯಮಗಳು ಕರ್ನಾಟಕದಲ್ಲಿ ಅನೇಕವಿವೆ. ಆದರೆ ಇವುಗಳ ಬೆಳವಣಿಗೆ ಆಗಬೇಕಾದಷ್ಟು ನಮ್ಮಲ್ಲಿ ಆಗಿಲ್ಲ. ಪ್ರತಿ ಹಳ್ಳಿಗೂ ಒಂದಾದರೂ ಹಿಟ್ಟಿನ ಗಿರಣಿ ಬೇಕು. ನವೀನ ರೀತಿಯ ಚರ್ಮ ಹದ ಮಾಡುವ ಕಾರ್ಖಾನೆಗಳು ನಮಗೆ ಬೇಕು.

ಈ ಮೇಲೆ ವಿವರಿಸಿದ ಎಲ್ಲ ಉದ್ಯಮಗಳ ಸಂಖ್ಯೆ ಕರ್ನಾಟಕದಲ್ಲಿ ಒಟ್ಟು ೫೪೯ ಇದೆ. ಅವುಗಳಲ್ಲಿ ಸುಮಾರು ೩೭,೦೦೦ ಜನರು ಕೆಲಸ ಮಾಡುತ್ತಾರೆ. ಮೈಸೂರಿನಲ್ಲಿ ೩೩೫ ಕಾರ್ಖಾನೆಗಳಿವೆ. ಅವುಗಳಲ್ಲಿ ಸುಮಾರು ೬೦,೦೦೦ ಜನರು ಕೆಲಸ ಮಾಡುತ್ತಾರೆ. ಹೈದರಾಬಾದ ಕರ್ನಾಟಕದಲ್ಲಿ ಸುಮಾರು ೩೦೦ ಕಾರ್ಖಾನೆಗಳಿವೆ. ಅವುಗಳಲ್ಲಿ ೧೬,೦೦೦ ಜನರು ಕೆಲಸ ಮಾಡುತ್ತಾರೆ. ಇವುಗಳನ್ನು ಬಿಟ್ಟರೆ ನೀಲಗಿರಿಯಲ್ಲಿ ಗನ್‌ಪೌಡರ್ ತಯಾರಿಸುವ ಕಾರ್ಖಾನೆಯೊಂದಿದೆ. ಮಂಗಳೂರಿನಲ್ಲಿ ಮೀನೆಣ್ಣೆ ತಯಾರಿಸುವ ಕಾರ್ಖಾನೆ ಇದೆ.

ಸಕ್ಕರೆ ಉದ್ಯಮ: ಹೊಸಪೇಟೆಯ ಸಕ್ಕರೆ ಕಾರ್ಖಾನೆಯು ಮಾತ್ರ ಕರ್ನಾಟಕದಲ್ಲಿ ಇರುವದು. ಇಲ್ಲಿ ವರ್ಷಂಪ್ರತಿ ೬,೫೦೦ ಟನ್ ಸಕ್ಕರೆ ತಯಾರಾಗುತ್ತಿದೆ. ಇದರ ಬಂಡವಾಳ ೧೪.೨೨ ಲಕ್ಷ ರೂಪಾಯಿಗಳು. ಕರ್ನಾಟಕದಲ್ಲಿ ಕಬ್ಬು ಬೆಳೆಯುವ ೨೯,೦೦೦ ಎಕರೆ ಭೂಮಿ ಇದ್ದು–ಇದು ಇನ್ನೂ ಅನೇಕ ಕಾರ್ಖಾನೆಗಳನ್ನು ಸ್ಥಾಪಿಸಲು ಅವಕಾಶ ಕೊಡಬಲ್ಲದು.

ರೇಲ್ವೆ: ಕರ್ನಾಟಕದಲ್ಲಿ ಒಟ್ಟು ೯೬೪ ಮೈಲು ರೇಲ್ವೆ ಮಾರ್ಗವಿದೆ. ಹುಬ್ಬಳ್ಳಿಯಲ್ಲಿರುವ ರೇಲ್ವೆ ವರ್ಕಶಾಪು ಭಾರತದ ನವೀನ ಮಾದರಿಯ ವರ್ಕಶಾಪುಗಳಲ್ಲಿ ಒಂದು. ಮೈಸೂರಿನಲ್ಲಿ ಒಟ್ಟು ೮೧೮ ಮೈಲುಗಳ ರೇಲ್ವೆ ಮಾರ್ಗವಿದೆ. ಮೈಸೂರಿನಲ್ಲಿ ಹುಬ್ಬಳ್ಳಿಯಲ್ಲಿರುವಂತೆಯೇ ಒಂದು ದೊಡ್ಡ ವರ್ಕಶಾಪಿದೆ.

ವಿದ್ಯುತ್: ಒಕ್ಕೂಟ ಕರ್ನಾಟಕದ ನಾನಾ ಪಟ್ಟಣಗಳಲ್ಲಿ ವಿದ್ಯುಚ್ಛಕ್ತಿ ತಯಾರಿಸುವ ೩೪ ಯಂತ್ರಸಾಧನಗಳಿವೆ. ಗೋಕಾಕನ್ನು ಬಿಟ್ಟರೆ ನಮ್ಮಲ್ಲಿ ಜಲವಿದ್ಯುತ್ತು ಇಲ್ಲ. ಜೋಗದಿಂದ ಹುಬ್ಬಳ್ಳಿ, ಧಾರವಾಡ ಮತ್ತು ಗದಗುಗಳಿಗೆ ಜಲವಿದ್ಯುತ್ತನ್ನು ತೆಗೆದುಕೊಳ್ಳುವ ಯೋಜನೆಯು ಭರದಿಂದ ಸಾಗಿದೆ.

## ಬಂಡವಲು

ಮೇಲೆ ವಿವರಿಸಿದ ಎಲ್ಲ ಉದ್ಯಮಗಳಲ್ಲಿಯೂ ಒಟ್ಟು ತೊಡಗಿಸಿದ ಬಂಡವಲನ್ನು ನಾವು ಸುಮಾರು ೧೫ ಕೋಟಿ ರೂಪಾಯಿಗಳೆಂದು ಲೆಕ್ಕಾಚಾರ ಮಾಡಬಹುದು. ಸುಮಾರು ೭೫ ಲಕ್ಷ ಜನಸಂಖ್ಯೆ ಇರುವ ಒಕ್ಕೂಟ ಕರ್ನಾಟಕಕ್ಕೆ ಈ ಸಂಖ್ಯೆ ಹೆಚ್ಚಲ್ಲ. ಮೈಸೂರಿನಲ್ಲಿ ಉದ್ಯಮದಲ್ಲಿ ತೊಡಗಿಸಿದ ಬಂಡವಲು ೨೨ ಕೋಟಿಗೆ ಮಿಕ್ಕುತ್ತದೆ. ಆದರೆ ಒಕ್ಕೂಟ ಕರ್ನಾಟಕದಲ್ಲಿ ಸರಕಾರಿ ಬಂಡವಲಕ್ಕಿಂತ ಖಾಸಗಿ ಬಂಡವಳವೇ ಹೆಚ್ಚು. ಮೈಸೂರಿನಲ್ಲಾದರೋ ಸರಕಾರಿ ಬಂಡವಳವೇ ಬಹು ಮುಖ್ಯವಾದದ್ದು. ಬಂಡವಳದ ದೃಷ್ಟಿಯಿಂದ ನೋಡಿದರೂ ಒಕ್ಕೂಟ ಕರ್ನಾಟಕ ಮತ್ತು ಮೈಸೂರು ಉದ್ಯಮದಲ್ಲಿ ಹಿಂದುಳಿದಿವೆ ಎನ್ನಬಹುದು.

## ಆಶಾಕಿರಣ

ಕಬ್ಬಿಣ: ಕರ್ನಾಟಕದ ಆಶಾಕಿರಣವಿರುವುದು ಮುಂದೆ ನಾವು ಸ್ಥಾಪಿಸಬಹುದಾದ ಉದ್ಯಮಗಳಲ್ಲಿ. ಬಳ್ಳಾರಿ ಜಿಲ್ಹೆಯ ಸೊಂಡೂರಿನಲ್ಲಿ. ಹೇರಳವಾದ ಕಬ್ಬಿಣದ ಅದಿರು ದೊರೆಯುತ್ತದೆ. ಇಲ್ಲಿ ಜಮಶೆದಪುರದಲ್ಲಿಯಂತೆ ದೊಡ್ಡ ಕಬ್ಬಿಣ ಮತ್ತು ಉಕ್ಕಿನ ಕಾರಖಾನೆಯನ್ನು ಸ್ಥಾಪಿಸಬಹುದು. ಮೈಸೂರಿನ ಭದ್ರಾವತಿಯಲ್ಲಿ ಉತ್ಪಾದಿಸುವ ಕಬ್ಬಿಣ ಮತ್ತು ಉಕ್ಕು ಮೈಸೂರೊಂದಕ್ಕೇ ಸಾಲದು. ಆದ್ದರಿಂದ ಸೊಂಡೂರಲ್ಲಿ ನಾವು ಕಬ್ಬಿಣ ಮತ್ತು ಉಕ್ಕಿನ ಉದ್ಯಮವನ್ನು ಲಾಭದಾಯಕವಾಗಿ ಕೈಕೊಳ್ಳಬಹುದು. ಇದಕ್ಕೆ ಕರ್ನಾಟಕದ ಬಂಡವಳದಾರರು ಮುಂದೆ ಬರಬೇಕು. ತಪ್ಪಿದರೆ ಸರಕಾರ ಅದರ ಕಡೆಗೆ ಗಮನಕೊಡಬೇಕು.

ಸಿಮೆಂಟು: ಸಿಮೆಂಟು ಉದ್ಯಮದ ಸ್ಥಾಪನೆಯ ದಿಶೆಯಲ್ಲಿ ಬಾಗಲಕೋಟೆಯಲ್ಲಿ ಪ್ರಯತ್ನಗಳು ಸಾಗಿವೆ. ಇನ್ನು ಕೆಲವು ಕಾಲದಲ್ಲಿ ನಮಗೆ ಅಲ್ಲಿಯ ಸಿಮೆಂಟು ಸಿಗುವದು. ಇದು ಹೆಮ್ಮೆಯ ವಿಷಯ. ಆದರೆ ಸದ್ಯ ಆ ಕಾರಖಾನೆಯ ವಾರ್ಷಿಕ ಉತ್ಪಾದನೆ ಒಂದು ಲಕ್ಷಟನ್ನಿದೆ. ಇದರ ಶಕ್ತಿಯನ್ನು ಇನ್ನೂ ಹೆಚ್ಚಿಸಬೇಕಾಗುವದು. ಶಹಾಬಾದದ ಸಿಮೆಂಟು ಕಾರಖಾನೆಯು ಹೈದರಾಬಾದು ಕರ್ನಾಟಕದಲ್ಲಿಯೇ ಬರುವುದರಿಂದ ಅದೂ ಕನ್ನಡಿಗರ ಬೇಡಿಕೆಯನ್ನು ಪೂರೈಸುವದು. ಬಾಗಲಕೋಟೆಯ ಸಿಮೆಂಟ ಉದ್ಯಮದ ಸದ್ಯದ ಬಂಡವಳ ಒಂದು ಕೋಟಿ ರೂಪಾಯಿ.

ಅರಣ್ಯಗಳು: ಮುಂಬಯಿ ಪ್ರಾಂತದ ಅರಣ್ಯದಲ್ಲಿ ಸೇಕಡ ೯೦ ರಷ್ಟು ಅರಣ್ಯವಿರುವದು ಕಾರವಾರದಲ್ಲಿ. ಈ ಅರಣ್ಯವು ನಮ್ಮ ನೈಸರ್ಗಿಕ ಸಂಪತ್ತೆಂದೇ ಹೇಳಬೇಕು. ಇಲ್ಲಿ ಬೆಳೆಯುವ ಬಿದಿರು ಅಥವಾ ಗಳಗಳು ಎರಡು ಮೂರು ಕಾಗದ ಕಾರ್ಖಾನೆ ಸ್ಥಾಪಿಸಿದರೂ ಕಚ್ಚಾ ಪದಾರ್ಥವನ್ನು ಒದಗಿಸಬಲ್ಲವು. ಕಡ್ಡಿಪಟ್ಟಣದ ಕಾರ್ಖಾನೆ, ಜೇನು ಕೈಗಾರಿಕೆ, ಔಷಧಗಳ ಕೈಗಾರಿಕೆ, ಚಿತ್ರದ ಕೈಗಾರಿಕೆ ಇವೆಲ್ಲವೂ ನಮ್ಮ ಅರಣ್ಯ ಸಂಪತ್ತಿನಿಂದ ಕಚ್ಚಾ ಮಾಲನ್ನು ಪಡೆಯಬಹುದು. ಇದಕ್ಕೆ ಮೇಲಾಗಿ ಕಾರವಾರದ ಭೂಪ್ರದೇಶವು ಸಣಬನ್ನೂ ಬೆಳೆಯಲು ಬಹು ಅನುಕೂಲವಾಗಿದೆ. ಭಾರತದ ಸಣಬಿನ ಕೊರತೆಯನ್ನು ಹೋಗಲಾಡಿಸಲು ಈ ದಿಶೆಯಲ್ಲಿ ಪ್ರಯತ್ನ ಅವಶ್ಯಕ.

## ತಂಬಾಕು ಉದ್ಯಮ

ಕರ್ನಾಟಕದಲ್ಲಿ ೫೯,೦೦೦ ಎಕರೆಗಳಲ್ಲಿ ತಂಬಾಕು ಬೆಳೆಯಲಾಗುತ್ತಿದೆ. ನಿಪ್ಪಾಣಿಯ

ಸುತ್ತುಮುತ್ತಲು ಈ ವ್ಯವಸಾಯವು ಕೇಂದ್ರೀಕೃತವಾಗಿದೆ. ಸದ್ಯಕ್ಕೆ ಈ ತಂಬಾಕಿನ ಹೆಚ್ಚಿನ ಉಪಯೋಗ ಕರ್ನಾಟಕದಲ್ಲಾಗಿಲ್ಲ. ಈ ವಿಷಯವನ್ನು ಗಮನದಲ್ಲಿಟ್ಟುಕೊಂಡು ಕೆಲವಾದರೂ ಸಿಗರೇಟು ಕಾರ್ಖಾನೆಗಳನ್ನು ನಾವು ಸ್ಥಾಪಿಸಬಹುದಾಗಿದೆ. ಈ ದಿಶೆಯಲ್ಲಿ ನಮ್ಮ ಕುಬೇರರು ಮುಂದೆ ಬಂದು ದೂರದರ್ಶಿತ್ವದಿಂದ ಕೆಲಸ ಮಾಡಬೇಕು. ಉತ್ತಮವಾದ ಚಿರೂಟು (Cigars) ಗಳನ್ನು ಸಹ ನಾವು ನಿಪ್ಪಾಣಿಯಲ್ಲಿ ತಯಾರಿಸಬಹುದು.

### ರೇಶ್ಮೆ ಉದ್ಯಮ

ಕೃತಕ ರೇಶ್ಮೆ ಬಂದಂದಿನಿಂದ ನೈಸರ್ಗಿಕ ರೇಶ್ಮೆಗೆ ಬೇಡಿಕೆ ಕಡಿಮೆಯಾದುದು ನಿಜ. ಆದರೂ ಗುಣಕ್ಕೆ ಮಹತ್ವ ಕೊಡುವವರು ನೈಸರ್ಗಿಕ ರೇಶ್ಮೆಯನ್ನು ಕೊಂಡೇಕೊಳ್ಳುವರು. ಈ ದಿಕ್ಕಿನಲ್ಲಿ ಮೈಸೂರು ತನ್ನ ರೇಶಿಮೆ ಕೈಗಾರಿಕೆಯನ್ನು ಅಭಿವೃದ್ಧಿಗೊಳಿಸಿದೆ. ಕರ್ನಾಟಕದಲ್ಲಿ ಬೆಳಗಾವಿಯ ಸುತ್ತುಮುತ್ತಲು ರೇಶಿಮೆ ಹುಳಗಳನ್ನು ಸಾಕಲು ಸೊಗಸಾದ ವಾತಾವರಣವಿದೆ ಎಂದು ಸರಕಾರಿ ರೇಶಿಮೆ ತಜ್ಞರು ಈಗಾಗಲೇ ಶಿಫಾರಸು ಮಾಡಿದ್ದಾರೆ. ಈ ಸ್ಥಳದಲ್ಲಿ ರೇಶಿಮೆ ಹುಳ ಸಾಕಿ ಇಲ್ಲಿ ರೇಶಿಮೆ ಉದ್ಯಮ ಸ್ಥಾಪಿಸುವ ಹೊಂಗನಸನ್ನೂ ನಾವು ಕಾಣಬಹುದು.

### ಮೀನುಗಾರಿಕೆ

ಕರ್ನಾಟಕವು ಮೀನುಗಾರಿಕೆಯಲ್ಲಿಯೂ ಹಿಂದುಳಿಯಬೇಕಾಗಿಲ್ಲ. ನಮಗೆ ಸುಮಾರು ೨೦೦ ಮೈಲು ಕರಾವಳಿ ಇದೆ. ಇಲ್ಲಿ ಈಗಾಗಲೇ ಬೆಸ್ತರು ಮೀನು ಹಿಡಿಯುವುದರಲ್ಲಿ ತೊಡಗಿದ್ದಾರೆ. ಆದರೆ ಯಾಂತ್ರಿಕ ರೀತಿಯಿಂದ ಮೀನು ಹಿಡಿದು ಅವುಗಳನ್ನು ಡಬ್ಬಿಗಳಲ್ಲಿ ಹಾಕಿ ಸೀಲು ಮಾಡಿ ಬೇರೆ ದೇಶಗಳಿಗೆ ಸಾಗಿಸುವ ಉದ್ಯಮವನ್ನೂ ನಾವು ಲಾಭದಾಯಕವಾಗಿ ಕೈಕೊಳ್ಳಬಹುದು. ಮೀನೆಣ್ಣೆಯ ಉದ್ಯಮವೂ ನಮ್ಮ ಪ್ರಗತಿಯನ್ನು ಸಾಧಿಸಬಲ್ಲದು.

### ವಿದ್ಯುತ್ ಶಕ್ತಿ

ಒಕ್ಕೂಟ ಕರ್ನಾಟಕದಲ್ಲಿ ಗೋಕಾಕ ಫಾಲ್ಸದ ಜಲವಿದ್ಯುತ್ತನ್ನು ಬಿಟ್ಟರೆ ಬೇರೆ ಜಲವಿದ್ಯುತು ನಮಗಿಲ್ಲ. ವಿದ್ಯುತ್ತು ಬಿಳೀ ಕಲ್ಲಿದ್ದಲೆಂದು ಕರೆಯಲಾಗಿದೆ. ಎಲ್ಲ ಉದ್ಯಮಗಳನ್ನು ನಡೆಸುವ ಶಕ್ತಿ ವಿದ್ಯುತ್ತು. ಜಲವಿದ್ಯುತ್ತನ್ನು ತಯಾರಿಸಲು ನಮಗೆ ಅವಕಾಶಗಳಿಲ್ಲದಿಲ್ಲ. ತುಂಗಭದ್ರಾ ಯೋಜನೆಯು ಈಗಾಗಲೇ ತ್ವರಿತದಿಂದ ಕಾರ್ಯರೂಪಕ್ಕಿಳಿಯುತ್ತಿದೆ. ಈ ಯೋಜನೆಯು ನಮಗೆ ೪೫,೦೦೦ ಕಿ. ವಾ. ವಿದ್ಯುಚ್ಛಕ್ತಿಯನ್ನು ನೀಡುವುದೆಂದು ಅಂದಾಜು ಮಾಡಲಾಗಿದೆ. ಅಷ್ಟೇ ಅಲ್ಲ, ಇದರಿಂದ ರಾಯಚೂರು, ಬಳ್ಳಾರಿ ಮತ್ತು ಅನಂತಪುರ ಜಿಲ್ಲೆಗಳಿಗೆ ನೀರಾವರಿ ಒದಗುತ್ತದೆ. ಈ ಮಾದರಿಯ ನೀರಾವರಿ ಮತ್ತು ವಿದ್ಯುತ್ ಯೋಜನೆಯನ್ನೂ ಕೈಕೊಳ್ಳಲು ಬರುವ ಅನೇಕ ನದಿಗಳು ನಮ್ಮಲ್ಲಿವೆ. ಕಾಳೀ ನದಿ ಯೋಜನೆ, ಘಟಪ್ರಭಾ ಯೋಜನೆ, ಬೇಡತಿ ನದಿ ಯೋಜನೆ, ಬೆಣ್ಣೆಹಳ್ಳ ಯೋಜನೆ ಇವೇ ಮೊದಲಾದ ಯೋಜನೆಗಳು ನಮಗೆ ನೀರಾವರಿಯನ್ನು ಪೂರೈಸುವವಲ್ಲದೆ ವಿದ್ಯುಚ್ಛಕ್ತಿಯನ್ನೂ ಕೊಡುವವು. ಸರಕಾರವು ಈ ಯಾವ ಯೋಜನೆಯನ್ನೂ ಕೈಕೊಂಡಿಲ್ಲ. ಘಟಪ್ರಭಾ ಯೋಜನೆಯು ಸ್ವಲ್ಪ ಮಟ್ಟಿಗೆ ಕಾರ್ಯರೂಪಕ್ಕಿಳಿದಿದೆ. ಆದರೆ ಇದರಿಂದ ಸದ್ಯಕ್ಕೆ ನಮಗೆ ವಿದ್ಯುತ್ತು ಸಿಗುವುದಿಲ್ಲ. ಘಟಪ್ರಭಾ ಯೋಜನೆಯ ಎರಡನೇ ಘಟ್ಟ ತೆಗೆದುಕೊಂಡರೆ ಅದು ನಮಗೆ ಲಾಭದಾಯಕವಾಗುವದು.

ಹೀಗೆ ಕರ್ನಾಟಕದಲ್ಲಿ ಆದ ಔದ್ಯೋಗಿಕ ಪ್ರಗತಿ ತುಸುವಲ್ಲದಿದ್ದರೂ ಇನ್ನೂ ನಾವು ಕೈಕೊಳ್ಳಬೇಕಾದವು ಬಹಳ ಇವೆ ಎಂಬುದು ವಿದಿತವಾಗುವದು. ಆಗ ಮಾತ್ರ ನಮ್ಮ ಜನರ ನಿರುದ್ಯೋಗ ನೀಗಿ ನಮ್ಮ ಜನರ ಜೀವನ-ಮಟ್ಟ ಏರಲು ಸಾಧ್ಯವಾಗುವದು.

---

## ಮೌನ — ಗಾನ

೧

ದಣಿದ ಹಾದಿ ಪಯಣಕಾರ,
ಬಿಸಿ ಸುಯಿಲಿನ ಎಲೆ ಸಮೀರ,
ಬಾ ಈ ಕೆಲದೊತ್ತಿಗೆ;
ಬಂದೆ ಒಳ್ಳೆ ಹೊತ್ತಿಗೆ.
ತುಸ ವಿರಮಿಸು ಬಳಿ ಕೆಲದೊಳು,
ನೆಳಲು-ಮಳಲು ಪ್ರಣಯವಾಡು-
ವಂಥ ನೆಲದ ತೊಡೆಯಲಿ;
ಇದೊ ನುಡಿಸುವೆನೊಂದು ಹಾಡು—
ಮೌನಗಾನ ಇದರ ಪ್ರಾಣ—
ಈ ವಿಶಾಲಗುಡಿಯಲಿ.

೨

ಬಿಮ್ಮನೆಂದು ಕೂಡಬೇಡ;
ಕಿವಿಯನಿಡಾ ನೆಲಕೆ ನೋಡ:
ಬೇಸರದಲಿ ಆಸರ
ಆಗುವಂಥ ಸವಿಸರ
ಉಲಿಯಲುಂಟು, ಒಲವ ನಂಟು;
ಬೇರೆ ಗೀತವೆಲ್ಲ ಕುಂಟು!
ಹೇಳಲೇನು ಕಾರಣ—
ಪ್ರಣಯ ಸೊಲ್ಲು ಪ್ರಣವದಲ್ಲಿ
ಮಿಳಿತವಾಗಿ ತಾನೆ ಬಹುದು,
ತಳೆದು ಗಾನ ಧಾರಣ!

೩

ಬೆಳಸಲೇಕೆ ಬಹಳ ಮಾತು,
ಗೆಳೆಯ ಬರಲು ದಯವೆ ಕಾತು?
ಸಾಕೀ ಪ್ರಸ್ತಾವನೆ.
ಬಿಡಿಸುವೆ ನಿಜ ಭಾವನೆ—
ಇಲ್ಲಿ, ಇದುವೆ ಕ್ಷೇತ್ರದಲ್ಲಿ
ಒಲವಿನವಳ ಉಸಿರು ಕರಗಿ
ಇಳಿದಿತು ಇಳೆಯೊಡಲಲಿ;
ಬಯಕೆ ಮಾತ್ರ ಇಳಿಹಗಲಿನ
ಛಾಯೆಯೊಲೇ ಉಳಿದೆ ಇರಲು,
ಮೆರೆದಿತು ಮೆಯ್ ಹುಡಿಯಲಿ.

೪

ಆಡಲಾರೆ, ಹಾಡಲಾರೆ,
ಕಣ್ಣನೀರ ಕಡೆಯಲಾರೆ;
ಇಲ್ಲ, ಬಲ್ಲೆ, ಹರುಷವು;
ಕಳೆದುದೇಸೊ ವರುಷವು....
ನೆನೆವೆನಲಾ ಪೃಥಿವಿ ಪ್ರೇಮ—
ಇರಲು, ನಲ್ಲ, ದೂರ, ವ್ಯೋಮ,
ತಳಮಳವೇ ಒಳಬಗೆ:
ಇಂಥನಂತ ಹೃದಯ ಸುಯಿಲು
ಬದುಕಿಸಿತಲ ಜಗದ ಬಾಳ:
ಇಲ್ಲದಲ್ಲಿ ಧಗೆ– ಹೊಗೆ!

೫

ಇರಲಿರೆ ಇದೆ ದಿಟದ ಪ್ರೀತಿ;
ಇದರುಸಿರೇ ಶಿವದ ಗೀತಿ!
ಇವಳಿದೆ ನೆಯ್ ಅವಳಲಿ,
ಜ್ವಾಲಾರಸ ಕೊಡದಲಿ,
ಇಳಿದು ಸೇರಿತಣ್ಣ ತನ್ನ
ಹವಣು ತಾಣ ಕಂಡೆ ಮುನ್ನ:
ಎಂಬೆನಲಾ ಎಂಬೆನು!
ಸೃಷ್ಟಿ ಮಿಡಿವ ಓಂಕಾರಕೆ
ಒಲವ ಸುಯಿಲು ಮೇಳಗೊರಲು!
ಬೇರೆ ಮಾತ ನಂಬೆನು!

೬

ಹೊರಟಿಯೇನು, ಗಾಳಿದೇವ,
ತಳೆದು ಎನ್ನ ಹೃದಯಭಾವ
ಸಲಿಸೆ ಜೀವಲೋಕಕೆ;
ತಣಿವಿನ ದನಿ ಶೋಕಕೆ?
ಯಾರದೇನು ಎದೆಯ ನವೆತ
ಮಾಗಿ ಬರಲು ಚಿರದ ಚರಿತ
ತೊಳೆಯೆ ಮನದ ಮ್ಲಾನವ.
ನಮಸ್ಕಾರ, ಸಖ ಸಮೀರ,
ಹಾದಿಯೊಳಗೆ ಹಾಡು ನೇಹ
ಇದೇ ಮೌನ ಗಾನವ!

— ಚಿದಂಬರ ದೀಕ್ಷಿತ

ಹರಟೆ

# ಆನಂದ ಪ್ರಚಾರ



ಲೇಖಕರು: ನಾ. ಕಸ್ತೂರಿ,
ಎಂ. ಎ., ಬಿ. ಎಲ್.

ದೀಪಾವಳಿ, ಸಂತೋಷದ ಹಬ್ಬ, ಕಂಡವರ ಹೃದಯದಲ್ಲಿ ಆನಂದದ ದೀಪ ಹೊತ್ತಿಸಬೇಕೆಂದು ಹೊರಟರೆ, ಅಯ್ಯೋ, ದೀಪದ ಬೆಳಕು ಬೇಕಾದವರೇ ಇಲ್ಲವಲ್ಲ. . . . .

ದೀಪಾವಳಿ!

ಗಂಗಾಸ್ನಾನ, ಹೋಳಿಗೆ, ಪಾಯಸ, ಹೊಸ ಸೀರೆ ಕುಪ್ಪಸ, ಹೊಸ ಲಂಗ, ಹೊಸ ಧೋತ್ರ, ಉತ್ತರೀಯ, ಆರತಕ್ಷತೆ, ಅಳಿಯನಿಗುಪಚಾರ, ಮಗಳ ಆನಂದ, ಮನೆಮನೆಯಲ್ಲೂ ದೀಪದ ಸಾಲು,....... ಊರೂರೇ ದೇವಲೋಕ.

ನಾನು ಬಡವ, ವಿಧುರ; ಮಕ್ಕಳಿಲ್ಲದ ಮೂ-ದೇವ, ಮನೆ ಇಲ್ಲದ ಖಾನಾವಳೀ ಜೀವಿ. ಎಣ್ಣೆ ತಂದು ಬತ್ತಿ ಹೊಸೆದು ದೀಪ ಹಚ್ಚಿ ನಾನು ಯಾವ ಜಗುಲಿಯ ಮೇಲಿರಿಸಲಿ? ನನ್ನನ್ನೊಬ್ಬರೂ ಅಳಿಯ ಎನ್ನುವವರಿಲ್ಲ; ನನಗೊಬ್ಬ ಅಳಿಯನಿಲ್ಲ. ಆದರೂ ನನ್ನನ್ನು ಈ ದೀಪಾವಳಿಯ ಆನಂದಪ್ರವಾಹ ವರ್ಷವರ್ಷವೂ ಕೊಚ್ಚುತಿದೆ. ದೀಪಾವಳಿ ದಿನ, ನನ್ನ ಸಡಗರ ಹೆಚ್ಚುತ್ತದೆ; ಅಂದು ನಾನು ನನ್ನ ಕಾಸು ತೆತ್ತು, ನಾಲ್ಕು ಪ್ಲೇಟು ಸಿಹಿ ತಿನಿಸುಗಳನ್ನು ಅಗಿದು ತಿನ್ನುತ್ತೇನೆ; ಕಂಡ ಕಂಡ ಭಿಕ್ಷುಕರಿಗೆಲ್ಲ ಬಿಲ್ಲೆಗಳೆಸೆಯುತ್ತೇನೆ; ಹೊಸದಲ್ಲದಿದ್ದರೂ ಧೋತ್ರವನ್ನು ಒಗೆದು ನೀಲಿಯಲ್ಲದ್ದಿ ಒಣಗಿಸಿ ಮಡಿಸಿ ಬಿಚ್ಚಿ ಉಟ್ಟುಮೆರೆಯುತ್ತೇನೆ; ಸಾಲದ ಚಿಂತೆಯನ್ನು ಅದೊಂದು ದಿವಸ ಪೂರ್ತ ಮರೆಯುತ್ತೇನೆ; ರಾತ್ರಿ ನಮ್ಮೂರಿನ ಬೀದಿಗಳ ಉದ್ದಕ್ಕೂ ಚಟಾಕಿಗಳನ್ನು ತಟಾಯಿಸುತ್ತ, ದೀಪದ ಸಾಲಿನ ಬೆಳಕಿನಲ್ಲಿ, ಅಕ್ಕ ಭಾವಂದಿರ ಸರಸ ಸಲ್ಲಾಪಗಳನ್ನು ಕಿವಿಯಿಂದ ಕುಡಿದು ಕಣ್ಣಿಂದ ಹೀರಿ, ಮತ್ತನಾಗಿ ಮತ್ತೆ ನನ್ನ ಕೋಣೆಯ ಏಕಾಂತ ಅಂಧಕಾರಮಯ ನಿರರ್ಥಕ ಮೌನಕ್ಕೆ ಹಿಂತಿರುಗುತ್ತೇನೆ.

ಈ ವರ್ಷ ಹಾಗೆ ಮಾಡಿದರೆ ಸಾಲದೆನಿಸಿತು. ಇದು ನಂದನ ಸಂವತ್ಸರ: ಸ್ವತಂತ್ರ ಭಾರತದ ಐದನೆಯ ದೀಪಾವಳಿ. ದುಃಖತಪ್ತ ಜಗತ್ತು ಬಿಸಿ ಬಿಸಿ ಕಣ್ಣೀರಿಟ್ಟು, ಪಾನ್‌ಮನ್‌ಜಾಂಗ್, ಜಿನೀವಾ, ಜಯತಟಾಕ, ಅಲ್‌ಜೀರಿಯ, ಟೆಹೆರಾನ್, ತೆಲಂಗಾಣ, ಕೋಲಾರ ಮುಂತಾದ ನಾನಾ ಸ್ಥಳಗಳಲ್ಲಿ ಹಾತೊರೆಯುತ್ತಿರುವ ದುಃಸಂಧಿ. ಜನಸೇವೆಗೂ ಜನಾರ್ದನ ಸೇವೆಗೂ ಸುಸಮಯ.

ಈ ವರ್ಷ ದೀಪಗಳನ್ನು ನೋಡಿ ನಲಿಯುವುದಕ್ಕಿಂತ ನಾನೇ ದೀಪವಾಗಬೇಕೆಂದು ನಿರ್ಧರಿಸಿದೆ. ನಿಜವಾದ ದೇಶಸೇವೆ, ಲೋಕಸೇವೆ, ಎಂದರೆ, ಅದು, ಎಂದು ಮನಗಂಡೆ. ಹಾಲಾಹಲವನ್ನು ಸುಧೆ ಎನಿಸಿ ಅಗ್ಗದುರಿಯನ್ನು ಶೀತಳವಾಗಿಸಲು ಅದೇ ಉಪಾಯ ಎಂದು ತೋರಿತು.

ಅಂದರೆ, ಹೇಗೆ?—ಎಂದು ಕಳೆದ ವಾರವೆಲ್ಲ ನನ್ನೊಳಗೆ ನಾನೇ ಚರ್ಚಿಸಿದೆ, ಹತ್ತಾರು ಪುಟಗಳಷ್ಟು. ನನ್ನ ಚರ್ಯೆಯಲ್ಲಿ ಇಂದಿನಿಂದ, ಅಥವಾ, ಈ ದಿನದ ಜಾಗ್ರತ್‌ಕಾಲದಲ್ಲಿ, ನಾನು ಅಳವಡಿಸಿಕೊಳ್ಳಬೇಕಾದ ಹೊಸ ದೃಷ್ಟಿಯನ್ನು ನಾನು ಒಂದು, ಎರಡು, ಮೂರು ಎಂದು ವಿಂಗಡಿಸಿ ವಿವರಿಸಿಕೊಂಡೆ. ಅವುಗಳ ಆಗುಹೋಗುಗಳನ್ನು, ಸಾಧ್ಯಾಸಾಧ್ಯತೆಯನ್ನು, ಅನುಕೂಲ ಪ್ರತಿಕೂಲಗಳನ್ನು ಕುರಿತು ಎಡೆಬಿಡದೆ ವಿಮರ್ಶೆ ಮಾಡಿದೆ. ಕಡೆಗೆ, "ನಾನೇ ದೀಪವಾಗಬೇಕು" ಎಂಬುದರ ಅರ್ಥ, ನನ್ನಮಟ್ಟಿಗೆ, ಇದು, ಎಂದು ನಿಶ್ಚಯಿಸಿದೆ, ನಿನ್ನೆ ರಾತ್ರಿ.

ಬೆಳಗಾಯಿತು. ದೀಪಾವಳಿಯೂ ಬಂತು. ನನ್ನ ಸಂಕಲ್ಪವನ್ನು ನೆರವೇರಿಸಿ ನಾನು ಕೃತಕೃತ್ಯನಾಗುವಂತೆ, ನನಗೆ ಸಹಾಯವಾಗಲು, ನಮ್ಮೂರಿನ ಜನರೆಲ್ಲ ಎದ್ದು ಓಡಾಡತೊಡಗಿದರು, ನನ್ನ ಸುತ್ತ. 'ನಾನೇ ದೀಪವಾಗಿ ಬಿಡುವುದು' ಎಂಬ ನನ್ನ ವ್ರತಾಚರಣೆಗೆ, ತಾನೇ ಪುರೋಹಿತನೋ, ಎಂಬಂತೆ ಸೂರ್ಯದೇವನು ಕೂಡ, ದೂರದ ದಿಗಂತದಿಂದ ವೇಗವೇಗವಾಗಿ ಬಂದು, ತಲೆಯ ಮೇಲೆ ಏರಿ ಬರುತ್ತಾನೋ ಎಂಬ ಶಂಕೆ ಮೂಡುವಷ್ಟು ಸಮೀಪನಾದ.

ದೀಪವೆಂದರೆ, ಪ್ರಕಾಶ. ಆದ್ದರಿಂದ, ನಾನು ಈ ದಿನವೆಲ್ಲ ನನ್ನ ಮುಖವನ್ನು ಪ್ರಕಾಶಮಾನವಾಗಿ ಇರಿಸಿಕೊಳ್ಳಬೇಕಲ್ಲವೆ? ಮುಖ ಕ್ಷೌರವನ್ನು—ಹೊಸ ಬ್ಲೇಡುಗಳಿಂದ ಎಡ, ಬಲ, ಗಲ್ಲ, ಹಣೆ ಹೀಗೆ ನಾಲ್ಕು ಹೊಸ ಬ್ಲೇಡುಗಳನ್ನು ಉಪಯೋಗಿಸಿದ್ದೆ— ಸಾಂಗಗೊಳಿಸಿದೆ; ಕ್ರೀಂ ಹಚ್ಚಿ, ಪೌಡರ್ ಚೆಲ್ಲಿದೆ; ಹುಬ್ಬುಗಂಟನ್ನು ಬಿಚ್ಚಿದೆ; ಮೂಗನ್ನು ಮೇಲೆತ್ತಲಿಲ್ಲ, ಇಳಿಯಬಿಟ್ಟೆ; ಹಲ್ಲು ಕಚ್ಚಲಿಲ್ಲ, ಎರಡು ಸಾಲನ್ನೂ ತುಟಿಯ ತೆರೆಯನ್ನು ಸರಿಸಿ, ಝಳಪಿಸಿದೆ; ಕನ್ನಡಿ ಮುಂದೆ ನಿಂತು, ಅನೇಕ ರೀತಿಯ ಕಿರಿತಗಳನ್ನು ಪರೀಕ್ಷಿಸಿ, ಶೋಭಾಯಮಾನವಾಗಿ ನನಗೆ ತೋರಿದ ಉತ್ತಮ ಮಂದಹಾಸವೊಂದನ್ನು ಆರಿಸಿ, ಅದನ್ನೇ ಅಂಟಿಸಿದೆ; ಕಣ್ಣಿಗೆ ಕೆಂಪು ಸೋಕದೆ, ಅದರಿಂದ ಯಾರನ್ನೂ ಬಡಿಯದೆ, ಉದ್ದಕ್ಕೂ ನಡೆದೆ.

ದೀಪವೆಂದರೆ, ಕತ್ತಲೆಯ ನಾಶಕಾರಿ; ಜ್ಯೋತಿ. ಒಂದು ದೀಪದಿಂದ ಮತ್ತೊಂದನ್ನು ಹೊತ್ತಿಸಬಹುದು. ಸೋಕಿದ ಮಾತ್ರಕ್ಕೆ ಒಂದು ಜ್ಯೋತಿ ಮತ್ತೊಂದನ್ನು ಬೆಳಗಿಸಬಲ್ಲುದು, ಸ್ನೇಹವಿದ್ದರೆ. ಆದ್ದರಿಂದ, ಈ ದಿನವೆಲ್ಲ ನಾನು, ಇತರರನ್ನು ಬೆಳಗಿಸುವ, ಅವರಿಗೆ ಆನಂದವನ್ನು ನೀಡುವ, ಅವರ ಜಿಡ್ಡಿಗೆ ಬೆಂಕಿ ಹೊತ್ತಿಸಿ, ಅವರಲ್ಲಿ ಕಾವನ್ನೂ ಹೊಳಪನ್ನೂ ತುಂಬಲು ಪ್ರಯತ್ನಿಸಿದೆ.

ಕೋಣೆ ಬಾಗಿಲು ತೆರೆಯುತ್ತಲೂ ಮೊದಲು ನಾನು ನೋಡಿದ್ದು, ಕಸಗುಡಿಸುವ ಮುದುಕಿ. ಮುಖದ ರಚನೆಯಂತೂ ಸಿದ್ಧವಾಗಿತ್ತು. ಇನು

ಉಳಿದದ್ದು, ಆನಂದದಾಯಕವಾದ ಮಾತು.

"ಏನವ್ವಾ! ಚೆನ್ನಾಗಿದೀಯಾ?" ಅಂದೆ. "ಚೆನ್ನಾಗಿದೀಯಾ, ಅಂತ ಕೇಳೋದು ಏಕೆ? ಚಂದಾಗಿಯೇ ಇದೀಯಾ!" ಅಂದೆ. ಆಕೆ, ನನ್ನ ಮುಖವನ್ನೇ ನೋಡದೆ, ಅಯ್ಯೋ, ಎಂದು ಕಿರಿಚುತ್ತ ಪ್ರೊಪ್ರೈಟರ ಆಫೀಸ್ ಕಡೆ ಧಾವಿಸಿದಳು. ಪಾಪ, ಪಾಪ, ಚೇಳು ಕುಟುಕಿತೋ ಏನೋ, ಎಂದು ಹೆದರಿ, ನಾನು, ಅವಳ ಹಿಂದೆಯೇ ಓಡಿದೆ. ದುಂಡುದುಂಡಗಿನ ಮೈ; ಹೆಣ್ಣು ಜೀವ. ಎಷ್ಟು ವೇಗವಾಗಿ ಓಡಿದರೂ ರಂಗನ ಮುಂದೆ ಸಿಂಗಿಯೆ? ಎಲ್ಲಿ, ನಿಂತುಕೊ, ಎಂದು ಹೇಳುತ್ತ "ಇವತ್ತು ದೀಪಾವಳಿ, ನೆನಪಿದೆಯೆ? ಸಿಂಗರಿಸಲು ಸುದಿನವಲ್ಲ; ಸಂತೋಷದಿಂದ ಜಗತ್ತೇ ನಲಿಯಬೇಕು" ಎಂದು ಆಶ್ವಾಸನಮಾಡಿದೆ. ಆಕೆ ಪೊರಕೆಯನ್ನೆತ್ತಿ ನನ್ನನ್ನಟ್ಟಿದಳು. "ಛೆ! ಇವಳಿಗೆಲ್ಲಿಯ ತಿಳಿವಳಿಕೆ" ಎಂದು ಗೊಣಗುತ್ತ, ನಾನು ಮೆಟ್ಟಲಿಳಿದು, ಬೀದಿಗೆ ಬಂದೆ.

ಜೋಷಿ ಸಿಕ್ಕಿದ, ನಮ್ಮ ಆಫೀಸ್ ಪಕ್ಕದ ಅಂಗಡಿ ಮಾಲೀಕನ ಹಿರಿಯ ಮಗ, ಜೋಷಿ. ಒಂದೇ ಕಡೆಯ ಕೆನ್ನೆಯನ್ನೂದಿಸಿಕೊಂಡು, ಕಣ್ಣುಗುಡ್ಡೆಗಳೆರಡನ್ನೂ ಹೊರಕ್ಕೆ ಚಾಚಿ, ತಲೆಗೊಂದು ವಸ್ತ್ರ ಸುತ್ತಿ, ಅವಲಕ್ಷಣದ ಅಳುಮುದ್ದೆಯಾಗಿ, ಎದುರು ಬಿದ್ದ. "ಲಲ್ಲಲ್ಲಲ್ಲಲ್ಲಾ! ಲಲ್ಲಲ್ಲಲ್ಲಲ್ಲಾ! ಜೋಷೀ! ಇದೇನಿದು ಇಷ್ಟೊಂದು ಖುಷಿ!" ಎಂದು ಹಾಡುತ್ತ, ಕುಣಿತದ ಹೆಜ್ಜೆ ಎರಡೊಂದು ಹಾಕಿ, ಅವನ ಹತ್ತಿರಕ್ಕೆ ನೆಗೆದೆ. ಅಂಗೈಯನ್ನು ಕಮಲದಂತೆ ಕೋಮಲವಾಗಿಸಿ, ಅವನ ಕೆನ್ನೆಯನ್ನು ಚಿವುಟದೆ. "ಹೋ" ಎಂದು ಅರಚುತ್ತಾ, ಜೋಷಿ ರಸ್ತೆ ಮಧ್ಯದಲ್ಲೇ ಕುಕ್ಕರಬಡಿದು, ನನ್ನನ್ನು ಅಚ್ಚಕನ್ನಡದಲ್ಲಿ ಶಪಿಸಲು ಪ್ರಾರಂಭಿಸಿದ. ಅವನಿಗೆ "ಜ್ಞಾನದಂತ" ಅಂಕುರವಾಗುತ್ತಿದೆ, ಅವನ ಒಸಡು ಊದಿಕೊಂಡಿದೆ, ಕೀವು ಕಟ್ಟಿದೆ, ಎಂದೆಲ್ಲ ದೀಪಾವಳಿ ಹಬ್ಬದ ಹರ್ಷಲಹರಿಯಿಂದ ಉನ್ಮತ್ತನಾದ ನನಗೆ ಹೇಗೆ ತಿಳಿಯಬೇಕು? ಅವನು ಬೈದ ಬೈಗಳಿಂದ, ನನ್ನ ಕಿರಿತ ಕೊಂಚ ಮಾಸಿತು.

ಅದನ್ನು ಸುಧಾರಿಸಿ, ಮತ್ತೆ ಧರಿಸಿ, ಪಕ್ಕದ ಗಲ್ಲಿಗೆ ಬಿದ್ದು, ಡಾಕ್ಟರ್ ಕುಲಕರ್ಣಿಯವರ ದವಾಖಾನೆ ಬಳಿ ಹೊರಳಿದೆ. ಮುಂದಕ್ಕೆ ನಡೆದೆ. ಮಾಧವಾಚಾರ್‍ರು ಸಿಕ್ಕಿದರು. "ಏನು, ಆಚಾರ್‍ರೆ! ಭೋಜನವಾಯಿತೆ?" ಅಂದೆ, ಮಾಮೂಲಿನಂತೆ. ಆಗ, ಹೊಳೆಯಿತು, ನಾನೊಂದು ದೀಪ; ಕತ್ತಲೆಯನ್ನು ಭೇದಿಸಿ ಆನಂದವನ್ನು ಕೊಡತಕ್ಕ ಜ್ಯೋತಿ ಎಂದು. "ಭೋಜನವಾಗಿರಬೇಕಲ್ಲವೆ? ನಿಮ್ಮ ಮುಖ, ನೋಡಿದರೆ, ಅಷ್ಟು ಕಳಕಳಿಯಾಗಿದೆ" ಅಂದೆ. "ಎಲಾ! ಇವನೆ! ಯಾರಿಗೂ ಹೇಳಬೇಡವೋ! ಇವತ್ತು ಒಂದು ಕಡೆ ಊಟಕ್ಕೆ ಆಹ್ವಾನ ಬಂದಿದೆ; ಅವರ ಮನೆ ಮುಸುಡಿ ನೋಡಿದರೆ ಅನ್ನವೇ ಸೇರುವುದಿಲ್ಲ; ಅಷ್ಟು ಜಿಪುಣರವರು. ಅದಕ್ಕೆ ಅಂತ ಬೆಳಿಗ್ಗೆ ಮನೆಯಲ್ಲೇ ಒಂದಿಷ್ಟು ಊಟ ಹೊಡೆದದ್ದನ್ನು, ನಿನ್ನ ಸರ್ಪದೃಷ್ಟಿ ಹೇಗೋ ಪತ್ತೆಹಚ್ಚಿಬಿಡುತ್ತಲ್ಲೋ... ತೊಲಗು ಮಾರಾಯ... ಯಾರಿಗೂ ಹೇಳಬ್ಯಾಡ" ಅಂದರು, ಆಚಾರ್‍ರು.

ಅದೇ ಸಮಯದಲ್ಲಿ ನನಗೆ ಅಲ್ಲೇ ಭೆಟ್ಟಿಯಾದ ದೇಶಪಾಂಡೆ ಹುಡುಗನ ದೆಸೆಯಿಂದ ನಾನು ಆಚಾರ್‍ರನ್ನ ಸಂಪೂರ್ಣ ಕೈಬಿಟ್ಟೆ. ಅವನು ನಮ್ಮೂರಿಗೆ ಅಳಿಯ. ಮಾವ ಕೊಟ್ಟ ಧೋತ್ರ ಷರ್ಟುವಲ್ಲಿ ಸಹಿತ ಅವನು ಕಾಣಿಸಿಕೊಂಡ. "ಏನಪ್ಪ! ಜರಿ ಬಹಳ ಇದೆಯಲ್ಲೋ ಧೋತ್ರದ್ದು. ಒಳ್ಳೆ ರಾಜಕುಮಾರ ಕಂಡಹಾಗೆ ಕಾಣುತ್ತಿಯಪ್ಪ.. ಅಳಿಯ ಅಂದ್ರೆ ಹೀಗಿರಬೇಕು, ಹಬ್ಬದ ದಿನ" ಅಂದೆ. ಅವನಿಗೆ ಸಿಟ್ಟೇ ಹತ್ತಿತು. "ಬಿಡ್ರಿ, ಬಿಡ್ರಿ! ನೀವೆಲ್ಲ ಪಿತೂರಿ ಹೂಡಿ ನನ್ನನ್ನ ಈ ಗತಿಗೆ ತಂದಿರಿ... ನಮ್ಮೂರು ಪ್ಲೀಡರ್ ಹನುಮಂತರಾಯರ ಮಗಳು.. ಒಬ್ಬಳೇ ಮಗಳು.. ಗಂಡು ಮಕ್ಕಳಿಲ್ಲ.. ಕಾಲುಹಿಡಿದು ಕೇಳಿಕೊಂಡರು.. ಉಬ್ಬಸ ಇದೆ, ದಮ್ಮು ವ್ಯಾಧಿ

ಕೆಟ್ಟಿದ್ದು, ಅಂತ ನನಗೆ ಹೇಳಿಸಿ, ಆ ಹೆಣ್ಣನ್ನ ಒಲ್ಲೆ ಅನ್ನಿಸಿ, ಇದನ್ನ ಗಂಟುಹಾಕಿ, ಈ ಇಮಿಟೇಷನ್ ರೇಶಿಮಿ ಅಂಚಿನ ಧೋತ್ರ.. ಈ ಅಗ್ಗದ ಮಾಲು ಕೊಡಿಸಿ..." ಎಂದು ಕೂಗಾಡಿದ. "ಅಲ್ಲವೋ! ನನ್ನ ಕೂಡ ಏಕೆ ಹೇಳುತ್ತೀ? ನಾನೇನಾರಾ ನಿನ್ನ ಸುದ್ದಿಗೆ ಬಂದಿದ್ದೆನೆ?" ಎಂದೆ, ತಾಳ್ಮೆಯಿಂದ... "ನೀನಲ್ಲದಿದ್ದರೆ, ನಿನ್ನಂಥವನಿನ್ನೊಬ್ಬ" ಎಂದು ಒದರುತ್ತಲೇ ದೇಶಪಾಂಡೆ ಹೊರಟೇಬಿಟ್ಟ.

ಪಾಟೀಲ ಮಗಳನ್ನು ಕರೆದುಕೊಂಡು ಎಲ್ಲಿಗೋ ಹೋಗುತ್ತಿದ್ದ. ಅವನು ಅವಳಿಗೆ ಪೆಟ್ಟಿಗೆ ತರಿಸಿಕೊಟ್ಟು ಸಂಗೀತ ಕಲಿಸಿಕೊಡುತ್ತಿದ್ದ. ಇದೀಗ ಸುಸಮಯ, ಎಂದು ಅವನೆದುರಿಗೆ ನಿಂತು, ನಮಸ್ಕಾರ, ಎಂದೆ. ಮಗಳ ಸಂಗೀತಾಭ್ಯಾಸ ಚೆನ್ನಾಗಿ ಸಾಗಿರಬೇಕೆಂದು ನನಗೆ ತಿಳಿದಿದೆ ಎಂದು ವ್ಯಕ್ತಪಡಿಸಿದೆ. ಇವಳ ಸಂಗೀತವನ್ನು ನೀನು ರೇಡಿಯೋದಲ್ಲಿ ಏರ್ಪಾಟುಮಾಡಬೇಕು ಎಂದೆ. ಆಗ, ಅವನು ರೇಗಿ, "ಏಕೆ? ಎದುರಿಗೆ ಕೂತು ಹಾಡುವಾಗ, ನನ್ನ ಮಗಳ ಮುಖ ನೋಡುತ್ತಾ ಇರುವುದು ಅಸಹ್ಯ, ಅಂತಿರೇನು?" ಎಂದು ಕಿಡಿಕಿಡಿಯಾದ.

"ಅಳಿಯ ಬಂದ ಆನಂದ, ನಿಮ್ಮನ್ನ ಇವತ್ತು ಮಾತನಾಡಿಸುವ ಹಾಗೆಯೇ ಇಲ್ಲ" ಎಂದು ಒಬ್ಬರಿಗೆ ಹೇಳಿದರೆ, ಅವರು, "ನಿನಗೇನು ಗೊತ್ತು ನಮ್ಮ ಪಾಪತ್ರಯ; ಹೋಗಯ್ಯ, ಹೋಗಯ್ಯ" ಎಂದರು. "ದೀಪಾವಳಿ ಸಂಚಿಕೆ ಕೊಂಡು ಓದುತ್ತಿದೀರೇನು? ಉತ್ತಮ ಕಲಾಕೃತಿ, ಸಾಹಿತ್ಯ ರತ್ನಗಳ ಖನಿ" ಎಂದು ಒಬ್ಬರನ್ನು ಅಭಿನಂದಿಸಿದರೆ, ಅವರು, "ಭವಿಷ್ಯದಲ್ಲಿ ನನಗೆ ಈ ವರ್ಷವೆಲ್ಲ ಕೆಟ್ಟದ್ದನ್ನೇ ನುಡಿದಿದಾನೆ, ಹಾಳು ಹೋರಾಶಾಸ್ತ್ರಿ, ಕೊಟ್ಟ ಕಾಸು ದಂಡ" ಎಂದು ತಲೆ ಚಚ್ಚಿಕೊಂಡ.

ಅಂತೂ, ನನ್ನ ಮಂದಹಾಸಕ್ಕೆ ಪ್ರತಿ ಮಂದಹಾಸ ಸಿಗಲೇ ಇಲ್ಲ, ಸಂಜೆತನಕ. ಎಲ್ಲೆಡೆಯಲ್ಲೂ ಅದಕ್ಕೆ ನಕಾರವೇ ದೊರೆಯಿತು. ನಾನೇ ದೀಪವಾಗಿ ತಿರುಗಾಡಿದರೂ, ಆ ಸೊಡರಿಂದ ಒಂದು ಹಣತೆಯನ್ನೂ ಹೊತ್ತಿಸಲು ನನಗೆ ಅವಕಾಶ ದೊರೆಯಲಿಲ್ಲ.

ಕಡೆಗೆ, ನಾನು ನನ್ನ ಕೋಣೆಗೇ ಬಂದೆ; ಅದೇ ಕಿರಿತವನ್ನು ಅಚ್ಚಳಿಯದೆ ಹೊತ್ತು ತಂದೆ. ಅಲ್ಲೊಬ್ಬರು ನನಗೆ ಸಿಕ್ಕಿದರು; ಅದೇ ನಗುಮುಖದವರು. "ಏನು? ಇವತ್ತು ದೀಪಾವಳಿ! ಹೀಗಿರಬೇಕು ನೋಡಿ ನಿಮ್ಮ ಹಾಗೆ ಎಲ್ಲ ಜನರೂ ಮುಖದಲ್ಲಿ ನಗು ನಲಿದಾಡುತ್ತಿರಬೇಕು, ತುಟಿಗಳ ತುದಿಗಳನ್ನಿಳಿಸದೆ, ಹಣೆಯಲ್ಲಿ ಗೆರೆಗಳಿಲ್ಲದೆ, ಬಾಯಿ ತೆರೆಯನ್ನು ತೆರೆದು, ಹಲ್ಲು ಸಾಲನ್ನು ಮಿಂಚಿಸಿ, ಮುಖದ ನಡುವೆ ಮೂಗಿನ ಕೆಳಗೆ ಸೂರ್ಯಕಾಂತಿಯ ಹೂವು ಅಗಲವಾಗಿ ಅರಳಿದಂತೆ......" ಎನ್ನುತ್ತಿದ್ದೆ. ಕೋಣೆಯಲ್ಲಿ ನನಗೆ ಕಾಣಿಸಿಕೊಂಡ ವ್ಯಕ್ತಿ, ಮರುಮಾತನಾಡಲಿಲ್ಲ. ನಾನು ಬಲಗೈ ನೀಡಿಕೊಂಡು, ಅದರ ಹತ್ತಿರಕ್ಕೆ ಹೆಜ್ಜೆ ಇಟ್ಟೆ; ಅದು ಎಡಗೈ ನೀಡಿಕೊಂಡು, ನನ್ನ ಹತ್ತಿರಕ್ಕೆ ಹೆಜ್ಜೆ ಇಟ್ಟಿತು.

---

## ನಗೆಯ ಬಗೆ

ಲೋಕದ ಹರ್ಷ ವಿಲಾಸದೊಳೆಲ್ಲ
ನಿಜಗೆಲವೇ ಶೂನ್ಯ.
ನಗೆಯೆಂಬುದು ಒಳಗಿನ ಕೊರಗ
ಮರೆಸುವ ಕಲೆ–ನಾಟ್ಯ.

— ಹಾರ್ಟ್ಲೆ ಕೋಲರಿಜ

# ಅರವಿಂದ ದರ್ಶನದಲ್ಲಿ ಮಾನವನ ಅಂತಿಮ ಭವಿತವ್ಯ

ಇಂದಿನ ಆಧಿಭೌತಿಕ ಯುಗದಲ್ಲಿ ಆಧ್ಯಾತ್ಮಿಕತೆಯೇ ಮನುಷ್ಯನ ಸಕಲ ಸಂಕಷ್ಟಗಳಿಗೆ ಪರಿಹಾರೋಪಾಯವೆಂದು ಸಾರಿದವರಲ್ಲಿ ಶ್ರೀ ಅರವಿಂದ ಮಹರ್ಷಿಗಳು ಹಿರಿಯರು. ಮಾನವನು ಪರಿಪೂರ್ಣನಲ್ಲ; ಅವನು ಆತ್ಮವಸ್ತುವಿನ ಉತ್ಕ್ರಾಂತಿಪಥದಲ್ಲಿ ಒಂದು ಹಂತ ಮಾತ್ರ. ಅವನ ಮನಸ್ಸು "ಅತಿಮಾನಸ" ವಾಗಿ ಅವನು "ಅತಿಮಾನವ"ನಾಗಿ ಪರಿವರ್ತನೆ ಹೊಂದಬೇಕಾಗಿದೆ. ಅದೇ ಅವನ ಭವಿತವ್ಯ. ಈ ಭವಿತವ್ಯದತ್ತ ಅರಿತು ಮುನ್ನಡೆಯಬೇಕಾದರೆ ಮನಃಪ್ರಮಾಣವನ್ನು ಮೀರಿ ನಿಂತ "ಋತ"ವನ್ನು ಭೂಮಿಗಿಳಿಸಿ ತರಬೇಕು. ಅರವಿಂದರ ಜೀವನ ಈ ಋತಸಾಧನೆಯ ಒಂದು ಸಂತತ ಪ್ರಯತ್ನವಾಗಿತ್ತು.

ಲೇಖಕರು: **ಪ್ರೊ. ಎ. ವಿ. ಶಾಸ್ತ್ರಿ, ಎಂ. ಎ.**

---

೧

೧೯೨೦ ರಲ್ಲಿ ಲೋಕಮಾನ್ಯ ಟಿಳಕರು ನಿಧನ ಹೊಂದಿದರು. ಮಹಾತ್ಮಾಜಿಯವರ ನೇತೃತ್ವದಲ್ಲಿ ಅಸಹಕಾರ ಆಂದೋಲನವು ರಭಸದಿಂದ ಸಾಗಿತು. ಆದರೆ ೧೯೨೨ ರಲ್ಲಿ ಗಾಂಧಿಯವರು ತುರಂಗವನ್ನು ಸೇರಿದಾಗ ಚಳವಳಿಯು ಸ್ತಬ್ಧವಾಯಿತು. ಹಿಮ್ಮೆಟ್ಟುತ್ತಿದ್ದ ಜನತೆಯನ್ನು ಒಟ್ಟುಗೂಡಿಸಿ ಹುರಿದುಂಬಿಸಿ ಮುಂಬರಿಯುವಂತೆ ಮಾಡುವ ನಾಯಕರು ತಲೆದೋರಲಿಲ್ಲ. ಇಂಥ ಪ್ರಸಂಗದಲ್ಲಿ ದಿವಂಗತ ದೇಶಬಂಧು ಚಿತ್ತರಂಜನ ದಾಸರು ಶ್ರೀ ಅರವಿಂದರನ್ನು ಪುನಃ ರಾಜಕೀಯ ಮುಖಂಡರಾಗಬೇಕೆಂದು ಆಮಂತ್ರಿಸಿದರು. ಶ್ರೀ ಅರವಿಂದರು ಅವರಿಗೆ ಉತ್ತರವನ್ನೀಯುತ್ತ ಈ ಅರ್ಥದಲ್ಲಿ ಬರೆದರು: ಎಲ್ಲ ಜೀವನ ಪ್ರವೃತ್ತಿಗಳ ಆಧಾರವೇದರೆ ಆಧ್ಯಾತ್ಮಿಕವೇ— ಯೋಗದಿಂದ ಮಾತ್ರ ಲಭಿಸಬಹುದಾದ ಒಂದು ಹೊಸ ಪ್ರಜ್ಞೆ. ಈ ಹೊಸ ತಳಹದಿಯನ್ನು ಏರುವವರೆಗೆ ಇಡೀ ಮಾನವ ಕುಲವು ತುಳಿಯುತ್ತಿರುವ ನಿರರ್ಥಕ ಚಕ್ರಪಥವನ್ನು ಬಿಟ್ಟು ಮಾನವನು ಎಂದಿಗೂ ಹೊರಗೆ ಬರಲಾರ. ಜಗತ್ತಿನ ಸಲುವಾಗಿ ಈ ಮಹತ್ತಾದ ವಿಜಯವನ್ನು ದೊರಕಿಸುವದೇ ಭಾರತದ ದೈವನಿಯಮಿತ ಕಾರ್ಯವೆಂದು ನಾನು ತಿಳಿದಿದ್ದೇನೆ. ಆದರೆ ಈ ಮಹಾ ಪ್ರಜ್ಞೆಯ ಕ್ರಿಯಾಸಾಮರ್ಥ್ಯದ ನಿರ್ದಿಷ್ಟ ಸ್ವರೂಪ ಲಕ್ಷಣವೇನು? ಆದರ ಸತ್ಯವು ಪ್ರಭಾವಿಯಾಗಲು ಅವಶ್ಯವಾದ ಪೂರ್ವಪರಿಸ್ಥಿತಿ ಯಾವುದು ? ಅದನ್ನು ಹೇಗೆ ಅವತರಿಸಬೇಕು, ಸಜ್ಜುಗೊಳಿಸಬೇಕು, ಸಂಘಟಿಸಬೇಕು, ಜೀವನದತ್ತ ಹೊರಳಿಸಬೇಕು? ಈ ಮಹತ್ ಪರಿವರ್ತನೆಗೆ ಪ್ರಕೃತ ಉಪಕರಣಗಳಾದ ಮನ-ಪ್ರಾಣ-ದೇಹಗಳು ತಕ್ಕ ಶುದ್ಧ ಹಾಗು ಪೂರ್ಣ ವಾಹಕಗಳಾಗುವಂತೆ ಹೇಗೆ ಮಾಡಬೇಕು? ಈ ಸಮಸ್ಯೆಯನ್ನೇ ನನ್ನ ಅನುಭವದ ಮೂಲಕ ಬಗೆಹರಿಸಲು ಪ್ರಯತ್ನಿಸುತ್ತಿದ್ದೇನೆ. . . . . ಪೂರ್ಣ ಭದ್ರವಾದ ಅಸ್ತಿಭಾರದ ಮೇಲೆ ಹೊರತು ನಾನು ಕಟ್ಟಲು ಬಯಸುವದಿಲ್ಲ. ಈ ಹೊಸ ಕ್ರಿಯಾಶಕ್ತಿಯನ್ನು, ಪ್ರೇರಣೆಯನ್ನು ಸಂಪೂರ್ಣವಾಗಿ ಪಡೆಯುವವರೆಗೆ ನಾನು ಬಾಹ್ಯ ಕ್ಷೇತ್ರವನ್ನು ಪ್ರವೇಶಿಸುವುದಿಲ್ಲ.

ಈ ಪತ್ರದ ಸರಣಿಯು ಶ್ರೀ ಅರವಿಂದರ ದೃಷ್ಟಿವೈಶಾಲ್ಯವನ್ನೂ ದೃಢ ಸಂಕಲ್ಪ-ಸಂಯಮಗಳನ್ನೂ ಮಾನವಶ್ರೇಯೋಭಿಲಾಷೆಯನ್ನೂ ನಿಚ್ಚಳವಾಗಿ ಸೂಚಿಸುತ್ತಿದೆ. ಅವರು ಇಲ್ಲಿ ಕೇವಲ ಭಾರತದ ದಾಸ್ಯವಿಮೋಚನೆ, ಭಾರತೀಯರ ಅಭ್ಯುದಯಗಳನ್ನು ಚಿಂತಿಸದೆ ಮಾನವ ಕೋಟಿಯನ್ನು ಇಂದು ಎದುರಿಸುತ್ತಿರುವ ಪ್ರಶ್ನೆಗಳಿಗೆ ಮೂಲ ಪರಿಹಾರವನ್ನು ಹುಡುಕಲು ಹೊರಟಿರುವರು. ವೈಯಕ್ತಿಕ ಮೋಕ್ಷದ ಮಾತಂತಿರಲಿ, ಸ್ವಜನ ಸ್ವದೇಶಾಭಿಮಾನಗಳ ಎಲ್ಲೆಯನ್ನು ದಾಟಿ, ಮಾನವ ಕುಲದ ಅಭಿನ್ನ ಐಕ್ಯವನ್ನು ಕಂಡು, ನೂತನ ಜ್ಞಾನಶಕ್ತಿಗಳಿಂದ ತುಂಬಿದ ಒಂದು ನವ ಸೃಷ್ಟಿಯನ್ನೇ ತಮ್ಮ ಲಕ್ಷ್ಯವನ್ನಾಗಿ ತೋರಿಸಿರುವರು.

ಕೇವಲ ರಾಜಕೀಯ ಸಾಮಾಜಿಕ ಆರ್ಥಿಕ ಧೋರಣೆಗಳಿಂದ ಅಗತ್ಯವಾದ ಶಕ್ತಿಯನ್ನು ಗಳಿಸಲಾಗುವುದಿಲ್ಲ. ಒಂದು ವೇಳೆ ರಾಜಕೀಯ ಸ್ವಾತಂತ್ರ್ಯವನ್ನು ಆ ಮೂಲಕ ಪಡೆಯಬಹುದಾದರೂ ರಾಷ್ಟ್ರೀಯ ಜೀವನದ ಸ್ವರೂಪವನ್ನು, ಅಂತರಂಗವನ್ನು ಶುದ್ಧಗೊಳಿಸಲು, ಬಲಪಡಿಸಲು ಆಗದು. ಒಂದು ದೇಶದ, ಒಂದು ಜನಾಂಗದ ಸಮಸ್ಯೆಯನ್ನು ಬಿಡಿಸಬೇಕಾದರೆ ಕಾಲಪರಿಸ್ಥಿತಿಗಳಿಗಷ್ಟೇ ಹೊಂದುವ ಉಪಾಯಗಳನ್ನು ಹೂಡಿದರೆ ಆಗದು. ಸಮಾಜದ ರೋಗರುಜಿಗಳಿಗೆ ತಾತ್ಕಾಲಿಕ ಚಿಕಿತ್ಸೆ ಮಾಡಿ ಸಮಾಧಾನವಿಲ್ಲ. ವಿಷವೃಕ್ಷದ ರೆಂಬೆ ಕೊಂಬೆಗಳನ್ನು ಕಡಿದರಾಗದು. ಅದರ ಬೇರನ್ನೇ ಕಡಿಯಬೇಕು. ಮಾನವ ಜೀವನದ ಮೂಲ ಪ್ರೇರಣೆಗಳನ್ನು ಶೋಧಿಸಿ, ಮಾನವನ ಸ್ವಭಾವವನ್ನು ಕೂಲಂಕಷ ಪರೀಕ್ಷಿಸಿ, ಮಾನವನ ಗುರಿ ಏನೆಂಬುದನ್ನು ನಿಷ್ಕರ್ಷಿಸಿ, ಸ್ವಭಾವಕ್ಕನುಗುಣವಾದ ನೀತಿಯನ್ನು ಅನುಸರಿಸಿದರೆ ಮಾತ್ರ ವಿಪತ್ತನ್ನು ತೊಲಗಿಸಬಹುದು.

ಇಂಥ ಪ್ರಜ್ಞೆಯನ್ನು, ವಿವೇಕವನ್ನು ಪಡೆಯಬೇಕು. ಇಂಥ ಶಕ್ತಿಯನ್ನು ಲಭ್ಯಮಾಡಿಕೊಳ್ಳಬೇಕು. ಈ ಜ್ಞಾನ—ಶಕ್ತಿಗಳನ್ನು ಜೀವನಕ್ಕೆ ಅನ್ವಯಿಸಿ, ಜೀವನವನ್ನು ದೈವೀ ಲೀಲೆಯನ್ನಾಗಿ ಪರಿಣಮಿಸಬೇಕು. ಅಂದರೆ ಮಾನವನ ಬಗ್ಗೆ ವಿಚಾರವನ್ನೂ ವಿಚಾರಕ್ಕಿಂತ ಹಿರಿದಾದ ಅನುಭವವನ್ನೂ ಅನಂತದತ್ತ ಚಾಚಿದಾರೆ ಶ್ರೀ ಅರವಿಂದರು. ಈ ದೃಷ್ಟಿಯಿಂದ ಹಿರಿಮೆಯನ್ನು- ಆಳ, ಎತ್ತರ, ಅಗಲಗಳನ್ನು- ಕೇವಲ ಬುದ್ಧಿಯ ಮಟ್ಟದಿಂದ ತಿಳಿಯಲು ಸಾಧ್ಯವಿಲ್ಲ. ಅಂತಿಮ ಭವಿತವ್ಯದ ಕಲ್ಪನೆ-ಭರವಸೆಗಳಿಲ್ಲದಿದ್ದರೆ ಅತಿ ಸಮೀಪ ಕಾಲದ ಭವಿತವ್ಯವನ್ನಾದರೂ ನಿರ್ಣಯಿಸಲಾಗುವುದಿಲ್ಲ. ದೈನಿಕ ವ್ಯವಹಾರವಂತೂ ಕಣ್ಣುಮುಚ್ಚಾಲೆಯಾಟವಾಗುವುದು.

೨

ಹಾಗಾದರೆ ಮಾನವ ಸಿದ್ಧಾಂತವೇನು? ಸೃಷ್ಟಿಯಲ್ಲಿ ಮಾನವನ ಸ್ಥಾನವೇನು ? ಅವನ ಗುರಿ ಏನು ? ಸಾಧನೋಪಾಯಗಳೇನು ? ಜೀವನ ಸಾರ್ಥಕ್ಯವೆಂದರೇನು ? ಪ್ರಗತಿಯ ನಿಜವಾದ ಅರ್ಥವೇನು? ಈ ಪ್ರಶ್ನೆಗಳು ಮಾನವನಷ್ಟೆ ಹಳೆಯವಾಗಿವೆ. ಪೂರ್ವ-ಪಶ್ಚಿಮದವರು ಭಿನ್ನ-ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಮಾಡಿರುವರು.

ಪಾಶ್ಚಾತ್ಯರ ದೃಷ್ಟಿ ಮುಖ್ಯವಾಗಿ ಭೌತಿಕ ದೃಷ್ಟಿ. ಅವರ ಪ್ರಕಾರ ಭೌತಿಕವೇ ಮೂಲ ಸರ್ವಸ್ವವಾಗಿದ್ದು ಮಾನವನ ಮನಸ್ತತ್ವವಾದರೂ ಅದರ ಒಂದು ಪ್ರಕ್ರಿಯೆಯಾಗಿ ಮೂಡಿಬಂದಿದೆ. ಶ್ರೀ ಅರವಿಂದರು ಹೀಗೆ ತಿಳಿಯುವುದಿಲ್ಲ. ಮಾನವನೆಂದರೆ ಕೇವಲ ಭೌತಸೃಷ್ಟಿಯಲ್ಲ. ಅವನು ಆತ್ಮಸ್ವರೂಪಿ, ಭಗವದಂಶ,-- ಶರೀರ ಮನಗಳು ಹೊದಿಕೆಗಳು ಮಾತ್ರ. ಮಾನಸಿಕ, ನೈತಿಕ, ವ್ಯಾವಹಾರಿಕ, ದೈಹಿಕ ಮತ್ತಿತರ ವಿಕಾಸವು ಎಡೆಬಿಡದೆ ಸಾಗಿದ್ದರೂ ಈ ಎಲ್ಲ ಕಾರ್ಯಕಲಾಪಗಳು ಆತ್ಮದ ಅಭಿವ್ಯಕ್ತ ಶಕ್ತಿಗಳೇ. ಇವುಗಳ ಮೊತ್ತವು ಆತ್ಮದ ಸರ್ವಸ್ವವಲ್ಲ. ಉತ್ಕರ್ಷ ಪಥದಲ್ಲಿ ಆತ್ಮವು ಇವಕ್ಕೂ ಹಿರಿದಾದ ಸ್ಥಿತಿಯನ್ನು ಪಡೆದು ಆಧ್ಯಾತ್ಮಜೀವಿಯಾಗಿ ಪ್ರಕಾಶಿಸುವುದು. ಈ ಅಂತಿಮ ದೆಸೆಯೇ ಮಾನವನ ಪರಮಾರ್ಥ ಪುರುಷಾರ್ಥಗಳೆಂದು ಬಗೆಯಲ್ಪಟ್ಟವೆ.

ಎರಡನೆಯದಾಗಿ ಶ್ರೀ ಅರವಿಂದರು ಮಾನವ ಸ್ವಭಾವವನ್ನು ಅತಿ ಸುಲಭವೆಂದಾಗಲಿ, ಕ್ಲಿಷ್ಟ ರಹಿತವೆಂದಾಗಲಿ ಎಣಿಸುವುದಿಲ್ಲ. ಅವನು ಬಹುಮುಖ ಜೀವಿ. ಅವನ ಪ್ರಕೃತಿಯು ಎಷ್ಟೇ ಸರಳ ಕಂಡರೂ ಸಪ್ತತತ್ವಗಳ ರಚನೆಯಾಗಿದೆ. ಮಾನವ ಪ್ರಗತಿಯು ನಿಶ್ಚಿತವಾಗಬೇಕಾದರೆ ಸೂಕ್ಷ್ಮದಿಂದ ಸ್ಥೂಲದತ್ತ ಧಾವಿಸಬೇಕು. ತೊಡಕನ್ನು ನಿವಾರಿಸಬೇಕೆಂದು, ಅವಸರದಲ್ಲಿ ಫಲವನ್ನು ಪಡೆಯುಬೇಕೆಂದು ನಾವು ವಿವಿಧ ಸಂಪದ್ಯುಕ್ತವಾದ ಮಾನವ ಸ್ವಭಾವವನ್ನು ಒಂದೇ ಸೂತ್ರಕ್ಕೆ ಒಂದೇ ನಿಯಮಕ್ಕೆ ಇಳಿಸಿದರೆ ತೊಡಕು ನಿವಾರಣೆಯಾಗುವುದಿಲ್ಲ. ನಾವು ಫಲವಂಚಿತರಾಗುತ್ತೇವೆ. ನಮ್ಮ ವಿಕಾಸವೇ ಕುಗ್ಗುವುದು. ತಾಳ್ಮೆಯಿಂದ ನಾವು ಒಂದೊಂದು ಅಂಶದಲ್ಲಿಯೂ ಪ್ರತಿಯೊಂದು ಅಂತಸ್ತಿನಲ್ಲಿಯೂ (In all the parts and planes of being) ಸಾಧನೆಗೈಯಬೇಕು.



ಮೂರನೆಯದಾಗಿ ಶ್ರೀ ಅರವಿಂದರು ಮಾನವನನ್ನು ಸ್ಥಿರ ಪ್ರಾಣಿಯೆಂದು ಬಗೆಯುವುದಿಲ್ಲ. Man is a transitional being ಎಂದು ಅವರು ಹೇಳುತ್ತಾರೆ. ಈಗಿನ ಸ್ಥಿತಿಯಲ್ಲಿ ಅಂತರವಾಗುವುದು. ಮಾನವನು ಪರಿಪೂರ್ಣನಲ್ಲ, ಹಾಗೆಂದೇ ಅವನಲ್ಲಿ ಬದಲಾವಣೆ ಆಗಲೇಬೇಕು. ಅವನ ಕೆಳಗೆ ಎಷ್ಟೋ ದರ್ಜೆಗಳಿವೆ. ಮೇಲೆಯಾದರೂ ಎಷ್ಟೋ ದರ್ಜೆಗಳಿರುವುವು. ಮಾನವನ ಲೋಕ ಮಧ್ಯಲೋಕ, ಪರಿವರ್ತನೆಯ ಕ್ಷೇತ್ರ; ಮಾನವನು ಒಂದು ದೆಸೆಯಿಂದ ಇನ್ನೊಂದು ದೆಸೆಗೆ ಸಾಗುತ್ತಿರುವ ಪಯಣಿಗ.

ಈ ಸಮ್ಯಗ್‌ದೃಷ್ಟಿಗೆ ವಿರುದ್ಧವಾಗಿ ಪಾಶ್ಚಾತ್ಯರಲ್ಲಿ ಮೊನ್ನೆಮೊನ್ನೆಯ ವರೆಗೆ ಸಾಮಾನ್ಯವಾಗಿ ಒಪ್ಪಿಕೊಂಡ ತತ್ವವೆಂದರೆ-ಮಾನವನು ಸ್ವಯಂಪೂರ್ಣನು, ಸ್ವತಂತ್ರನು ಎಂದು. ಮಾನವನ ತರ್ಕಬುದ್ಧಿಯೇ ಅವನ ವೈಶಿಷ್ಟ್ಯ; ಅದೇ ಅಂತಿಮ ಪ್ರಮಾಣ. ಇದು ಗ್ರೀಕರ ಯುಗದಿಂದ ನಡೆದು ಬಂದ ಪರಂಪರೆ. ಆ ಜನರಿಗೆ ಬಾಹ್ಯಸೌಂದರ್ಯವೇ, ಆಕಾರಸೌಷ್ಟವವೇ ಶೀಲವಾಗಿತ್ತು. ಗ್ರೀಕರ ಸೌಂದರ್ಯಾರಾಧನೆಯನ್ನು ಕಡೆಗಣಿಸಿ ಆಧುನಿಕ ಯುರೋಪಿಯನರು ಉಪಯುಕ್ತತೆ-ವ್ಯಾವಹಾರಿಕತೆಗಳನ್ನೇ ತಮ್ಮ ದೈವವನ್ನಾಗಿ ಮಾಡಿಕೊಂಡಿರುವರು. ಆಧುನಿಕ ಶಾಸ್ತ್ರೀಯ ಮನೋವೃತ್ತಿಯ ಮುಖ್ಯ ಲಕ್ಷಣಗಳೆಂದರೆ-ವಸ್ತುಗಳ ನಿರೀಕ್ಷಣೆ, ಪೃಥಕ್ಕರಣ, ವರ್ಗೀಕರಣ, ಊಹಾಪೋಹ, ರುಜುವಾತು, ಒಂದು ತತ್ವನಿರೂಪಣೆ. ಪ್ರತಿ ಹೆಜ್ಜೆಗೂ ಮನಃಪ್ರಧಾನ ತರ್ಕದ ಮುದ್ರೆ ಇರಬೇಕು. ವಿಚಾರ ಯುಗವು ಅತ್ಯಗಾಧ ಭೌತಿಕ ಪ್ರಗತಿಯನ್ನು ಸಾಧಿಸಿದೆ. ಪ್ರಯೋಗಶಾಲೆಗಳಲ್ಲಿ ನಡೆಸಿದ ಪ್ರಯೋಗಗಳ ಪರಿಣಾಮವಾಗಿ ಮಾನವನ ಸ್ಥೂಲ ಶರೀರದ ಸರ್ವ ಅವಯುವಗಳ ರಚನೆ, ಕ್ರಿಯೆಗಳನ್ನು ತಿಳಿದಿದ್ದಾಗಿದೆ. ಆದರೆ ಮಾನವನ ಅಂತರಂಗವನ್ನು, ಮೂಲ ಸತ್ವ-ಸ್ವಭಾವಗಳನ್ನು ತಿಳಿಯಲಾಗಲಿಲ್ಲ. ಕುತೂಹಲವು ಮಾತ್ರ ಕ್ರಮೇಣ ಹೆಚ್ಚುತ್ತಿದೆ. Man in the Modern World, The Condition of Man, The Diagnosis of Man, The Inequality of Man, Man the Un–known –ಇತ್ತೀಚೆಗೆ ಪ್ರಕಟವಾದ ಈ ಹೆಸರಿನ ಕೆಲವು ಪುಸ್ತಕಗಳಿಂದ ಇದು ವಿದಿತವಾಗುತ್ತದೆ. ಆಂತರಿಕ ನಿರೀಕ್ಷಣೆಯು ಆರಂಭವಾಗಿದೆ. ವ್ಯಕ್ತಿಯುಗವು (ಸ್ವಾತಂತ್ರ್ಯ ಯುಗ, ವಿಚಾರ ಯುಗ) ಆಂತರಿಕ ಅವಸ್ಥೆಯನ್ನು ಮುಟ್ಟಿದೆ. ಕಾವ್ಯ, ಕಲೆ, ಶಿಕ್ಷಣ ರಂಗಗಳಲ್ಲಿ ಈ ಮನೋವೃತ್ತಿಯ ಪ್ರಥಮಾವಿಷ್ಕಾರವನ್ನು ಕಾಣಬಹುದು.

ಮಾನವನ ಅಪೂರ್ಣತೆ ಅಸ್ಥಿರತೆಗಳು ಯುರೋಪಿನ ವಿಚಾರವಂತರಲ್ಲಿ ೧೯ ನೆಯ ಶತಮಾನದಲ್ಲಿ ಜರ್ಮನ ನೀಟ್ಸೆ ಒಬ್ಬನಿಗೇ ಹೊಳೆದವು. Man is something that hath to be surpassed- ಎಂಬ ಮಾತಿನಲ್ಲಿ ಮಾನವನ

ಬಗ್ಗೆ ಅವನು ಸಂಶಯುವನ್ನು ಸೂಚಿಸಿದನು. ಅತಿಮಾನವ ವಾದವನ್ನು ಮೊದಲು ಪ್ರಸ್ತಾಪಿಸಿದವನು ನೀಟ್ಸಿಯೇ. ಇಪ್ಪತ್ತನೆಯ ಶತಮಾನದಲ್ಲಿ ಪ್ರಸಿದ್ಧ ನಾಟಕಕರ್ತನಾದ ಬರ್ನಾರ್ಡ ಷಾನು Man and Superman ಎಂಬ ನಾಟಕದಲ್ಲಿ ಅತಿಮಾನವನ ಸಿದ್ಧಾಂತವನ್ನು ಪುನಃ ಪ್ರಸಂಗರಂಗದಲ್ಲಿ ತಂದ. ಹೀಗೆ ಅಲ್ಲಲ್ಲಿ ಈ ವಿಚಾರಸರಣಿಯು ತಲೆದೋರಿದ್ದರೂ ಮಾನವಸ್ವಭಾವದ ಪೂರ್ಣ ಜ್ಞಾನವಿಲ್ಲದುದರಿಂದ ಹಾಗು ಅತಿಮಾನವನ ನಿರ್ದಿಷ್ಟ ದೈವಿಕ ಕಲ್ಪನೆ ಇಲ್ಲದುದರಿಂದ ಪಾಶ್ಚಾತ್ಯರಲ್ಲಿ ಇದು ಕೇವಲ ಒಂದು ಮೋಜಿನ ಭಾವನೆಯಾಗಿ ಉಳಿದಿದೆ. ಇಂಥ ಭಾವನೆಗಳ ಸಂಚಾರವು ಶ್ರೀ ಅರವಿಂದರ ಯೋಗಸಿದ್ಧ ಸತ್ಯ ಸಾಕ್ಷಾತ್ಕಾರಗಳ ಸೃಷ್ಟಿ ಪ್ರಕರಣಕ್ಕೆ ಯೋಗ್ಯವಾದ ಪ್ರಸ್ತಾವನೆಯಾಗಿದೆ.

೩

ಮಾನವನ ಅಂತಿಮ ಭವಿತವ್ಯವನ್ನು ನಾವು ಗೊತ್ತುಪಡಿಸಬೇಕಾದರೆ ಅವನ ಸದ್ಯದ ಸ್ಥಿತಿಯನ್ನರಿಯಬೇಕು. ಇಂದು ಯಾವುದೋ ಒಂದು ವಿಷಮ ಪರಿಸ್ಥಿತಿಯು ವ್ಯಕ್ತಿಯನ್ನೂ ಸಮಾಜವನ್ನೂ ಎದುರಿಸುತ್ತಿದೆ; ಹಾಗೆಂತಲೇ ಜಗತ್ತಿನಲ್ಲಿ ನಾವು ನೋಡುತ್ತಿರುವ ತಾರುಮಾರುಗಳು. ಜಗವೇ ಕ್ಷೋಭೆಗೆ ಈಡಾಗಿದೆ. ಬೇರೆ ಬೇರೆ ಜನರು ತಮ್ಮ ತಮ್ಮ ದೃಷ್ಟಿಕೋನಗಳಿಂದ ಈ ಪರಿಸ್ಥಿತಿಯನ್ನು ಅವಲೋಕಿಸಿ ಪರ್ಯಾಲೋಚಿಸಿ ಹೀಗಾಗಲು ಕಾರಣವೇನು, ಇದು ಹೇಗೆ ಕೊನೆಗಾಣಬೇಕು ಎಂಬುದನ್ನು ತಿಳಿಸಿದ್ದಾರೆ. ರಾಜಕೀಯ ಗಂಡಾಂತರವೆಂದು ಕೆಲವರು, ಸಾಂಸ್ಕೃತಿಕ ಗಂಡಾಂತರವೆಂದು ಕೆಲವರು, ಸಾಮಾಜಿಕ ಗಂಡಾಂತರವೆಂದು ಮತ್ತೆ ಕೆಲವರು, ಧಾರ್ಮಿಕ ಗಂಡಾಂತರವೆಂದು ಇನ್ನೂ ಕೆಲವರು, ಆರ್ಥಿಕ ಗಂಡಾಂತರವೆಂದು ಅನೇಕರು ಅಭಿಪ್ರಾಯ ಪಟ್ಟಿರುವರು. ಅವರು ತಿಳಿವ ನೇರೆಗೆ ಸಲಹೆಯನ್ನಾದರೂ ಕೊಟ್ಟಿರುವರು. ಈ ಎರಡೂ ಭಾಗದಲ್ಲಿ ಸತ್ಯದ ಅಂಶವಿದ್ದರೂ ಇಡೀ ಸತ್ಯವು ಈ ಪ್ರತ್ಯೇಕ ದೃಷ್ಟಿಗೆ ಕಾಣಿಸುವುದಿಲ್ಲ. ಜೇನೆ ಏನು ಎಂದು ಗೊತ್ತಾದರೆ ಅಲ್ಲವೇ ಅದನ್ನು ಗುಣಪಡಿಸಬಹುದು?

ಶ್ರೀ ಅರವಿಂದರು ತಮ್ಮ ವಿಶಾಲ ಸಮಗ್ರ ದೃಷ್ಟಿಯನ್ನು ಹರಹಿ ಕೇವಲ ಒಂದು ದೇಶ ಒಂದು ಜನಾಂಗದವರಿಗೆ ಬಂದಿರುವುದಲ್ಲ ಈ ಕುತ್ತು; ಇದು ಆ ಈ ಜೀವದ ಪ್ರಸಂಗಕ್ಕೆ ಮಾತ್ರ ಸಂಬಂಧಿಸಿದ ತೊಡಕಲ್ಲ; ಮಾನವನನ್ನು ಇಂದು ಎದುರಿಸುತ್ತಿರುವುದು ಒಂದು Evolutionary crisis;- ಅವನ ವಿಕಾಸ ಕ್ರಮದಲ್ಲಿ ಉಂಟಾಗಿರುವ ವಿಷಮ ಪರಿಸ್ಥಿತಿ ಎಂದು ಹೇಳುತ್ತಾರೆ. ಮನಃಪ್ರಧಾನ ಮಾನವನ ಯುಗ ಮುಗಿದಿದೆ, ಮನವನ್ನೇ ಅವಲಂಬಿಸಿ ಯೋಜಿಸಿದ ಸರ್ವ ಪ್ರಯತ್ನಗಳೂ ವಿಫಲವಾಗಿವೆ. ಮಾನವನ ಭವಿತವ್ಯವೇ ಇಂದು ನಿಷ್ಕರ್ಷೆಯಾಗಬೇಕು. ಕೆಲವು ದಿಸೆಗಳಲ್ಲಿ ನಾವು ಅಪಾರ ಬೆಳವಣಿಗೆಯನ್ನು ಸಾಧಿಸಿದ್ದೇವೆ. ಇತರ ದಿಸೆಗಳಲ್ಲಿ ಪ್ರಗತಿಯು ತಡೆಯಾಗಿ ಮಾನವನು ದಿಙ್ಮೂಢನಾಗಿ ನಿಂತಿದ್ದಾನೆ; ಮುಂದಿನ ಹೆಜ್ಜೆ ತಿಳಿಯದಾಗಿದೆ. ರಜಃಪ್ರೇರಿತನಾಗಿ ಆವರಣ ಸನ್ನಿವೇಶಗಳನ್ನು ಅಳತೆ ಮೀರಿ ಕಲ್ಪಿಸಿಕೊಂಡಿದ್ದಾನೆ. ಅವುಗಳಿಗೆ ಹೊಂದಿಕೊಂಡು ಹೋಗುವ ಸಾಮರ್ಥ್ಯವಿಲ್ಲ. ತನ್ನ ಪರಿಮಿತ ಬುದ್ಧಿಗೆ ಮೀರಿದ ನಾಗರಿಕತೆಯನ್ನು ನಿರ್ಮಿಸಿದ್ದಾನೆ. ಸ್ವಾರ್ಥ ಹಸಿವು ಹಂಬಲಗಳ ಕೀಳು ತೃಪ್ತಿಗೆ ನಾಗರಿಕತೆಯನ್ನು ಒಗ್ಗಿಸಿಕೊಂಡಿದ್ದಾನೆ. ಇದನ್ನು ಮೀರಿದ ಸ್ಥಿತಿಯನ್ನು ಪಡೆಯಲು ಅವಶ್ಯಕವಾದ ಸೂಕ್ಷ್ಮ ದೃಷ್ಟಿ, ಸಹಜ ಜ್ಞಾನ, ಕ್ರಿಯಾಶಕ್ತಿಗಳು ಮೂಡಿಬಂದಿಲ್ಲ. ಭೌಗೋಲಿಕ ದೃಷ್ಟಿಯಿಂದ ನಾವು ಒಬ್ಬೊಬ್ಬರ ನೆರೆಯವರಾಗಿದ್ದೇವೆ. ವಿಶ್ವಶಕ್ತಿಯನ್ನು ವೈಜ್ಞಾನಿಕ ಸಂಶೋಧನೆಗಳು ಒದಗಿಸಿಕೊಟ್ಟಿವೆ. ಆದರೆ ಈ ವಿಶ್ವಶಕ್ತಿ ಸಮೂಹವನ್ನು ಉಪಯೋಗಿಸುವ ಮಾನವನು ಸ್ವಭಾವತಃ ಕ್ಷುಲ್ಲಕನಾಗಿರುವನು. ದೃಷ್ಟಿಹೀನನಾಗಿರುವನು. ವಿರೋಧ ವಿಚಾರಗಳ ಘರ್ಷಣೆಯಿಂದ ಉಂಟಾದ ಅವ್ಯವಸ್ಥಾಸ್ಥಿತಿ, ವೈಯಕ್ತಿಕ ಸಾಂಘಿಕ ಅಗತ್ಯ ಅಡಚಣೆಗಳ ಹೋರಾಟ, ವ್ಯಕ್ತಿಗಳ, ವರ್ಗಗಳ, ಜನಾಂಗಗಳ ಸ್ವೇಚ್ಛಾಚಾರ, ಆರ್ಥಿಕ, ಸಾಮಾಜಿಕ, ರಾಜಕೀಯ ಯುಕ್ತಿಗಳ ತತ್ವಗಳ ವಾದವಿವಾದ, ವಿಪುಲ ಪ್ರಚಾರ, ಪಕ್ಷಪಂಗಡಗಳ ಅವಸರದ ಕೂಗುಗಳು, —ಇವೆಲ್ಲವುಗಳ ಗೊಂದಲವು ಜಗದ್ವ್ಯಾಪಿಯಾಗಿದೆ. ಪರರನ್ನು ಪೀಡಿಸುವುದು, ತಾವೇ ಪೀಡೆಗೆ ಗುರಿಯಾಗುವುದು, ಕೊಲ್ಲುವುದು, ತಾವೇ ಕೊಲೆಗೆ ಗುರಿಯಾಗುವುದು, ಹೇಗಾದರೂ ಪ್ರಚಾರ ಮಾಡುವುದು, –ಇವು ಈ ಕಾಲದ ರೀತಿನೀತಿಗಳಾಗಿವೆ. ಆಧುನಿಕ ಮಾನವನ ಜೀವನ ಕ್ಷೇತ್ರವು ಅನಿವಾರ್ಯವಾಗಿ ವಿಶ್ವವೈಶಾಲ್ಯವನ್ನು ತಾಳಿದೆ. ಆದರೆ ಅಹಂಭಾವ ಪ್ರತ್ಯೇಕತೆ ಭಿನ್ನತೆಗಳನ್ನೇ ಮುದ್ರೆಯನ್ನಾಗಿ ಹೊತ್ತ ಮಾನವನು ವಿಶ್ವಶಕ್ತಿಗೆ ಆಹ್ವಾನವಿತ್ತರೆ, ಬಾಗಿಲು ತೆರೆದರೆ ಅದರ ಪರಿಣಾಮವಾಗಿ ತಾಳಮೇಳವಿಲ್ಲದೆ ಭಾವನೆಗಳ ಪ್ರವೃತ್ತಿಗಳ ಉಕ್ಕಿಬರುವ ತೆರೆಗಳಿಗೆ, ಕಸಕಡ್ಡಿ ಕೊಚ್ಚಿಕೊಂಡು ಬರುವ ಪ್ರವಾಹಕ್ಕೆ ಅವಕಾಶ ಮಾಡಿಕೊಟ್ಟಹಾಗಾಗುವುದು. ಈ ಬಿಕ್ಕಟ್ಟಿನಿಂದ ಪಾರಾಗಬೇಕಾದರೆ ಹೊಸ ಶಕ್ತಿ ಹೊಸ ಜ್ಞಾನಗಳನ್ನು ಸಂಪಾದಿಸಬೇಕು. ಇಲ್ಲವೆ ಸರ್ವನಾಶ ಸಂಭವಿಸುವುದು. ನೊಂದು ಬೆಂದ ಮಾನವನು ಯಾವ ಯಾವ ವಿಪರೀತ ಪರಿಹಾರ ಮಾರ್ಗಗಳನ್ನು ಹುಡುಕಿರುವನು, ಹಾದಿ ತಪ್ಪಿರುವನು ಎಂಬುದನ್ನು ಶ್ರೀ ಅರವಿಂದರ The Human Cycle, The Ideal of Human Unity, ಹಾಗು The Life Divine ದ ಕೊನೆಯ ಅಧ್ಯಾಯವನ್ನು ಓದಿದರೆ ಸ್ಪಷ್ಟವಾಗುವುದು. ಅವುಗಳನ್ನು ವಿವರವಾಗಿಯಾಗಲಿ ಸಂಗ್ರಹವಾಗಿಯಾಗಲಿ ಇಲ್ಲಿ ನಿರೂಪಿಸಲು ಸ್ಥಳವಿಲ್ಲ.

೪

ಮಾನವ ಸ್ವಭಾವದ ಮೂಲಪರಿವರ್ತನೆಯೇ ಆಗಬೇಕು. ಈ ಪರಿವರ್ತನೆಯು ಪ್ರಕೃತಿಯ ಗೂಢೋದ್ದೇಶವೂ ಹೌದು. ಮಾನವನ ಅಭೀಪ್ಸೆಯೂ ಅತ್ತ ಸಾಗಿದೆ. ಅಚೇತನದಿಂದ ಆರಂಭವಾದ ವಿಕಾಸವು ಲೋಹಸಸ್ಯಾದಿಗಳಲ್ಲಿ ಇದ್ದೂ ಇಲ್ಲದಂತೆ ಪ್ರಕಟವಾಯಿತು. ಪ್ರಾಣವು ಮೂಡಿಬಂದಿತು. ಅ ತರುವಾಯ ಮನವು ಆವಿರ್ಭವಿಸಿತು. ಇನ್ನು ಮುಂದೆ ಅನಿವಾರ್ಯವಾಗಿ "ಅತಿಮಾನಸ" ವು ಹೊರಹೊಮ್ಮಲೇಬೇಕು. ಜಡಸೃಷ್ಟಿಯಲ್ಲಿ ಲೀನವಾದ ಆತ್ಮಸರ್ವಸ್ವವೂ ಕ್ರಮೇಣ ರೂಪ ತಾಳಲೇ ಬೇಕು. ಆತ್ಮತತ್ವ ಬೇರೆ, ಭೌತಿಕ ತತ್ವ ಬೇರೆಯಲ್ಲ. ತುದಿಯಿಂದ ತುದಿಯವರೆಗೂ ಹಬ್ಬಿರುವ ಈ ಸೃಷ್ಟಿಯ ಒಂದು ತುದಿಯಲ್ಲಿ ಆತ್ಮನು ಪರಾತ್ಪರ ಜ್ಯೋತಿಯಾಗಿ ಹೊಳೆಯುತ್ತಿದ್ದರೆ ಮತ್ತೊಂದು ತುದಿಯಲ್ಲಿ ಅದೇ ಆತ್ಮನು ರಾಹುಗ್ರಸ್ತನಾಗಿ ( ಸ್ವಾಪೇಕ್ಷೆಯಿಂದ, ಆನಂದ ಸ್ಫುರಿತ ಲೀಲೆಯಲ್ಲಿ ) ಜಡದಲ್ಲಿ ಅದೃಶ್ಯನಾಗುವನು. ನಡುವೆ ವಿಕಾಸದ ಬೇರೆ ಬೇರೆ ಹಂತಗಳು.

ವಿಕಾಸ ಕ್ರಮದಲ್ಲಿ ಮಾನವನು ಮುಂದುವರಿಯಬೇಕಾದರೆ ಮನವೆಂಬ ಅನಿಶ್ಚಿತ ಸಂಶಯಾತ್ಮಕ ಪ್ರಮಾಣವನ್ನು ತೊರೆದು ಅದರ ಮೇಲು ಅಂತಸ್ತಿನ ಅತಿಮಾನಸವನ್ನು ಶರಣು ಹೋಗಬೇಕು. ಇದನ್ನು ವೇದಕಾಲದ ಋಷಿಗಳು ಋತ-ಚಿತ್ ಎಂದು ಗುರುತಿಸಿದರು. ಇದನ್ನೇ ಶ್ರೀ ಅರವಿಂದರು Supermind, Truth-consciousness, Knowledge-Will, Real-Idea, Gnostic Consciousness ಎಂದು ಅನೇಕ ರೀತಿಯಲ್ಲಿ ಬಣ್ಣಿಸಿರುವರು. ಹಿಂದಿನ ಋಷಿಗಳು, ಶ್ರೀ ಅರವಿಂದರು ಹೇಳುವಂತೆ, ಈ ಶಕ್ತಿಯನ್ನು ಕೆಳಗೆ ತರಲು ಪ್ರಯತ್ನಿಸಲಿಲ್ಲ. ಭೌತಸೃಷ್ಟಿಯ ಪರಿವರ್ತನೆಯ ಉದ್ದೇಶವನ್ನಿಟ್ಟುಕೊಂಡು ವೇದಕಾಲದ ಋಷಿಗಳು ಅತಿಮಾನಸವನ್ನು ಶೋಧಿಸಲಿಲ್ಲ. ವೈಯಕ್ತಿಕವಾಗಿ ಅವರು ಅತಿಮಾನಸ ಪ್ರಜ್ಞಾಭೂಮಿಗೆ ಏರಲು ಪ್ರಯತ್ನಿಸಿದರು. ಆದರೆ ಅದನ್ನು ಕೆಳಗೆ ತಂದು ಮರ್ತ್ಯ ಪ್ರಜ್ಞೆಯ ಒಂದು ಶಾಶ್ವತ ಭಾಗವನ್ನಾಗಿ ಮಾಡಲು ಹವಣಿಸಲಿಲ್ಲ.

ಶ್ರೀ ಅರವಿಂದರ ಪೂರ್ಣಯೋಗವು ಎರಡು ಚಲನೆಗಳನ್ನು ಒಳಗೊಂಡಿದೆ. ಒಂದು ಮೇಲೇರುವುದು, ಎರಡು ಕೆಳಗಿಳಿಯುವುದು. ಉನ್ನತ ಉನ್ನತತರ ಪ್ರಜ್ಞೆಯನ್ನೈದಿ ಆ ಪ್ರಜ್ಞೆಯನ್ನು ಮನ-ಪ್ರಾಣಗಳಲ್ಲಿ ತರುವುದಲ್ಲದೆ ಅಂತಿಮ ದೆಸೆಯಲ್ಲಿ ಶರೀರದಲ್ಲಿಯೂ ತರಬೇಕು. ಅತ್ಯುನ್ನತ

ಪ್ರಜ್ಞಾಭೂಮಿ ಎಂದರೆ ಅತಿಮಾನಸವ. ಅದನ್ನು ಕೆಳಗೆ ತಂದಾಗಲೇ ಮರ್ತ್ಯಪ್ರಜ್ಞೆಯ ದೈವೀ ಪರಿವರ್ತನೆಯು ಸಾಧ್ಯ. ಭೌತಸೃಷ್ಟಿಗೂ ಪ್ರಾಣಸೃಷ್ಟಿಗೂ ಎಷ್ಟು ವ್ಯತ್ಯಾಸವಿರುವುದೋ, ಪ್ರಾಣಸೃಷ್ಟಿಗೂ ಮಾನವನಿಗೂ ಎಷ್ಟು ವ್ಯತ್ಯಾಸವಿರುವುದೋ, ಮಾನವನಿಗೂ ಅತಿಮಾನವನಿಗೂ ಅಷ್ಟೇ ವ್ಯತ್ಯಾಸವಿರುವುದು. ಅತಿಮಾನಸವು ಈಗಲಾದರೂ ನಮ್ಮ ಪ್ರಕೃತಿಯಲ್ಲಿ ಹುದುಗಿಕೊಂಡು ಗುಪ್ತ ಶಕ್ತಿಯಾಗಿ ಕೆಲಸ ಮಾಡುತ್ತಿದೆ. ಅದು ಪ್ರಕಾಶವಾಗಬೇಕು, ನೇರವಾಗಬೇಕು, ನಿರಂತರವಾಗಿ, ನಿರಾತಂಕವಾಗಿ ವರ್ತಿಸಬೇಕು. ಈಗ ಅದು ಕೀಳು ಉಪಕರಣಗಳ ಮೂಲಕ ಅಸ್ಪಷ್ಟವಾಗಿ ಮೂಡುತ್ತಿದೆ. ಮನ-ಪ್ರಾಣ-ದೇಹಗಳ ನ್ಯೂನತೆಗಳಿಂದ ಕಳೆಗುಂದಿ ಬಲಗುಂದಿ ವ್ಯಕ್ತವಾಗುತ್ತಿದೆ. ಆದರೆ ಮೇಲಿನಿಂದ ಅದು ಅವತರಿಸಿದಾಗ, ಅದು ಪೃಥ್ವಿಯನ್ನು ಸುತ್ತಮುತ್ತುವುದು, ಒಳಹೋಗುವುದು, ಈ ನ ಪ್ರಕೃತಿಯನ್ನೇ ಪಲ್ಲಟಗೊಳಿಸಿ ಪರಿವರ್ತಿಸುವುದು. ಅತಿಮಾನಸ ಭಾಸ್ಕರನು ಕೇವಲ ಮಾನವನ ಶ್ರೇಯಸ್ಸನ್ನು ಹಿತವನ್ನು ಉದ್ದೇಶವಾಗಿಟ್ಟುಕೊಂಡು ಉದಯಿಸುವುದಿಲ್ಲ. ವಿಶಾಲ ವಿಶ್ವದ ಅಗತ್ಯವೇ ಅದರ ಮುಖ್ಯ ಪ್ರೇರಣೆ. ವಿಕಾಸಕ್ರಮದಲ್ಲಿ ಅತಿಮಾನಸ ತತ್ತ್ವಾವಿಷ್ಕಾರವು ಅನಿವಾರ್ಯವಾದದ್ದು, ವಿಧಿನಿಯುತವಾದದ್ದು.

೫

ಒಮ್ಮೆ ಋತ--ಚಿತ್ತವು, ಸತ್ಯ-ಪ್ರಜ್ಞೆಯು ಇಲ್ಲಿ ಪ್ರತಿಷ್ಠಿತವಾಯಿತೆಂದರೆ ದಿವ್ಯ ಜೀವನ ವಿಕಾಸವು ಸುಗಮವಾಗಿ ಪರಿಣಮಿಸುವುದು. ನಮ್ಮ ನಿತ್ಯ ಅನುಭವದ ವಿಕಾಸಕ್ರಮವು ಮಂದವಾಗಿ ಹಾಗೂ ತೊಡಕಾಗಿ ಕಾಣಿಸುತ್ತಿದೆ. ಏಕೆಂದರೆ ಅದು ಅಚೇತನಾವಸ್ಥೆಯಿಂದ ಮೊದಲಾಗಿ ಅವಿದ್ಯೆಯಿಂದ ಕುಂಠಿತವಾಗಿ ತನ್ನತಾನರಿಯದ ಯಾವುದೋ ಶಕ್ತಿಯ ಪ್ರಭಾವದಿಂದ ಜರುಗುತ್ತಿದೆ. ಆದರೆ ಮತ್ತೊಂದು ವಿಕಾಸ ವಿಧಾನವೂ ಇದೆ. ಅವಿದ್ಯೆಯಿಂದ ವಿದ್ಯೆಯತ್ತ, ಕತ್ತಲಿನಿಂದ ಬೆಳಕಿನತ್ತ ಸಾಗುವುದರ ಬದಲು ವಿದ್ಯೆಯ ಮಾರ್ಗವನ್ನು ಜ್ಯೋತಿಷ್ಪಥವನ್ನು ಅನುಸರಿಸಬಹುದು. ಸತ್ಯ-ಪ್ರಜ್ಞೆಯ ಬೆಳಕಿನಲ್ಲಿ ವೈಷಮ್ಯಗಳು ಮಾಯವಾಗುವವು. ಮನಸ್ಸಿಗೆ ಪರಸ್ಪರ ವಿರೋಧಗಳೆಂದು ತೋರಬಹುದಾದ ಸಂಗತಿಗಳು ಇಲ್ಲಿ ಹೊಸ ಸಂಬಂಧವನ್ನು ತೋರಿಸಿ ಸಮರಸದಿಂದ ಬೆಳಗುವುವು, ಬಾಳುವುವು.

ಅತಿ ಮಾನಸದ ಅವತರಣದಿಂದ ಎರಡು ಬಗೆಯ ಅದ್ಭುತ ಪರಿವರ್ತನೆಯಾಗುವುದು. ಒಂದು ಜ್ಞಾನಕ್ಕೆ ಸಂಬಂಧಿಸಿದ್ದು. ಇನ್ನೊಂದು ಕ್ರಿಯೆಗೆ ಸಂಬಂಧಿಸಿದ್ದು. ಅತಿಮಾನಸವು ಈ ಉಭಯ ದ್ರವ್ಯಗಳ—ಜ್ಞಾನ—ಶಕ್ತಿಗಳ—ಅಖಂಡ ಸಂಪತ್ತು. ಮನವು ಒಂದಲ್ಲ ಒಂದು ದೋಷಕ್ಕೆ ಗುರಿಯಾಗಿದೆ. ತಿಳಿವಳಿಕೆ ಇದ್ದರೆ, ಅರಿವು ಜಾಗೃತವಾಗಿದ್ದರೆ ಅದನ್ನು ಪ್ರಕಟಗೊಳಿಸುವ, ನೆರವೇರಿಸುವ ಸಾಮರ್ಥ್ಯವಿಲ್ಲ. ಸಾಮರ್ಥ್ಯವಿದ್ದಲ್ಲಿ ತಿಳಿವಳಿಕೆಯು ಅಲ್ಪ ಪ್ರಮಾಣದಲ್ಲಿ ಇರಬಹುದು. ಅತಿಮಾನಸದಲ್ಲಿ ಜ್ಞಾನದೊಡನೆ ಕ್ರಿಯಾಸಾಮರ್ಥ್ಯವೂ ಕ್ರಿಯಾಸಾಮರ್ಥ್ಯದೊಡನೆ ಜ್ಞಾನವೂ ಒಂದೆ ಸಮನಾಗಿ ಅಭಿನ್ನವಾಗಿ ಪ್ರಕಟಗೊಳ್ಳುವುವು.

ಶ್ರೀ ಅರವಿಂದರ ದೃಷ್ಟಿಯಲ್ಲಿ ಈ ಅತಿಮಾನಸವು ಒಬ್ಬಿಬ್ಬರ ಸ್ವತ್ತಾದರೆ ಉಪಯೋಗವಿಲ್ಲ. ಇಡೀ ಮಾನವ ಜಾತಿಗೇ ಸೇರಿದ್ದಾಗಿರಬೇಕು. ಅಂದರೆ ಒಮ್ಮೆಲೇ ಮಾನವ ಕೋಟಿಯು ಅತಿಮಾನಸ ಪ್ರಜ್ಞೆಯನ್ನು ಅವಲೀಲೆಯಾಗಿ ಅದ್ಭುತವಾಗಿ ಪಡೆಯುವುದೆಂದಲ್ಲ. ಅಂದರೆ ಈಗ ಮನಸ್ತತ್ವವನ್ನು ಎಲ್ಲರೂ ಒಪ್ಪಿಕೊಂಡಂತೆ ಮುಂದೆ ಅತಿಮಾನಸ ತತ್ವವನ್ನು ಎಲ್ಲರೂ ಒಪ್ಪಿಕೊಳ್ಳುವರು. ಎಲ್ಲರೂ ಅವರವರ ಪ್ರಮಾಣದಲ್ಲಿ ಅವರವರ ಧಾರಣಾಸಾಮರ್ಥ್ಯವನ್ನನುಸರಿಸಿ ಅದನ್ನು ಪಡೆಯುವರು. ಮನವು ಈಗ ಎಲ್ಲ ಮಾನವರ ವಿಶ್ವ ಸಂಪತ್ತಾಗಿದ್ದರೂ ಎಲ್ಲರಿಗೂ ಒಂದೆ ಅಳತೆಯ ಬುದ್ಧಿಯಿಲ್ಲ. ಒಂದೆಡೆ ಮನದ ಮೇರು ಪ್ರಾಂತಕ್ಕೆ ಸೇರಿದ ಅಸಾಧಾರಣ ಪ್ರತಿಭಾಶಾಲಿ, ಕವಿ, ಪ್ರವಾದಿ ಇದ್ದಾರೆ. ಇನ್ನೊಂದೆಡೆ ಮಂಕ ಮೂಢರಿದ್ದಾರೆ. ಆದರೆ ಎಲ್ಲರೂ ಮಾನವರೆಯೇ. ಇನ್ನು ಮುಂದೆ ಹೊಸ ಮಾನವನಿಗೆ, ಅತಿಮಾನವನಿಗೆ ಅತಿಮಾನಸ ಪ್ರಜ್ಞೆಯು ಯಾವದೇ ಮಟ್ಟದಲ್ಲಿಯಾದರೂ ಸಾರ್ವತ್ರಿಕ ಸ್ವತ್ತಾಗಿರುವುದು.

ಅತಿಮಾನಸ ಪ್ರಜ್ಞೆಯನ್ನು ಅಳವಡಿಸಿಕೊಂಡ ಸಮಾಜವು ಮುಖ್ಯವಾಗಿ ಮೂರು ಲಕ್ಷಣಗಳನ್ನು ತೋರಿಸುವುದು— Unity, Harmony, Mutuality— ಎಂದರೆ ಏಕತೆ, ಪರಸ್ಪರತೆ, ಸಾಮರಸ್ಯ ಇವುಗಳನ್ನು. ಈ ಮೂರು ಲಕ್ಷಣಗಳು ಆತ್ಮದ ಹೊರವ್ಯೆಯಾಗಿರುವವು. ಕೇವಲ ವ್ಯವಹಾರ ಧರ್ಮವಾಗಿರುವುದಿಲ್ಲ. ಈ ಗುಣಗಳ ಮೀಮಾಂಸೆಯನ್ನು ವಿಸ್ತರಿಸಲು ಇಲ್ಲಿ ಅವಕಾಶವಿಲ್ಲ. ಶ್ರೀ ಅರವಿಂದರ ಬರಹಗಳಲ್ಲಿ ಇವು ಸರ್ವವ್ಯಾಪಿಯಾದ ಆತ್ಮಚೈತನ್ಯದಂತೆ ಎಲ್ಲೆಡೆಯಲ್ಲಿಯೂ ಸ್ಪಂದಿಸುತ್ತವೆ. ಏಕತೆ ಎಂದರೆ ಸಾಮಾನ್ಯವಾಗಿ ಏಕರೂಪತೆ, ಏಕಪ್ರಕಾರತೆ ಎಂದು ಬಗೆಯುವರು. ಶ್ರೀ ಅರವಿಂದರ ಏಕತೆಯು ಅನಂತ ವಿವಿಧತೆಗೆ ಎಡೆಕೊಡುತ್ತದೆ. Complex Unity ಎಂದು ಅದನ್ನು ವಿಶೇಷವಾಗಿ ವರ್ಣಿಸಿರುವರು. ಏಕತೆಯನ್ನು ಅಂತರ್ಯದಲ್ಲಿ ಅನುಭವಿಸಿ, ಆತ್ಮಸ್ಫುರಣೆಯನ್ನೇ ಜೀವನಸೂತ್ರವನ್ನಾಗಿ ಮಾಡಿಕೊಂಡರೆ, ಹೊರನೋಟಕ್ಕೆ ಏನೇ ಭಿನ್ನತೆ-ವೈವಿಧ್ಯಗಳು ತೋರಿದರೂ ಏಕತೆಯು ಭಂಗವಾಗುವುದಿಲ್ಲ. ಈ ಆಂತರಿಕ ಸತ್ಯತೆಯು ದೀರ್ಘ ಸಾಧನೆಯ ಫಲ. ಮೊದಮೊದಲು ಪರಸ್ಪರ ಲಾಭಕ್ಕಾಗಿ, ಸ್ವಪ್ರಯೋಜನಕ್ಕಾಗಿ ಜನರು ಒಟ್ಟಾಗುವರು. ಇದು ನಿಜವಾದ ಏಕತೆ ಅಲ್ಲ. ಹಿತದಲ್ಲಿ ವ್ಯತ್ಯಾಸವಾದಾಗ, ವ್ಯವಹಾರದಲ್ಲಿ ಒಬ್ಬರಿಗೆ ಲಾಭ ಇನ್ನೊಬ್ಬರಿಗೆ ನಷ್ಟ ಕಂಡು ಬಂದಾಗ, ಈ ಏಕತೆಯು ಮಾಯವಾಗುವದು. ಎರಡನೆಯದಾಗಿ ಏಕತೆಯು ಧಾರ್ಮಿಕ ಭಾವನೆಯಿಂದ ಹೊರಸೂಸಬಹುದು. ಭ್ರಾತೃತ್ವ ತತ್ವವೇ ಇದರ ತಳಹದಿ. ಆದರೆ ಭ್ರಾತೃತ್ವ ತತ್ವದಲ್ಲಿಯೂ ಪ್ರತ್ಯೇಕತೆಯು, ಅನ್ಯಥಾ ಭಾವನೆಯು ಸೂಕ್ಷ್ಮವಾಗಿ ಸೇರಿದೆ. ಈ ಪ್ರತ್ಯೇಕ ಭಾವನೆಯು ಸಂಪೂರ್ಣವಾಗಿ ಅಳಿದು ಏಕತೆ ಒಡಮೂಡಬೇಕು. ಇದು ಮೂರನೆಯ ರೀತಿ. ಮೇಲು ಮೇಲಿನ ಏಕತೆ ಬಹಳ ಕಾಲ ತಾಳುವುದಿಲ್ಲ. ಏಕತೆಯ ಕೇಂದ್ರ ಆತ್ಮವೇ ಆಗಿರಬೇಕು. ಸರ್ವಭೂತಾತ್ಮನೇ ಏಕತೆಯ ಶಾಶ್ವತವಾದ ಆಶ್ರಯ. ಹೀಗೆ ಪರಸ್ಪರತೆಯ, ಸಾಮರಸ್ಯದ ತಾತ್ವಿಕ ಅಂದರೆ ಅಂತಿಮ ವಿವೇಚನೆ ಇದೆ ಶ್ರೀ ಅರವಿಂದರ ಗ್ರಂಥಗಳಲ್ಲಿ.

ಅತಿಮಾನಸದ ಅವತರಣವು ದೈವೀ ಪರಿವರ್ತನೆಗೆ ರಹದಾರಿಯನ್ನು ಕಲ್ಪಿಸಿಕೊಡುವುದು. ಈ ಪರಿವರ್ತನೆಗೆ ಆಸ್ಪದವಿಲ್ಲದೆಡೆಯಲ್ಲಿ ಅತಿಮಾನಸವು ಅದರ ಪ್ರಭಾವವನ್ನು ಬೀರುವುದು. ವ್ಯಕ್ತಿಗೂ ವಿಶ್ವಕ್ಕೂ ನಿಕಟ ಸಂಬಂಧವನ್ನು ಮಾಡಿಕೊಡುವುದು. ಮನವನ್ನೂ ಪ್ರಾಣವನ್ನೂ ತಂತಮ್ಮ ಉನ್ನತ ಪ್ರಸ್ಥಾನಕ್ಕೆ ಒಯ್ಯುವುದು. ಯಾವುದನ್ನು ತನ್ನ ಪೂರ್ಣ ಸತ್ಯವಲಯದಲ್ಲಿ ಸೇರಿಸಿಕೊಳ್ಳಲಾಗುವುದಿಲ್ಲವೋ ಅದನ್ನು ಆ ಪೂರ್ಣತೆಯ ಸಮೀಪಕ್ಕೆ ಬರುವಂತೆ ಮಾಡು

ವುದು. ಸಮೀಪಕ್ಕೆ ಬರುವುದೂ ಸಾಧ್ಯವಲ್ಲ ವೆಂದು ತೋರಿದರೆ ಯಾವ ಪೂರ್ವಸಿದ್ಧತೆ ಇದ್ದಲ್ಲಿ ಇದು ಸಾಧ್ಯವೆಂಬುದನ್ನು ಮನಗಾಣಿಸುವುದು. ಅತಿಮಾನಸದ ಪ್ರಭಾವವನ್ನು ಸ್ವೀಕರಿಸಬಲ್ಲವ ರಷ್ಟೇ ಅಲ್ಲದೆ ಮನವನ್ನೆ ಅವಲಂಬಿಸುವವರ ಲ್ಲಿಯೂ ಬದಲಾವಣೆಯಾಗುವದು. ಬೆಳಕನ್ನು ಬರಮಾಡಿಕೊಳ್ಳಬಲ್ಲ ಮನ, ಇಂಥ ಮುಕ್ತ ಮನಕ್ಕೆ ಅಧೀನವಾದ ಪ್ರಾಣ, ಈ ಸಮ್ಮಿಳಿತ ಮನ—ಪ್ರಾಣಗಳ ಬೇಡಿಕೆಗಳನ್ನು ವಿಧೇಯ ವಾಗಿ ನಿರ್ವಹಿಸಬಲ್ಲ ದೇಹ—ಇವು ಹಲ ಕೆಲ ವರಿಗೆ ಮಾತ್ರ ಸೇರಿರದೆ ಮಾನವ ಜಾತಿಯ ಸಾಮಾನ್ಯಶ್ರೀಯಾಗುವುದು. ಪ್ರಕೃತದಲ್ಲಿ ಮನವು ಪ್ರಧಾನ ತತ್ವವಾಗಿರುವಂತೆ, ಮಾನವ ವ್ಯಾಪಾರ ಗಳನ್ನು ಆಳುವ, ಅಳೆಯುವ ಮುಖ್ಯ ದಂಡ ವಾಗಿರುವಂತೆ, ಉಳಿದ ತತ್ವಗಳನ್ನು ಲಯಗೊಳಿ ಸದೆ ತನ್ನ ಅಂಕಿತದಲ್ಲಿ ಇಟ್ಟುಕೊಂಡಿರುವಂತೆ, ಇನ್ನು ಮುಂದೆ ಅತಿಮಾನಸವೇ ಅಧಿನಾಯಕತ್ವ ವನ್ನು ವಹಿಸಬೇಕು. ಈಗಿನ ವಿಕಾಸ ವಿಧಾನವು ಮನ-ನಿಯತವಾಗಿರುವಂತೆ ಭಾವೀ ವಿಕಾಸ ವಿಧಾನವು ಅತಿಮಾನಸ-ನಿಯತವಾಗಬೇಕು. ಮಾನವನ ಅಂತಿಮ ಭವಿತವ್ಯವು ಕಲ್ಪನೆಗೆ ಮೀರಿದಷ್ಟು ಉಜ್ವಲವಾಗಿದೆ. ಅದು ವಿಕಾಸ ಪಥದಲ್ಲಿ ಒಂದು ಹೊಸ ತತ್ವದ ಆವಿಷ್ಕಾರ ವಾಗಿರುವುದರಿಂದ ಮನದ ಗ್ರಹಿಕೆಯನ್ನು ಮೀರಿದೆ. ಈ ತತ್ವವು ಇರುವುದೋ ಇಲ್ಲವೋ, ಇದ್ದರೆ ಅದನ್ನು ಪಡೆಯಲು ಸಾಧ್ಯವೋ, ಹಾಗೂ ಇಹದಲ್ಲಿ ಪಡೆಯಲಾಗುವುದೋ, ಪೃಥ್ವಿಯು ಅತಿಮಾನಸದ ಅವತರಣಕ್ಕೆ ಯೋಗ್ಯ ವಾದ ಕ್ಷೇತ್ರವೋ, ಅತಿಮಾನಸ ಪ್ರಜ್ಞೆಯ ವಿಕಾಸ ಕ್ರಮವೇನು, ಎಷ್ಟು ಕಾಲ ಹಿಡಿಯ ಬಹುದು, ಅದರ ವ್ಯಾಪ್ತಿಯೇನು, ಅವಸ್ಥಾಂತರ ಸ್ಥಿತಿಗೆ ಸಂಬಂಧಿಸಿದ ಸಮಸ್ಯೆಗಳೇನು, ಅವು ಗಳನ್ನು ಹೇಗೆ ಬಿಡಿಸಬೇಕು,— ಇವೆಲ್ಲವನ್ನೂ ಶ್ರೀ ಅರವಿಂದರ ಉದ್ಗ್ರಂಥವಾದ Life Divine ದಲ್ಲಿ ಹಾಗೂ ತೀರ ಇತ್ತೀಚೆಗೆ ಪ್ರಕಟವಾದ The Supramental Manifestation upon Earth ಎಂಬ ಲೇಖಸಂಕಲನದಲ್ಲಿ ಜಿಜ್ಞಾಸುಗಳು ವಿವರವಾಗಿ ತಿಳಿಯಬಹುದು. ಅತ್ತ ಗಮನವನ್ನು ಸೆಳೆಯುವುದು ಮಾತ್ರ ಈ ಚಿಕ್ಕ ಅಪೂರ್ಣ ಲೇಖದ ಉದ್ದೇಶ.

---

## ಕಣ್ಸನ್ನೆ ಮಾಡೆನಗೆ*

ಇಲ್ಲಿರುವೆನಿಲ್ಲಿರುವೆನಿಲ್ಲಿರುವೆ ನಾನು
ಚೆಲ್ವ ನಿನ್ನಡಿಯ ಬಳಿ ಹಾಡಬಂದವನು
ಈ ನಿನ್ನ ಮಂದಿರದ ಮೂಲೆಯೊಳಗೊಂದು
ತಾಣವಿದೆ—ನಾ ಕುಳಿತು ಹಾಡುತಿರಲೆಂದು
ವರ ಸೃಷ್ಟಿ ನಿನ್ನದರೊಳೆನಗಿಲ್ಲ ಕಾರ್ಯ
ಬರಿದೆ ಜಿನುಗುವುದೆನ್ನ ಬದುಕು ಪ್ರಭುವರ್ಯ
ನಟ್ಟಿರುಳ ಕಾರ್ಗತ್ತಲೆಯ ದೇಗುಲಲ್ಲಿ
ಕಟ್ಟಿ ಕರಣಂಗಳನು ತನಿಮೌನದಲ್ಲಿ
ನಿನ್ನ ಪೂಜಿಪ ಗಳಿಗೆ ಕೂಡಿ ಬಂದೊಡನೆ
ಕಣ್ಸನ್ನೆ ಮಾಡೆನಗೆ ಹಾಡೆಂದು ಗಡನೆ
ಮುಂಬೆಳಗು ತುಂಬುತಿರೆ ತಂಬೆಲರು ತೀಡಿ
ಹೊಂಬೀಣೆ ನುಣ್ಪುವೆತ್ತಿರಲು ಶ್ರುತಿಗೂಡಿ
ಬಾರೋ ನೀ ಮುಂದಕ್ಕೆ ಬಾಯೆಂದು ಕರೆದು
ಗೌರವಿಸು ನನ್ನನ್ನು ಮಮತೆಯನು ಮೆರೆದು!

—ಗಂಗಪ್ಪ ವಾಲಿ

* ಕವೀಂದ್ರ ರವೀಂದ್ರರ ಆಂಗ್ಲ ಗೀತಾಂಜಲಿಯ ಒಂದು ವಚನದ ಭಾವಾನುವಾದ




ದೂರದ ಕೊಪ್ಪದಲ್ಲಿ ಕೋಳಿಯೊಂದು ಮೂರು ಸಲ ಕೋ ಕೋ ಕೋ ಎಂದು ಕೂಗಿದಾಗ ನಸುಕಿನ ಮುಸುಕಿನಲ್ಲಿ ಬೆಟ್ಟದ ದಾರಿಯಲ್ಲಿ ನಡೆದು ಬರುತ್ತಿದ್ದ ಮುದುಕರಿಗೆ ತುಸು ಧೈರ್ಯ ಬಂದಂತಾಯಿತು. ಕಳೆದ ಹನ್ನೆರಡು ವರುಷಗಳಿಂದಲೂ ಬೆಟ್ಟದ ಈ ದಾರಿಯನ್ನು ತುಳಿದು ಬಂದದ್ದರಿಂದ ದಾರಿತಪ್ಪುವ ಭಯವಿಲ್ಲದಿದ್ದರೂ ಕಾನಿನ ದಾರಿಯ ಕತ್ತಲಲ್ಲಿ ಆಗೊಮ್ಮೆ ಈಗೊಮ್ಮೆ ಮನಸ್ಸು ಮುದುಡಿಕೊಳ್ಳುತ್ತಿತ್ತು. ಕತ್ತಲು ಪರೆ ಸಡಿಲಾಗುತ್ತ ಬೆಳಕಿನ ಹುಡಿ ಹರಡಿಕೊಳ್ಳುತ್ತ ಬಂದಂತೆ ವಿಕಾರವಾಗಿ ಗುಂಪುಗುಂಪಾಗಿ ಬೆಳೆದು ನಿಂತ ಗಿಡಮರಗಳು ಭಿನ್ನಭಿನ್ನವಾಗಿ ರೂಪ ತಳೆಯಹತ್ತಿದವು. ನಕ್ಷತ್ರಗಳು ಮಸುಕಾಗಹತ್ತಿದವು. ಈ ಮೂಲೆಯ ಅಶ್ವತ್ಥ ಮರವನ್ನು ದಾಟಿ ಮುಂದೆ ಹತ್ತಾರು ಹೆಜ್ಜೆ ನಡೆದರೆ ದಾರಿಯ ಕೊನೆಯ ಕಣಿವೆ ಬರುತ್ತದೆ. ಬೆಟ್ಟದ ಈ ಸೀಳು ದಾರಿ ಎಳೆಯ ಮಕ್ಕಳ ಮೊದಲ ಅಕ್ಷರಗಳಂತೆ ಸುಳಿಸುಳಿಯಾಗಿ ಗಂಟುಗಂಟಾಗಿ ಕಣಿವೆಯಲ್ಲಿ ಇಳಿದು ಹೋಗಿದೆ. ತುಸು ಮುಂದೆ ನಡೆದರೆ ಬರುತ್ತದೆ— ಬೆಳಕು ! ಆ ಮೇಲೆ ಉಡುಪಿಯ ಅನಂತೇಶ್ವರ ಸ್ವಾಮಿ !

ಹೆಜ್ಜೆಗೊಂದು ತರಗೆಲೆ ಚರಗುಟ್ಟುವ ದಾರಿಯಲ್ಲಿ ಮುದುಕ ಮೆಲ್ಲಗೆ ನಡೆಯುತ್ತಿದ್ದರು. ಇದ್ದಕ್ಕಿದ್ದಂತೆ ಮೂಡಲದಲ್ಲಿ ಚಿನ್ನದ ತಳಿಗೆಯಂತೆ ಸೂರ್ಯ ಮೂಡಿ ಬಂದನು. ಬೆಟ್ಟಕ್ಕೆ ಬಣ್ಣ ಬಂದಿತು. ಲೋಕಕ್ಕೆ ಕಣ್ಣು ಬಂದಿತು. ಮುದುಕ ಒಂದು ನಿಮಿಷ ನಿಂತು ಸುತ್ತಲೂ ನೋಡಿದರು. ಪಚ್ಚೆಯ ರತ್ನಗಂಬಳಿ ಹಾಸಿದಂತೆ ಹಸಿರಾಗಿ ಹರಡಿಕೊಂಡಗದ್ದೆಗಳು. ಬಣ್ಣಬಣ್ಣಗಳ ಮೇಘಾವಳಿ ಯಕ್ಷ-ಕಿನ್ನರರಂತೆ ದೇವ-ಗಂಧರ್ವರಂತೆ ಮನಸ್ಸಿಗೆ ಬಂದ ರೂಪ ತಳೆದು ಆಕಾಶಯಾತ್ರೆ ಕೈಕೊಂಡಿದ್ದವು. ಈ ನವೋದಯದ ರಸ ನಿಮಿಷದಲ್ಲಿ ಗೂಡುಗಳ ಗಂಧರ್ವರು ಮುಕ್ತಕಂಠದಿಂದ ಉದಯಸೂಕ್ತವನ್ನು ಹಾಡುತ್ತ ಗುಂಪುಗುಂಪಾಗಿ ಆಕಾಶದ ಗಾವುದಗಳನ್ನು ಅಳೆಯಹೊರಟರು. ಆಚೆಯ ಗದ್ದೆಗಳ ಅಂಚಿನಲ್ಲಿ ಚಿನ್ನದ ಗೊಲ್ಲೆಗಳನ್ನು ಹೊತ್ತು ತೆಂಗಿನ ಮರಗಳು ಜಡೆಗೆದರಿ ನಿಂತಿದ್ದವು. ದೂರದ ನೀಲಶೈಲಗಳ ಶಿಖರದಲ್ಲಿ ಬಿಳಿ ಮಂಜು ಲಡಿಲಡಿಯಾಗಿ ಹಿಂಜಿಕೊಳ್ಳುತ್ತಿತ್ತು. ಗಾಳಿ ಸುಖಸ್ಪರ್ಶಿಯಾಗಿ ಬೀಸಹತ್ತಿತ್ತು. ಕೆಳಗಡೆ ಸರೋವರ ನೀಲವಾಗಿ ಹೊಳೆಯುತ್ತಿತ್ತು. ಅದರ ಮೂಲೆಯಲ್ಲಿ ಶಮೀವೃಕ್ಷ. ಈ ದಿನ ವಿಜಯದಶಮಿ. ಬನ್ನಿಯನ್ನು ಕೊಡಬೇಕು. ಅನಂತೇ-ಶ್ವರ ಸ್ವಾಮಿಯ ಗೋಪುರ ಉದಯದ ಊರ್ಧ್ವಪುಂಡ್ರವನ್ನು ಬಳಿದುಕೊಳ್ಳುತ್ತಿದ್ದಂತೆ ಮುದುಕ ವೇಗವಾಗಿ ನಡೆದು ಸರೋವರಕ್ಕೆ ಬಂದರು. ಮಡಿಯಾಗಿ ಮಿಂದುಕೊಂಡು ನಾಮಗಳನ್ನು ಹಾಕಿಕೊಂಡು ಅರ್ಘ್ಯಕೊಡುವಷ್ಟರಲ್ಲಿ ಒಂದು ತಾಸು ಹೊತ್ತೇರಿತು. ಶಮೀವೃಕ್ಷದ ದಲಗಳನ್ನು ಆರಿಸಿಕೊಂಡು ಹೂ-ಪತ್ರಿಗಳನ್ನುಗಡಿಬಿಡಿಯಿಂದ ತೆಗೆದು ಮುದುಕ ಅನಂತೇಶ್ವರ ಸ್ವಾಮಿಯ ದೇವಾಲಯದತ್ತ ಹೆಜ್ಜೆ ಇಟ್ಟರು.

ಅಲ್ಲಿ ನೂರಾರು ಜನ ಕಿಕ್ಕಿರಿದು ನಿಂತಿದ್ದರು. ಗುಲ್ಲೋಗುಲ್ಲು. ಸುತ್ತಲೂ ನಿಂತವರು ಕತ್ತು ಮೇಲೆ ಮಾಡಿಕೊಂಡು ಚಪ್ಪಾಳೆ ತಟ್ಟುತ್ತಿದ್ದಾರೆ. ಹೋಯೆಂದು ನಗೆಯಾಡುತ್ತಿದ್ದಾರೆ. ದೇವಾಲ-ಯದೆದುರಿನ ಗರುಡಗಂಬದ ಮೇಲೆ ವಿಚಿತ್ರ ವೇಷದ ಒಬ್ಬ ವ್ಯಕ್ತಿ ಎರಡೂ ಕೈಯೆತ್ತಿ ಸರಾಗವಾಗಿ ಸಾಭಿನಯವಾಗಿ ಹಾಡುತ್ತಿದ್ದಾನೆ:

" ಈಗ ಬದುಕಿ ಬಾಳುವ ಜೀವ ಪುಣ್ಯ ಜೀವ
ಬರಲಿರುವರು ನಮ್ಮ ಪವಮಾನ ದೇವ !"

ಜನಕ್ಕೆ ಈ ಮಾತು ಅರ್ಥವಾಗುತ್ತಿಲ್ಲ. ವಿಜಯದಶಮಿಯ ಬೆಳಗಿನಲ್ಲಿ ಬನ್ನಿ-ಹೂ-ಪತ್ರಿಗಳನ್ನು ತರಬೇಕೆಂದು ಕೈಯಲ್ಲಿ ಬುಟ್ಟಿಗಳನ್ನು ಹಿಡಿದುಕೊಂಡು ಹೊರಟು ಬಂದವರು ಗರುಡಗಂಬದ ತುದಿಯಲ್ಲಿ ಇದೇನು ಡೊಂಬರಾಟ ನಡೆದಿದೆ ಎಂದು ದಿಙ್ಮೂಢರಾಗಿ ನಿಂತಿದ್ದಾರೆ. ಆತನ ಮಾತು ಅರ್ಥವಾಗುವದಿಲ್ಲೆಂದು ಅವರಿಗೆ ಬೇಸರವಿಲ್ಲ. ಸರಾಗವಾಗಿ ಹಾಡುತ್ತಿರುವದರಿಂದ ಕೇಳಿ ತೃಪ್ತಿಯಿಲ್ಲ. ಇಷ್ಟು ತುದಿಯಲ್ಲಿ ನಿಂತು ನಾಟ್ಯ-ವಾಡಿದರೂ ಇವನು ಬೀಳುತ್ತಿಲ್ಲ. ಹೇಗೆ ಎಂದು ಕಣ್ಣು ಬಾಯಿ ತೆರೆದು ನೋಡುತ್ತಿದ್ದಾರೆ. ಮೇಲೆ ನಿಂತ ಈ ವಿಚಿತ್ರ ಯಾತ್ರಿಕ ಮತ್ತೆ ಮತ್ತೆ ಕೈಯೆತ್ತಿ ಬೊಗರಿಯಂತೆ ತಿರುಗುತ್ತ ಹಾಡುತ್ತಿದ್ದಾನೆ.

" ಈಗ ಬದುಕಿ ಬಾಳುವ ಜೀವ ಪುಣ್ಯ ಜೀವ
ಬರಲಿರುವರು ನಮ್ಮ ಪವಮಾನ ದೇವ!"

ಇದನ್ನೆಲ್ಲ ನೋಡುತ್ತ ಮುದುಕ ವಿಸ್ಮಿತರಾಗಿ ಏನೋ ಅರ್ಥವಾದವರಂತೆ ನಕ್ಕು ದೇವಾಲಯದಲ್ಲಿ ಹೊಕ್ಕರು. ಮಧ್ಯದಲ್ಲಿದ್ದ ದೊಡ್ಡ ಗಂಟೆಯನ್ನು ಢಣ್ ಎಂದು ಬಾರಿಸಿದರು. ಕಳೆದ ಹನ್ನೆರಡು ವರುಷಗಳಿಂದಲೂ ಈ ಗಂಟೆಯನ್ನು ಈ ಸುಮಾರಿಗೆ ಯಾರು ಬಾರಿಸುವರೆಂಬುದನ್ನು ಅರ್ಚಕರು ಬಲ್ಲರು. ಅಂತೆಯೇ ಗರ್ಭಗುಡಿಯಿಂದ ಗಂಭೀರವಾಗಿ ಕೂಗಿದರು. "ಬನ್ನಿ ಮಧ್ಯ-ಗೇಹಾಚಾರ್ಯರೇ ಬನ್ನಿ."

ನರಸಿಂಹಭಟ್ಟರಿಗೂ ಮಧ್ಯಗೇಹರಿಗೂ ಈ ಹನ್ನೆರಡು ವರುಷಗಳಲ್ಲಿ ಅನ್ಯೋನ್ಯವಾದ ಗೆಳೆತನ ವಿಶ್ವಾಸಗಳು ಬೆಳೆದುಬಂದಿವೆ. ಅನಂತೇಶ್ವರ ಸ್ವಾಮಿಯ ಪೂಜೆಯನ್ನು ತಾಂತ್ರಿಕವಾಗಿ ನರ-ಸಿಂಹಭಟ್ಟರು ಮಾಡುತ್ತಿದ್ದರೂ ಮಾಂತ್ರಿಕವಾಗಿ ಆ ಗೌರವ ಮಧ್ಯಗೇಹರಿಗೆ ಸಲ್ಲಬೇಕೆಂದು ದೇವಾಲಯಕ್ಕೆ ಬಂದವರಿಗೂ ಸ್ವತಃ ಅರ್ಚಕರಿಗೂ ಗೊತ್ತು. ಅರ್ಚಕರು ವೃತ್ತಿಯಿಂದ ವೈದಿಕ-ರಿದ್ದಷ್ಟೇ ಪ್ರವೃತ್ತಿಯಿಂದ ಲೌಕಿಕರಿದ್ದ ಮೂಲಕ ಗುಡಿಗೆ ಬಂದುಹೋಗುವ ಜನರ ಸುಖದುಃಖಗಳನ್ನು ಬಹಳ ಕೇಳಿದ್ದರು. ಆದರೆ ಮಧ್ಯಗೇಹಾಚಾರ್ಯರ ಬದುಕಿನ ಏರಿಳಿತಗಳನ್ನುಅವರು ಕಣ್ಣಾರೆ ನೋಡಿದ್ದರು. ಇವರ ಸಂಸಾರದ ಕಷ್ಟಕಾರ್ಪಣ್ಯ

ಗಳನ್ನು ಕಂಡುಕೊಂಡು ಎಂಥ ದುಃಸ್ಥಿತಿಯಲ್ಲಿಯೂ ದುರ್ದೆಸೆಯಲ್ಲಿಯೂ ಕಾಪಾಡಿಕೊಂಡು ಬಂದ ಅವರ ವೈದಿಕ ಗಾಂಭೀರ್ಯವನ್ನು ವೈಷ್ಣವ ನಿಷ್ಠೆಯನ್ನು ಮನವಾರೆ ಮೆಚ್ಚಿದ್ದರು. ಅವರಿಗೆ ಹುಟ್ಟಿದ ಇಬ್ಬರು ಮಕ್ಕಳೂ ಎಳೆಯದರಲ್ಲಿಯೇ ತೀರಿಹೋದರು. ಐದು ವರುಷದ ಹಿಂದೆ ಹುಟ್ಟಿದ ಗಾಯತ್ರಿ, ವೇದವತಿಯ ಪುಣ್ಯದಿಂದ ಬದುಕಿ ಬೆಳೆದು ಬಂದಿದ್ದಾಳೆ. ಇದಲ್ಲದೆ ವೈಷ್ಣವ ಸಾಧನೆಯ, ವೈದಿಕ ತಪಸ್ಸಿನ ಕುಲಸಂಪ್ರದಾಯವಾದ ದಾರಿದ್ರ್ಯವು ಅವರನ್ನು ಉಡುಪಿಯಲ್ಲಿ ಕೂಡ ಉಳಿಯಗೊಡದೆ ಪಾಜಕಕ್ಕೆ ಅಟ್ಟಿತು. ಈ ಕಳೆದ ಹನ್ನೆರಡು ವರುಷಗಳಿಂದ ಸಂತಾನಕ್ಕಾಗಿ ಮಧ್ಯಗೇಹರು ಕೈಕೊಂಡ ಸೇವೆಯನ್ನು ಅನಂತೇಶ್ವರ ಸ್ವಾಮಿ ಮೆಚ್ಚಿದ್ದನು. ಈ ಅವಧಿಯಲ್ಲಿ ನರಸಿಂಹಭಟ್ಟರೂ ಮಧ್ಯಗೇಹರೂ ಅಣ್ಣ ತಮ್ಮಂದಿರಂತೆ ಬೆಳೆದರು. ಶ್ರುತಿ-ಸ್ಮೃತಿಗಳ ವಿಷಯದಲ್ಲಿ ವಿಸ್ತಾರವಾಗಿ ಓದಿಕೊಂಡು ಆಗೀಗ ಪುರಾಣ, ಪುಣ್ಯಕಥೆ ಮುಂತಾದ ವೈದಿಕ ವೃತ್ತಿಯಲ್ಲಿ ನುರಿತುಕೊಂಡರು. ಪಾಜಕದಲ್ಲಿ ಕಲಿತದ್ದು ಉಡುಪಿಯಲ್ಲಿ ಬರಲೇಬೇಕಿತ್ತು. ಹೀಗೆ ಪ್ರೀತಿಯಿಂದ, ಗೌರವದಿಂದ ಅವರು ನಿಕಟವರ್ತಿಗಳಾದರು.

ಆ ದಿನದ ಊಟವನ್ನು ಅರ್ಚಕರಲ್ಲಿ ಮುಗಿಸಿಕೊಂಡು ದಸರೆಯ ಸುವರ್ಣವನ್ನು ತಮ್ಮ ಶ್ರೋತ್ರಿಯ ಗೆಳೆಯರಿಗೂ ಗುರು-ಹಿರಿಯರಿಗೂ ಕೊಟ್ಟು ಮಧ್ಯಗೇಹರು "ನಾನು ಬರುತ್ತೇನೆ" ಎಂದರು. ಅರ್ಚಕರ ಅಪ್ಪಣೆ ಪಡೆದು ಬೆಟ್ಟದ ದಾರಿಯಿಂದ ಮಧ್ಯಗೇಹರು ಪಾಜಕಕ್ಕೆ ತೆರಳಿದರು.

೨

ತಮ್ಮ ಬೆಟ್ಟದ ದಾರಿಯನ್ನು ನಡೆದು ಪಾಜಕದ ಗದ್ದೆಗಳ ಸಮೀಪ ತಲಪುವಷ್ಟರಲ್ಲಿ ನಿಸರ್ಗವು ಸಂಜೆಯ ಸಿಂಧೂರವನ್ನು ಬಳೆದುಕೊಳ್ಳುತ್ತಿತ್ತು. ಆಚೆಯ ತಪ್ಪಲಿನಲ್ಲಿ ಗೋವಳರುದನಕರುಗಳನ್ನು ಮನೆಗೆ ತಿರುಗಿಸಿಕೊಳ್ಳುತ್ತಿದ್ದರು. ಮಧ್ಯಗೇಹರು ಗದ್ದೆಯ ಬಯಲನ್ನು ದಾಟಿ ಪಾಜಕದ ಹೆದ್ದಾರಿಗೆ ಹೆಜ್ಜೆಯಿಡುವಷ್ಟರಲ್ಲಿ ಮೂವರು ಮುತ್ತೈದೆಯರು ತುಂಬಿದ ಕೊಡಗಳನ್ನು ಹೊತ್ತುಕೊಂಡು ಮನೆಗೆ ತೆರಳಿದ್ದರು. ಹತ್ತಾರು ಹೆಜ್ಜೆ ನಡೆದು ಮನೆಯ ಸಮೀಪ ಬರುವಷ್ಟರಲ್ಲಿ ಇದ್ದಕ್ಕಿದ್ದಂತೆ ಮಂಗಲವಾದ್ಯಗಳು ಕೇಳಿಸಹತ್ತಿದವು. ಜನರು ಗುಂಪು ಕಟ್ಟಿಕೊಂಡು ತಮ್ಮ ಮನೆಯ ಜಗುಲಿಯ ಮೇಲೂ ಅಂಗಳದಲ್ಲಿಯೂ ಕುಳಿತುಕೊಂಡಿದ್ದರು. ತಮ್ಮ ನೆರೆಮನೆಯ ಮೂಡಂತಿಲ್ಲಾಯರು ಆಕಳ ಕರುವೊಂದನ್ನು ಹಿಡಿದುಕೊಂಡು ಓಡಿಬಂದು "ಮಧ್ಯಗೇಹರೇ, ನಿಮಗೆ ಗಂಡು ಕೂಸು" ಎನ್ನುತ್ತ ಆನಂದದಿಂದ ನಮಸ್ಕರಿಸಿದರು. ಆಚಾರ್ಯರು ತುಂಬಾ ಆನಂದಪಟ್ಟರು. ಮನೆಗೆ ಬಂದು ಕೈಕಾಲು ತೊಳೆದು ದೇವರಿಗೆ ನಮಸ್ಕರಿಸಿ ಬಂದವರಿಗೆಲ್ಲ ಕೊಬ್ಬರಿ, ಸಕ್ಕರೆ ಹಂಚಿ ಬನ್ನಿಯನ್ನು ಕೊಟ್ಟು ಕಳಿಸಿದರು. ಆದರೆ ಮೂಡಂತಿಲ್ಲಾಯರು ತಾವು ತಂದ ಕರುವನ್ನೂ ಮಧ್ಯಗೇಹರನ್ನೂ ಅವರ ಕೊಟ್ಟಿಗೆಗೆ ಕರೆದೊಯ್ದರು. "ಇದು ಯಾರ ಆಕಳು?" ಎಂದು ಆಚಾರ್ಯರು ಕೇಳಿದರು. ಮೂಡಂತಿಲ್ಲಾಯರು "ಸ್ವಾಮಿ, ಆಕಳವು ತಮ್ಮದು; ಈ ಕರುವೂ ತಮ್ಮದು" ಎಂದು ಹೇಳಿ ಅವರ ಕೈಮೇಲೆ ನೀರು ಬಿಟ್ಟು ದಾನವಿಧಿಯನ್ನು ಮುಗಿಸಿ ಹೊರಟು ಹೋದರು. ಆಚಾರ್ಯರು ಅವರ ಸೌಹಾರ್ದಕ್ಕೆ ಮೆಚ್ಚಿ ದಿಙ್ಮೂಢರಾಗಿ ನಿಂತರು. ಕೃತಜ್ಞತೆ ಕಣ್ಣು ತುಂಬಿ ಬಂತು. ಆನಂದ ಹನಿಗೂಡಿ ಬಂತು. "ಮೂಡಂತಿಲ್ಲಾಯರೇ, ನಿಮಗೆ ಕಲ್ಯಾಣವಾಗಲಿ" ಎನ್ನುವಷ್ಟರಲ್ಲಿ ಅವರು ಹೊರಟು ಹೋಗಿದ್ದರು. ಆಚಾರ್ಯರು ಮನವಾರೆ ಕೊಟ್ಟ ಹರಕೆ ಹುಸಿ ಹೋಗಲಿಲ್ಲ. ವರು-ವರುಷವೇ ಮೂಡಂತಿಲ್ಲಾಯರಿಗೂ ಗಂಡುಮಗು ಹುಟ್ಟಿತು.

ವಾಡಿಕೆಯಂತೆ ಮಧ್ಯಗೇಹರು ತುಲಸೀ ಕಟ್ಟೆಗೆ ನೀರೆರೆಯುತ್ತಿರುವಾಗ ಮಗುವಿನ ಜನನವಾದ ಕೋಣೆಯ ಕಿಟಕಿಯ ಸಮೀಪದಲ್ಲಿ ಕರುವು ನಿಂತದ್ದನ್ನು ನೋಡಿದರು. ಶರತ್ಕಾಲದ ಮೋಡದಂತೆ ಬೆಳ್ಳನ್ನ ಮೈ. ನಿಗುರಿಸಿದ ಕಿವಿಗಳು. ಚಿನ್ನದ ಬಣ್ಣದ ಚವರಿಯ ಗೊಂಡೆ. ಹಾಲಿನ ಕೆನೆಯಂಥ ಗಂಗೆದೊಗಲು. ಹೊಳೆಯುವ ಕಣ್ಣುಗಳು. ಅದರ ಸಮೀಪ ಬಂದು ಬೆನ್ನಮೇಲೆ ಕೈಯಾಡಿಸುತ್ತ "ಗಾಯತ್ರಿ" ಎಂದು ಕೂಗಿದರು. ಕರು ನೆಟ್ಟ ನೋಟದಿಂದ ಹೊರಸಿನ ಮೇಲೆ ಮಲಗಿದ ಮಗುವಿನತ್ತ ನೋಡುತ್ತಿತ್ತು. "ಇದನ್ನು ಒಯ್ದು ಕೊಟ್ಟಿಗೆಯಲ್ಲಿ ಕಟ್ಟಿ ಬಾ" ಎಂದು ಹೇಳಿ ಮಗಳ ಕೈಯಲ್ಲಿ ಕೊಟ್ಟು ತಾವು ಒಳಗೆ ಹೋದರು.

ಕೈಕಾಲು ತೊಳೆದು ಮಂಗಳಾರತಿಯನ್ನು ಮುಗಿಸಿ ದೀಪ ಹಿಡಿದುಕೊಂಡು ತಮ್ಮ ಮಗುವನ್ನು ನೋಡಿದಾಗ ಇದ್ದಕ್ಕಿದ್ದಂತೆ ಅವರಿಗೆ ಆನಂದವುಕ್ಕೇರಿ ಬಂತು. ಗರುಡಗಂಬದ ಮಾತುಗಳು ನೆನಪಾದವು. ದೇವಚೈತನ್ಯದ ಮೂವತ್ತೆರಡು ಲಕ್ಷಣಗಳು ಮಗುವಿನಲ್ಲಿ ಒಡಮೂಡಿರುವದನ್ನು ಕಂಡರು. ಅನಂತೇಶ್ವರ ಸ್ವಾಮಿಯ ಅಪಾರ ಕರುಣೆಯನ್ನು ಸಾವಿರ ಸಲ ನೆನಸಿದರು. ತಮ್ಮ ಬದುಕು ಧನ್ಯವಾಯಿತೆಂದು ಅವರಿಗೆ ಸಮಾಧಾನವಾಯಿತು. ಹನ್ನೆರಡನೆಯ ದಿನ ನಾಮಕರಣಕ್ಕೆಂದು ಬಂದ ನರಸಿಂಹಭಟ್ಟರು ಉಡುಪಿಗೆ ತೆರಳುವ ಮುನ್ನ ಮಧ್ಯಗೇಹರನ್ನು ಕರೆದು "ನೀವು ಪುಣ್ಯವಂತರು. ವಾಯುದೇವರು ನಿಮ್ಮಲ್ಲಿ ವಾಸುದೇವನಾಗಿ ಬಂದಿದ್ದಾರೆ" ಎಂದು ಹೇಳಿ ಹೊರಟುಹೋದರು. ಆ ದಿನ ಮಗುವಿನ ಜಾತಕವನ್ನು ಮಧ್ಯಗೇಹರು ಓದಿಸಿ ನೋಡಿದಾಗ ಗರುಡಗಂಬದ ತುದಿಯಲ್ಲಿ ಹೇಳಿದ ಮಾತು ಮತ್ತೆ ಮತ್ತೆ ನೆನಪಾದವು.

೩

ಹಸು ಮಕ್ಕಳಿಗೂ ಹಸುವಿಗೂ ಅರಿಯದ ಒಂದು ನಿಕಟ ಬಾಂಧವ್ಯವು ಅಂತರಿಕವಾಗಿಯೇ ಬೆಳೆದು ಬರುತ್ತದೆ. ನಂದಗೋಕುಲದಲ್ಲಿ ಭಗವಂತನು ತೋರಿಸಿದ ಅನೇಕ ಬಾಲಲೀಲೆಗಳಲ್ಲಿ ಇದರ ನಿದರ್ಶನವನ್ನು ಕಾಣಬಹುದು. ಮಧ್ಯಗೇಹರ ಮನೆಯ ಆ ಕರುವಿಗೂ ಅವರ ಮಗುವಿಗೂ ಅನ್ಯೋನ್ಯವಾದ ವಾತ್ಸಲ್ಯ ಬೆಳೆದುಬಂದಿತು. ಬೆಳಗಾದ ಕೂಡಲೇ ಕರು ನೆಗೆದಾಡುತ್ತ ಮಗು ಇದ್ದಲ್ಲಿ ಓಡಿ ಬಂದು ನಿಲ್ಲುತ್ತಿತ್ತು. ಮಗುವನ್ನು ಎಷ್ಟು ನೋಡಿದರೂ ಅದಕ್ಕೆ ದಣಿಯದು. ಕರು ಬಂದು ನಿಂತಾಗೆಲ್ಲ ಮಗು ಮೆಲ್ಲಗೆ ಅದರ ಹಣೆಗೆ ಕೈ ಚಾಚುತ್ತಿತ್ತು. ಮಗುವಿಗೆ ಒಂದು ವರ್ಷ ಆಗುವದರೊಳಗೆ ಮನೆತುಂಬ ಹರಿದಾಡಹತ್ತಿತು. ಚೆಲುವಾದ ಮುಖ. ಹರವಾದ ಹಣೆ. ಉಂಗುರುಗೂದಲುಗಳು. ತುಂಬಿಕೊಂಡ ಮೈ. ವಯಸ್ಸಿಗೆ ಮೀರಿದ ಚುರುಕು ಬುದ್ಧಿ. ಮಗುವಿನ ಬಾಲಲೀಲೆಗಳನ್ನು ನೋಡಿದಷ್ಟೂ ಜನರಿಗೆ ತೃಪ್ತಿಯಿಲ್ಲ. ಬೆಳಗಾದ ಕೂಡಲೇ ಮಗು ಜಗುಲಿಗೆ ಬಂದು ಕೂಡುತ್ತಿತ್ತು. ಕರು ಅದರ ಸುತ್ತಲೂ ನೆಗೆದಾಡುತ್ತಿತ್ತು. ಒಂದು ದಿನ ತಾಯಿ ಗಾಯತ್ರಿಯ ಕೈಯಲ್ಲಿ ಮಗುವನ್ನು ಕೊಟ್ಟು ನೆರೆಮನೆಗೆ ಯಾವುದೋ ಕೆಲಸಕ್ಕಾಗಿ ಹೋದರು. ವಾಸುದೇವನು ಗಟ್ಟಿಯಾಗಿ ಅಳುತ್ತ ಕರುವಿನ ಕಡೆಗೆ ಕೈ ಮಾಡಿ ತೋರಿಸಿದನು. ಸಮಾಧಾನ ಮಾಡಲು ಮಗುವನ್ನು ಕರುವಿನ ಬಳಿಯಲ್ಲಿ ಕುಳ್ಳಿರಿಸಿದಳು. ಅಲ್ಲಿಯ ಬುಟ್ಟಿಯಲ್ಲಿದ್ದ ಹುರುಳಿಯ ಫಲಾಹಾರಕ್ಕೆ ವಾಸುದೇವನೂ ಕರುವೂ ಆರಂಭಿಸಿದರು. ಇಬ್ಬರೂ ಹೊಟ್ಟೆತುಂಬ ತಿಂದು ಒಬ್ಬರನ್ನೊಬ್ಬರು

ನೋಡುತ್ತಿದ್ದರು. ಆಗ ತಾಯಿಯು ಓಡಿಬಂದು ಮಗುವನ್ನೆತ್ತಿಕೊಂಡು ಗಾಯತ್ರಿಯನ್ನು ಮನವಾರೆ ಬಯ್ದು ಮಗುವಿಗೆ ಏನಾದೀತೋ ಎಂದು ಭಯ - ಚಿಂತೆಗಳಿಂದ ವಿಹ್ವಲರಾದರು. ಆದರೆ ಹುರುಳಿಯ ಫಲಾಹಾರದ ಭಯ ಹುರುಳಿಲ್ಲದೇ ಹೋಯಿತು. ಒಂದು ದಿನ ಮುಂಜಾವು ಜಗುಲಿಯ ಮೇಲೆ ಆಡುತ್ತಿದ್ದ ಮಗು ಇದ್ದಕ್ಕಿದ್ದಂತೆ ಮಾಯವಾಯಿತು. ಕೊಟ್ಟಿಗೆಯಲ್ಲಿ ಹೋಗಿ ನೋಡಿದಾಗ ಕರುವೂ ಅಲ್ಲಿ ಇರಲಿಲ್ಲ. ತಾಯಿ ಬಹಳವಾಗಿ ದುಃಖಿಸಹತ್ತಿದರು. ಮನೆಯವರೂ ನೆರೆಮನೆಯವರೂ ಊರಲ್ಲೆಲ್ಲ ಹುಡುಕಿದರು. ಎಲ್ಲಿ ನೋಡಿದರೂ ಮಗುವಿನ ಸುಳಿವು ಹತ್ತಲಿಲ್ಲ. ಪಾಜಕದಲ್ಲೆಲ್ಲ ಅಂದು ಯಾರ ಮನೆಯಲ್ಲಿಯೂ ವಾಸುದೇವನ ಸುದ್ದಿಯೇ. ಮಧ್ಯಾಹ್ನವಾಯಿತು. ಮನೆಯವರು ಒಂದು ತುತ್ತುಸಹ ಉಣ್ಣದೆ ಗುಂಪುಗುಂಪಾಗಿ ಮಗುವನ್ನು ಹುಡುಕಹತ್ತಿದರು. ಹಗಲು ಕರಗಿ ಸಂಜೆಯಾಯಿತು. ದನಕರುಗಳು ಮನೆಗೆ ಬಂದವು. ಅಷ್ಟರಲ್ಲಿ ಮೂಡಂತಿಲ್ಲಾಯರು ಮಗುವನ್ನೆತ್ತಿಕೊಂಡು ಮಧ್ಯಗೇಹರ ತೊಡೆಯ ಮೇಲಿಳಿಸಿದರು. “ಎಲ್ಲಿ ಕಂಡಿರಿ?” ಎಂದು ಕೇಳಿದರು. “ನಿಮ್ಮ ಹೋರಿ ಕರುವಿನ ಬಾಲಕ್ಕೆ ಜೋತುಕೊಂಡು ಬರುತ್ತಿದ್ದನು” ಎಂದರು. ಇಡೀ ದಿನ ಕರುವಿನ ಬಾಲಹಿಡಿದು ಬೆಟ್ಟವನ್ನು ಸುತ್ತಿ ಬಂದ ಈ ಹಸುಗೂಸಿನ ಬಾಲಲೀಲೆಯನ್ನು ಕಂಡು ದಿಙ್ಮೂಢರಾದರು.

ವಾಸುದೇವನಿಗೆ ಐದು ವರುಷಗಳಾದಾಗ ಉಪನಯನ ಸಮಾರಂಭ ನಡೆಯಿತು. ಸಮಾರಂಭಕ್ಕೆ ನರಸಿಂಹಭಟ್ಟರು ಬಂದು ಅನಂತೇಶ್ವರನ ಕೃಪಾಪ್ರಸಾದವನ್ನು ಹಣ್ಣು ಹರಕೆಗಳನ್ನು ಕೊಟ್ಟು ತೆರಳುವ ಮುನ್ನ “ಮಧ್ಯಗೇಹರೇ, ನೀವು ಪುಣ್ಯವಂತರು. ವಾಯುದೇವರು ನಿಮ್ಮಲ್ಲಿ ವಾಸುದೇವನಾಗಿ ಬಂದಿದ್ದಾರೆ” ಎಂದು ಹೇಳಿದರು. ತಂದೆ ತಾಯಿಗಳಿಗೂ ಊರವರಿಗೂ ತುಂಬಾ ಆನಂದವಾಯಿತು. ಆದರೆ ಕೊಟ್ಟಿಗೆಯಲ್ಲಿಯ ಹೋರಿಗೆ ಆದಷ್ಟು ಆನಂದವು ಊರಲ್ಲಿ ಯಾರಿಗೂ ಆಗಿರಲಿಕ್ಕಿಲ್ಲ. ವಟುವನ್ನು ವಿದ್ಯಾಭ್ಯಾಸಕ್ಕಾಗಿ ಅದೇ ಊರಲ್ಲಿದ್ದ ತೋಟಂತಿಲ್ಲಾಯರಲ್ಲಿ ಕಳಿಸಿದರು. ತೋಟಂತಿಲ್ಲಾಯರು ಶ್ರುತಿಸ್ಮೃತಿಗಳಲ್ಲಿ ವೇದವಿದ್ಯೆಯಲ್ಲಿ ನ್ಯಾಯಮೀಮಾಂಸೆಯಲ್ಲಿ ಬಹಳ ಹೆಸರಾದವರು. ಅಂದಿನಿಂದ ಏಳು ವರ್ಷಗಳ ವರೆಗೆ ವಾಸುದೇವನು ನ್ಯಾಯ, ವ್ಯಾಕರಣ, ಛಂದಸ್ಸು, ವೇದ, ವೇದಾಂಗಗಳನ್ನು ಕಲಿತನು. ಇಂಥ ಪ್ರತಿಭಾಶಾಲಿಯಾದ ಶಿಷ್ಯನನ್ನು ಪಡೆಯಬೇಕಾದರೆ ಜನ್ಮಜನ್ಮಾಂತರಗಳ ಪುಣ್ಯ ಬೇಕು ಎಂದು ತೋಟಂತಿಲ್ಲಾಯರು ಹೇಳುತ್ತಿದ್ದ ಮಾತಿಗೆ ಇತಿಹಾಸ ಸಾಕ್ಷಿಯಾಗಿದೆ. ಮೇಲಿಂದ ಮೇಲೆ ಅವರಿಗೆ ವಟುವಿನ ಅದ್ಭುತವಾದ ಬುದ್ಧಿಶಕ್ತಿಯ ಅರಿವು ಆಗುತ್ತಿತ್ತು. ವಟುವಿನ ಹರಿತವಾದ ಸ್ಮರಣಶಕ್ತಿಗೆ ನಿಲುಕದ ವಿಷಯವಿರಲಿಲ್ಲ. ಮನೆಯಲ್ಲಿ, ಇತಿಹಾಸ ಪುರಾಣಗಳಲ್ಲಿ ಮಧ್ಯಗೇಹರ ಮಾರ್ಗದರ್ಶನ. ತೋಟಂತಿಲ್ಲಾಯ ಗುರುಗಳ ಆಶ್ರಮದಲ್ಲಿ, ವೇದ ಶಾಸ್ತ್ರಗಳ ಶ್ರುತಿ ಸ್ಮೃತಿಗಳ ಪಾಠಪ್ರವಚನಗಳು ಇದಲ್ಲದೆ ಜನ್ಮಜನ್ಮಾಂತರಗಳ ಪೂರ್ಣಪ್ರಜ್ಞೆಯ ಅಪೂರ್ವವಾದ ಜ್ಞಾನಭಾಂಡಾರವು ಅವರ ಸುಪ್ತಚೇತನದಲ್ಲಿ ಗುಪ್ತಗಾಮಿನಿಯಂತೆ ಹರಿದು ಆಗೀಗ ಗುರುಗಳನ್ನು ಕೂಡ ಬೆರಗುಗೊಳಿಸುತ್ತಿತ್ತು. ಒಮ್ಮೊಮ್ಮೆ ಗುರುಗಳು ಎಲ್ಲಿಯೂ ಎಂದಿಗೂ ಕೇಳದ ವಿಷಯಗಳನ್ನು ವಾಸುದೇವನು ವಿವರಿಸಿದಾಗ, ಅವರು ತಾವೇ ಅವನಲ್ಲಿ ಕಲಿಯಬೇಕಾದುದು ಬಹಳವಿದೆಯೆಂದು ಮಧ್ಯಗೇಹರೆದುರು ಮೇಲಿಂದ ಮೇಲೆ ಹೇಳುತ್ತಿದ್ದರು. ಸ್ವತಃ ಮಧ್ಯಗೇಹರಿಗೆ ಪುರಾಣದಲ್ಲಿ ಸಂಶಯಗಳು ಬಂದಾಗ ವಾಸುದೇವನು ತಟ್ಟನೆ ಹೇಳುತ್ತಿದ್ದನು. ಗುರುಗಳ ಪಾಠಗಳಲ್ಲಿ ಅರ್ಥಕ್ಕೆ ಅನರ್ಥವಾದಾಗ ವಾಸುದೇವ ಗಂಭೀರವಾಗಿ ಕೈಜೋಡಿಸಿ “ಅದು ಹೀಗಿರಬೇಕು” ಎಂದು ಹೇಳುತ್ತಿದ್ದನು, ಅದೂ ಆಧಾರಕೊಟ್ಟು. ಒಮ್ಮೆ ಐತರೇಯ ಉಪನಿಷತ್ತಿನ ಪ್ರವಚನ ನಡೆದಿರುವಾಗ ವಾಸುದೇವನು ಗುರುಗಳನ್ನು ತಡೆದು “ಸ್ವಾಮಿ ಇದು ಉಪನಿಷತ್ತುಗಳಲ್ಲೆಲ್ಲ ಮುಕುಟಮಣಿ. ಇಲ್ಲಿಯೂ ಎಲ್ಲಿಯೂ ಉಕ್ತನಾದ ಭಗವಂತನು ಕಲ್ಯಾಣಗುಣಪೂರ್ಣನು, ದೋಷರಹಿತನು, ವೇದವೇದ್ಯನು, ಭಕ್ತ್ಯೈಕ ಗಮ್ಯನು, ಈ ಪ್ರಪಂಚ ಸತ್ಯವಾದುದು, ವಿಷ್ಣುವೇ ಸರ್ವೋತ್ತಮನು, ಜೀವರಾಶಿಗಳು ನಿತ್ಯರು, ಭಿನ್ನರು, ಹರಿಕಿಂಕರರು, ವಿಷ್ಣುಪಾದಾರವಿಂದ ಮಕರಂದವೇ ಮುಕ್ತಿಯ ಸುಖ, ಅದೇ ಜೀವರ ಗುರಿ, ಭಕ್ತಿಯನ್ನು ಬಿಟ್ಟು ಅನ್ಯಮಾರ್ಗವಿಲ್ಲ. ಬೇಕಾದರೆ ನನ್ನ ಹೋರಿ ಕರುವಿಗೆ ಕೇಳಿರಿ” ಎಂದು ಹೇಳಿ ಕೈಮಾಡಿದನು. ಸಮೀಪದಲ್ಲಿ ಮೆಲುಕಾಡಿಸುತ್ತಿದ್ದ ಹೋರಿ ಕರು ಮೂರು ಸಲ ಗೋಣು ಹಾಕಿತು. ತೋಟಂತಿಲ್ಲಾಯರು ಶಿಷ್ಯನನ್ನು ಪ್ರೀತಿಯಿಂದ ಬೀಳ್ಕೊಟ್ಟರು.

೪

ಪಾಜಕದಲ್ಲಿ ವಿದ್ಯಾಭ್ಯಾಸ ಮುಗಿದನಂತರ ಮಧ್ಯಗೇಹಾಚಾರ್ಯರು ಮಗನ ಮುಂದಿನ ಅಭ್ಯಾಸಕ್ಕಾಗಿ ಉಡುಪಿಯಲ್ಲಿರುವ ಶ್ರೀ ಅಚ್ಯುತಪ್ರೇಕ್ಷ ಶ್ರೀಪಾದಂಗಳವರಲ್ಲಿ ಕರೆದುಕೊಂಡು ಹೋದರು. ತಮ್ಮ ಜೊತೆಯಲ್ಲಿ ನರಸಿಂಹಭಟ್ಟರನ್ನು ಕರೆದುಕೊಂಡು ಗುರುಗಳ ಸಮೀಪ ಹೋದರು. ಆಗ ಪಾಠಪ್ರವಚನಗಳು ಆರಂಭವಾಗಿದ್ದವು. ಮೂವರೂ ಹೋಗಿ ನಮಸ್ಕರಿಸಿ ಕುಳಿತುಕೊಂಡರು. ಒಮ್ಮೆಲೆ ಶ್ರೀಪಾದಂಗಳವರು ವಾಸುದೇವನನ್ನು ನೋಡಿ ಅರಿಯದ ಅಂತಃಕರಣದ ಸ್ಪರ್ಶಪುಲಕಿತರಾಗಿ ಕೇಳಿದರು: “ಏನು ಬಂದೆ ಮಗು?” ಆಗ ಮಧ್ಯಗೇಹರು “ಗುರುಗಳೇ, ನನ್ನ ಮಗುವಿಗೆ ಏಳು ವರ್ಷ ಪಾಠಗಳಾಗಿವೆ. ಹೆಚ್ಚಿನ ವಿದ್ಯಾಭ್ಯಾಸವನ್ನು ಅನುಗ್ರಹಿಸಬೇಕು” ಎಂದರು. ಶ್ರೀಪಾದಂಗಳವರು ಒಮ್ಮೆ ವಾಸುದೇವನನ್ನು ನೋಡಿದರು. ಆ ಹರವಾದ ಹಣೆ, ಹೊಳಪಾದ ಕಣ್ಣುಗಳು, ಯಜ್ಞದ ಬೆಂಕಿಯಂಥ ಮೈಬಣ್ಣ, ಗಂಭೀರವಾದ ಮುಖಮುದ್ರೆ, ವಿಲಕ್ಷಣವಾದ ಜ್ಞಾನತೇಜಸ್ಸು ಅವರ ಮನ ಸೆಳೆದವು; ಆನಂದದಿಂದ ಒಪ್ಪಿ ತಮ್ಮಲ್ಲಿ ಉಳಿಸಿಕೊಂಡರು.

ಮರುದಿನ ಶ್ರೀ ಅಚ್ಯುತಪ್ರೇಕ್ಷರು ಪಾಠಪ್ರವಚನಗಳನ್ನು ಆರಂಭಿಸಬೇಕೆಂದು ಇಷ್ಟಸಿದ್ಧಿಯೆಂಬ ಗ್ರಂಥದ ಮೊದಲನೆಯ ಶ್ಲೋಕವನ್ನು ಅನುವಾದ ಮಾಡಲಾರಂಭಿಸಿದರು. ಇದ್ದಕ್ಕಿದ್ದಂತೆ ಅಲ್ಲಿಯ ಗಂಭೀರಮೌನವನ್ನು ಮುರಿದು “ಕ್ಷಮಿಸಿ ಗುರುಗಳೇ. ಇಂಥ ಗ್ರಂಥದಿಂದ ಇಹವಾಗಲಿ ಪರವಾಗಲಿ ಸಾಧಿಸದು” ಎಂದು ವಾಸುದೇವ ಹೇಳಿದ ಕೂಡಲೇ ಸಭೆ ಬೆರಗಾಯಿತು. ಮೊದಲ ಶ್ಲೋಕಕ್ಕೆ ಮೂವತ್ತೆರಡು ದೋಷಗಳಿವೆಯೆಂದು ವಾಸುದೇವ ಶ್ರುತಿ ಸ್ಮೃತಿಗಳ ಆಧಾರದಿಂದ ಹೇಳಹತ್ತಿದ ಕೂಡಲೆ ಅಲ್ಲವೆನ್ನುವ ಧೈರ್ಯ ಅವರಿಗೂ ಬರಲಿಲ್ಲ. ಅಂದಿನಿಂದ ವಾಸುದೇವ ಗುರುಗಳ ಪ್ರೀತಿಯ ಶಿಷ್ಯನಾದನು. ಯಾರಿಗೂ ನಿಲುಕದ ಯೋಗ್ಯತೆ ಈತನಲ್ಲಿದೆಯೆಂದು ಅವರಿಗೆ ಮನವರಿಕೆಯಾಯಿತು. ಒಮ್ಮೆ ಬೇರೆ ಬೇರೆ ಪಾಠಾಂತರಗಳಿದ್ದ ಭಾಗವತದ ಚರ್ಚೆ ನಡೆದಾಗ ಐದನೆಯ ಸ್ಕಂದವನ್ನು ಸಂಪೂರ್ಣ ಬಾಯಿಪಾಠ ಹೇಳಿದನು. ತನ್ನ ನಂತರ ಇವನಿಗೇ ಪೀಠವಾಗಬೇಕೆಂದು ಆಗಲೇ ಗುರುಗಳು ನಿರ್ಧರಿಸಿದರು.

ಮಗನ ಪ್ರತಿಭೆಯನ್ನೂ ಪ್ರಗತಿಯನ್ನೂ

ಕೇಳಿ ಮಧ್ಯಗೇಹರಿಗೆ ಹಿಡಿಸಲಾರದಷ್ಟು ಆನಂದ. ಒಂದು ದಿನ ಅನಿರೀಕ್ಷಿತವಾಗಿ ಮಗನೇ ಬಂದುದನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. "ಏನು ಸಮಾಚಾರ ?" ಎಂದು ಕೇಳಿದರು. "ನನ್ನದೊಂದು ಆಸೆಯಿದೆ. ಅಪ್ಪಣೆಕೊಡಬೇಕು" ಎಂದನು. ಆಚಾರ್ಯರು ಆನಂದದ ಭರದಲ್ಲಿ "ಕೇಳು ಮಗು" ಎಂದರು. "ನಾನು ಸಂನ್ಯಾಸ ತೆಗೆದುಕೊಳ್ಳುತ್ತೇನೆ."

ಮಧ್ಯಗೇಹರಿಗೆ ಕಣ್ಣಿಗೆ ಕತ್ತಲು ಕವಿದಂತಾಯಿತು. ಮನಸ್ಸು ಕಳವಳದಿಂದ ತಲ್ಲಣಗೊಂಡಿತು. ತಮ್ಮ ಜೀವನದಲ್ಲಿಯ ಎಲ್ಲ ದುಃಖಗಳೂ ಎಲ್ಲಿಂದಲೋ ಬಂದು ಮುಸುಕಿದಂತಾಯಿತು. "ಮಗು, ಹಾಗೆ ಮಾಡಬೇಡ. ಹನ್ನೆರಡು ವರ್ಷ ತಪಸ್ಸು ಮಾಡಿ ನಿನ್ನನ್ನು ಸಂನ್ಯಾಸಕ್ಕಾಗಿ ಪಡೆದೆವೆ?" ಎಂದು ಕೇಳಿದರು. ಆಗ ವಾಸುದೇವನು "ತಂದೆಯವರೇ ಸಂನ್ಯಾಸವು ನನ್ನ ಅಚಲ ನಿರ್ಧಾರ. ಅದರಿಂದ ಒಂದು ಹೆಜ್ಜೆ ಕೂಡ ನಾನು ಹಿಂದೆ ಸರಿಯಲಾರೆ. ನನ್ನ ಜೀವನ ಭಗವತ್ಕಾರ್ಯಸಾಧನೆಗಾಗಿ. ಪ್ರಪಂಚವನ್ನು ಮಾಯೆಯಿಂದ ತೆಗಳಿ 'ಸೋಹಂ' ದ ಹುಸಿಹಮ್ಮಿನ ಗುಂಗಿನಲ್ಲಿ ಸತ್ಯವಾದ ಪ್ರಪಂಚವನ್ನು ಸುಂದರವಾದ ಜೀವನವನ್ನು ದುರ್ದೆಸೆಗೆಳೆಯುತ್ತಿರುವ ಈ ಅದ್ವೈತ ವಾದದ ನಿರ್ಮೂಲನ ನನ್ನ ಗುರಿ. ಅದರ ಸಾಧನೆಗಾಗಿ ನನ್ನ ಬದುಕು ಮುಡಿಪಾಗಿದೆ. ಅದಕ್ಕೆ ಸಂನ್ಯಾಸ ಅವಶ್ಯವೆಂದೇ ನಾನು ನಿರ್ಧರಿಸಿದ್ದೇನೆ, ಅದನ್ನು ಕೈಕೊಳ್ಳಲು" ಎಂದು ಹೇಳಿದನು. ಮಗನ ಮಾತುಗಳನ್ನು ಕೇಳಿ ಮಧ್ಯಗೇಹರು ತಲ್ಲಣಗೊಂಡರು. "ಮಗು, ಈ ಹಟ ಬೇಡ. ನಮ್ಮ ಮನೆತನ ಇಲ್ಲಿಗೇ ನಿಲ್ಲಬೇಕೆಂದು ನಿನ್ನ ಆಸೆಯೇ?" ಎಂದು ಕೇಳಿದರು. "ಮನೆತನ ನಡೆಯುವದೂ ನಿಲ್ಲುವದೂ ಭಗವಂತನ ಇಚ್ಛೆ. ಆದರೆ ಯಾವ ದೈವಬಲದಿಂದ ನಾನು ಸಂನ್ಯಾಸದ ನಿರ್ಧಾರ ಕೈಕೊಂಡಿರುವೆನೋ ಅದರ ಬಲದಿಂದಲೇ ನಿಮಗೆ ಇನ್ನೊಬ್ಬ ಕುಮಾರನು ಹುಟ್ಟುವನೆಂಬುದು ನಿಸ್ಸಂದೇಹವಾದ ಮಾತು. ಈಗಲಾದರೂ ನನಗೆ ಅಪ್ಪಣೆ ಕೊಡಿರಿ" ಎಂದನು. ತಂದೆ ಕಣ್ಣೀರು ತಂದು "ಬೇಡ"ವೆನ್ನುತ್ತ ಮಗನ ಕಾಲಿಗೆ ಬಿದ್ದರು. "ಈಗ ಶಾಸ್ತ್ರೋಕ್ತವಾಗಿಯೇ ಒಪ್ಪಿಗೆ ದೊರೆಯಿತು. ಮಗನು ಸಂನ್ಯಾಸಿಯಿದ್ದರೆ ಮಾತ್ರ ತಂದೆ ನಮಸ್ಕರಿಸುತ್ತಾರೆ. ಇನ್ನು ನನಗೆ ಅಡ್ಡಿಯಿಲ್ಲ" ಎಂದನು. ಆಗ ಮಧ್ಯಗೇಹರು ಭಾರವಾದ ಮನಸ್ಸಿನಿಂದ "ತಾಯಿಯನ್ನು ಕೇಳಿ ನೋಡು" ಎಂದರು. ಆಗ ವಾಸುದೇವನು ಅಚಲವಾದ ನಿರ್ಧಾರದಿಂದ ಕಣ್ಣೀರು ತುಂಬಿದ ತಾಯಿಗೆ "ತಾಯಿಯೇ, ನನ್ನ ಸಂನ್ಯಾಸವು ದೈವ ಸಂಕಲ್ಪ. ಅದಕ್ಕೆ ಯಾರೂ ಅಡ್ಡಿ ಬರಲಾರರು. ನೀನು ಪ್ರೀತಿಯಿಂದ ಅಪ್ಪಣೆ ಕೊಡು. ಇಲ್ಲವಾದರೆ ನನ್ನನ್ನು ನೀನು ಎಂದಿಗೂ ಕಾಣಲಾರೆ" ಎಂದನು. ನಿರುಪಾಯಳಾಗಿ ತಾಯಿ ಅಪ್ಪಣೆ ಕೊಟ್ಟರು.

ಮರುದಿನ ನಸುಕಿನಲ್ಲಿ ವಾಸುದೇವನು ಬೆಟ್ಟದ ದಾರಿಯಿಂದ ಉಡುಪಿಗೆ ಹೊರಟನು. ತಾಯಿ ತಂದೆಗಳೂ ಮಿತ್ರರೂ ಭಾರವಾದ ಎದೆಯಿಂದ ಬೀಳ್ಕೊಟ್ಟರು. ಕಣಿವೆಯ ದಾರಿಯ ಸಮೀಪ ಬಂದಾಗ ಕತ್ತಲೆ ಪರೆ ಸಡಿಲಾಗುತ್ತ ಬೆಳಕಿನ ಹುದಿ ಹರಡಿಕೊಳ್ಳುತ್ತಿತ್ತು. ಗಾಳಿ ಸುಖಸ್ಪರ್ಶಿಯಾಗಿ ಬೀಸುತ್ತಿತ್ತು, ನಕ್ಷತ್ರಗಳು ಮಸುಕಾದವು. ಮೂಡಲದಲ್ಲಿ ಚಿನ್ನದ ತಳಿಗೆಯಂತೆ ಸೂರ್ಯನು ಮೂಡಿ ಬಂದನು. ಬೆಟ್ಟಕ್ಕೆ ಬಣ್ಣ ಬಂದಿತು. ಲೋಕಕ್ಕೆ ಕಣ್ಣು ಬಂದಿತು. ಈ ನವೋದಯದ ರಸನಿಮಿಷದಲ್ಲಿ ಗೂಡುಗಳ ಗಂಧರ್ವರು ಮುಕ್ತಕಂಠದಿಂದ ಉದಯಸೂಕ್ತವನ್ನು ಹಾಡುತ್ತ ಗುಂಪುಗುಂಪಾಗಿ ಆಕಾಶದ ಗಾವುದಗಳನ್ನು ಅಳೆಯಹೊರಟರು. ಬಣ್ಣಬಣ್ಣದ ಮೇಘಾವಳಿ ಯಕ್ಷ ಕಿನ್ನರರಂತೆ ದೇವ ಗಂಧರ್ವರಂತೆ ಮನಸ್ಸಿಗೆ ಬಂದ ರೂಪತಳೆದು ಆಕಾಶಯಾತ್ರೆ ಕೈಕೊಂಡಿದ್ದವು. ವಾಸುದೇವನು ಉಡುಪಿಯನ್ನು ತಲುಪಿದಾಗ ಶ್ರೀ ಅಚ್ಯುತ ಪ್ರೇಕ್ಷರು ಅವನ ಮುಖದಲ್ಲಿ ಅಪೂರ್ವವಾದ ಗೆಲವಿನ ತೇಜವನ್ನು ಕಂಡರು. ಆ ದಿನ ಪಾಜಕದ ವಾಸುದೇವನು ಪ್ರಪಂಚದ ಪೂರ್ಣಪ್ರಜ್ಞನಾದನು.

ಜ್ಯೋತಿಷಿ ಶ್ರೀ. ಕೃಷ್ಣಶಾಸ್ತ್ರಿ ಭಿಡೆ
ಭವಿಷ್ಯಕಥನ ಕಾರ್ಯಾಲಯ, ಕಾರ್ಲೆಕರ ಬಿಲ್ಡಿಂಗ,
ಖಡೇಬಜಾರ– ಬೆಳಗಾಂವಿ

# ವರ್ಷ ಭವಿಷ್ಯ

**ಶಕೆ ೧೮೭೪ ಕಾರ್ತಿಕ ಶುದ್ಧ ಪ್ರತಿಪದೆ ರವಿವಾರದಿಂದ**
**೧೮೭೫ ಆಶ್ವಿನ ಬಹುಳ ೩೦ ಶುಕ್ರವಾರ ಅಂದರೆ**

## ೧೯೫೨ ಅಕ್ಟೋಬರ ೧೯ ರಿಂದ
## ೧೯೫೩ ನವಂಬರ ೬ರ ವರೆಗೆ

**ಸೂಚನೆ :—** ಪ್ರತಿ ಜನ್ಮರಾಶಿಯವರಿಗೆ ಪ್ರತಿ ಗ್ರಹದ ವಿಚಾರವನ್ನು ಸಾಕಲ್ಯೇನಮಾಡಿ ಆಯಾ ಗ್ರಹಗಳ ಒಳ್ಳೆ ಕೆಟ್ಟ ಪರಿಣಾಮ ಎಷ್ಟರ ಮಟ್ಟಿಗೆ ಆಯಾ ರಾಶಿಯವರ ಮೇಲೆ ಆಗುವದೆಂಬದನ್ನು ಈ ಭವಿಷ್ಯದಿಂದ ಬಹಳ ಮಟ್ಟಿಗೆ ತಿಳಿಯಬಹುದು.

ವಾಸ್ತವವಾಗಿ ಆಯಾ ವ್ಯಕ್ತಿಗಳ ಭವಿಷ್ಯವನ್ನು ಅವರವರ ಜನ್ಮಕುಂಡಲಿಯ ಮೇಲೆ ಹೇಳಿದ್ದಾದರೆ ಅದು ಸಂಪೂರ್ಣವಾಗಿ ಕೂಡಿಬರುವದೆಂಬುದು ಸುಸ್ಪಷ್ಟವಿದೆ.

ಆದರೂ ಈ ವಾರ್ಷಿಕಭವಿಷ್ಯವು ಪ್ರತಿಯೊಬ್ಬ ಮನುಷ್ಯನಿಗೆ ಈ ವರ್ಷ ಸುಖದುಃಖಗಳ ವಾತಾವರಣದಲ್ಲಿ ಎಷ್ಟರ ಮಟ್ಟಿಗೆ ಇರಬೇಕಾಗುವದೆಂಬದನ್ನು ಸ್ಪಷ್ಟವಾಗಿ ತಿಳಿಸಿಕೊಡುವದರಲ್ಲಿ ಸಂದೇಹವಿಲ್ಲ.

ಪ್ರತಿಯೊಬ್ಬನು ಈ ಭವಿಷ್ಯವನ್ನು ತನ್ನ ಜನ್ಮರಾಶಿಗನುಸಾರವಾಗಿ ಜನ್ಮಲಗ್ನವನ್ನು ನೋಡಿಯೂ ತಿಳಿದುಕೊಂಡು ಇವೆರಡರ ಫಲಗಳನ್ನೂ ಲಕ್ಷದಲ್ಲಿ ಇಟ್ಟುಕೊಂಡು ನಡೆದದ್ದಾದರೆ ಕಟು ಅರ್ಥಾತ್ ಅಶುಭ ಫಲಗಳಿಗಾಗಿ ಜಾಗ್ರತವಿರಲು ಬರುವದು, ಮತ್ತು ಶುಭ ಫಲಕ್ಕಾಗಿ ಹೆಚ್ಚು ಪ್ರಯತ್ನಮಾಡಲಿಕ್ಕೆ ಬರುವದು. ಈ ವರ್ಷದ ಭವಿಷ್ಯಪಥವನ್ನು :ಶಕ್ಯವಿದ್ದಷ್ಟು ಸುಖಕರ ಮಾಡಿಕೊಂಡು ಆತ್ಮೋನ್ನತಿಯನ್ನು ಸಾಧಿಸಲು ಅವಕಾಶ ಸಿಕ್ಕುವವೆಂಬದನ್ನು ಪೂರ್ಣ ಮನವರಿಕೆ ಮಾಡಿ ನೋಡಿಕೊಳ್ಳಬೇಕು.

ಸ್ತ್ರೀಯರಿಗೆ ಬಹುಶಃ ಪುರುಷರಂತೆಯೇ ಫಲ ಸಿಕ್ಕುವವು. ಆದರೂ ದೈಹಿಕ ತಾರತಮ್ಯವನ್ನು ಲಕ್ಷ್ಯದಲ್ಲಿ ಇಟ್ಟುಕೊಳ್ಳಲೇಬೇಕಾಗುವದು.

## ಮೇಷ

ಈ ರಾಶಿಯವರಿಗೆ ಸುಮಾರಾಗಿ ರೂಪಾಯಿಯಲ್ಲಿ ಹದಿನಾಲ್ಕಾಣೆ ಅನುಕೂಲವಿರುವದು. ನವಂಬರ ೫ ರಿಂದ ಮುಂದಿನ ಕಾಲವು ಬಹಳ ಉಜ್ವಲವಿದೆ. ಆದರೂ ಈ ರಾಶಿಯ ಸ್ತ್ರೀಯರಿಗಿಂತ ಪುರುಷರಿಗೆ, ಬಾಲರು ಮತ್ತು ವೃದ್ಧರಿಗಿಂತ ತರುಣರಿಗೆ ಮತ್ತು ಧಂದೆಯವರಿಗಿಂತ ನೌಕರರಿಗೆ ಹೆಚ್ಚು ಭಾಗ್ಯಕರವಿರುವದು.

ಆರೋಗ್ಯ ಒಟ್ಟಾರೆ ಅನುಕೂಲ. ರಕ್ತಾಭಿಸರಣ ಅನುಕೂಲ, ಪಚನ ಚನ್ನಾಗಿ ಆಗಿ ಒಳ್ಳೆ ಹಸಿವೆಯಾಗುವದು. ಯಾವದೇ ಕೆಲಸಮಾಡುವಲ್ಲಿ ಉತ್ಸಾಹ ಹೆಚ್ಚಿ ಶಕ್ತಿಮೀರಿ ಕೆಲಸಮಾಡುವ ಹುರುಪೂ ಉಳಿಯುವದು. ಹಿಂದೆ ಅನೇಕ ವರ್ಷ ಇಲ್ಲದಷ್ಟು ಮಾನಸಿಕ ಸಮಾಧಾನ. ಆದರೂ ಜನೆವರಿ ೨೮ ರಿಂದ ಮಾರ್ಚ ೧೦, ಎಪ್ರಿಲ ೨೦ ರಿಂದ ಜೂನ ೩ ಮತ್ತು ಜುಲೈ ೨೦ ರಿಂದ ಸಪ್ಟೆಂಬರ ೫ ರ ವರೆಗಿನ ಕಾಲದಲ್ಲಿ ಪ್ರಕೃತಿಯ ಬಗ್ಗೆ ಸ್ವಲ್ಪ ಕಾಳಜಿ ತೆಗೆದುಕೊಳ್ಳಬೇಕು. ಕಣ್ಣೋವು, ತಲೆನೋವು, ಬಾಯಿಬರುವದು, ಮೂಲವ್ಯಾಧಿ ಇದ್ದರೆ ಅದು ಮತ್ತೆ ಸುರುವಾದೀತು. ಪ್ರಾಪಂಚಿಕ ಸುಖಕ್ಕೆ ಈ ವರುಷ ಪ್ರತಿಕೂಲವಿರುವದಿಲ್ಲ, ತದ್ವಿರುದ್ಧವಾಗಿ ನವಂಬರ ೫ ರಿಂದ ಹೆಚ್ಚು ಅನುಕೂಲವಾಗಿ ಪರಿಣಮಿಸುವದು. ಎಪ್ರಿಲ ೬ ರ ನಂತರವಂತೂ ಅದು ಬಹಳ ಅನುಕೂಲ. ಅನೇಕ ಪ್ರಕಾರದ ಸುಖಕರ ಸಂಗತಿಗಳು ಸಂಭವಿಸುವವು. ಅಪೇಕ್ಷೆಯಂತೆ ಕೌಟುಂಬಿಕ ಪತ್ತು ಹೆಚ್ಚುತ್ತ ಹೋಗುತ್ತದೆ. ಐಪತ್ತಿಯ ಮಾನದಿಂದ ಸುಂದರ ಮತ್ತು ಮೂಲ್ಯವಾನ್ ವಸ್ತುಗಳ ಸಂಗ್ರಹವಾಗುವದು. ಆದರೆ ಮನಸ್ಸಿಗೆ ಏನೋ ಒಂದು ವಿಪರೀತ ಧ್ಯಾಸ ಹತ್ತಿ ಒಳಗೊಳಗೆ ಕುದಿಯಬೇಕಾದ ಅಂಜಿಕೆ ಇದೆ.

ಎಪ್ರಿಲ ೬ ರಿಂದ ಸ್ತ್ರೀಸುಖ ಅತಿ ಉತ್ತಮ. ಆದರೆ ಮುಂದೆ ಅವಳ ಪ್ರಕೃತಿಗೆ ಕಿರಕಳ ವಿಕಾರ ಮತ್ತು ದಿನವೂ ಕುರಕುರಿ ಇದ್ದದ್ದೇ. ದಿನದಿನಕ್ಕೆ ಅವಳು ಚಂಡಿ ಸ್ವಭಾವದವಳಾಗುವಳು. ಆದರೂ ಉಭಯತರಲ್ಲಿಯ ಪ್ರೇಮ ಮತ್ತು ಆದರ ಹಾಗೇ ಉಳಿಯುವವು. ನವಂಬರ ೧೧ ರಿಂದ ಡಿಸೆಂಬರ ೫, ಡಿಸೆಂಬರ ೩೧ ರಿಂದ ಜನೆವರಿ ೨೬, ಮೇ ೧ ರಿಂದ ಜೂನ ೨೯, ಜುಲೈ ೨೬ ರಿಂದ ಅಗಸ್ಟ ೨೩, ಸಪ್ಟೆಂಬರ ೧೬ ರಿಂದ ಅಕ್ಟೋಬರ ೧೩ ಈ ಅವಧಿಯು ಅವಳ ಸುಖಕ್ಕೆ ಬಹಳ ಅನುಕೂಲವಿರುವದು. ನಿಮ್ಮ ಮದುವೆಯಾಗುವದಿದ್ದರೆ ಎಪ್ರಿಲ ೬ ರೊಳಗಾಗಿ ಅಲ್ಪಾಯಾಸದಿಂದ ಆಗುವದು. ಮುಂದೆಯಾದರೂ ಆಗುವದು, ಆದರೆ ಸ್ವಲ್ಪ ತೊಂದರೆಯಿಂದಾಗುವದು. ವಧು ಮಾತ್ರ ಅನುರೂಪ ದೊರೆಯುವಳು. ಆದರೆ ಕೊಡತಕ್ಕೊಳ್ಳುವ ಮುಂತಾದ್ದರ ಸಂಬಂಧದಲ್ಲಿ ಕಲಹವೆದ್ದು ಸಮಾರಂಭದಲ್ಲಿ ವಿರಸವಾಗುವದು. ಸಂತತಿಸುಖ ಬಹಳ ಅನುಕೂಲ. ಅವರು ತಮ್ಮ ವಯೋಮಾನಕ್ಕನುಗುಣವಾಗಿ ಪ್ರಗತಿಪಥದಲ್ಲಿ ಇರುವರು. ಅವರಲ್ಲಿ ಯಾವನದಾದರೂ ಮದುವೆಯಾಗುವದಿದ್ದರೆ ನವಂಬರ ೫ ರಿಂದ ಮುಂದಿನ ಕಾಲವು ಬಹಳ ಅನುಕೂಲ. ಸೊಸೆ ಇಲ್ಲವೆ ಅಳಿಯ ಯೋಗ್ಯ ರೀತಿಯಿಂದ ವರ್ತಿಸುವರು. ಬಾಡಿಗೆ ಮನೆಯಲ್ಲಿ ಇದ್ದರೆ ಒಡೆಯನೊಡನೆ, ನೀವೇ ಮನೆಯೊಡೆಯರಿದ್ದರೆ ಬಾಡಿಗೆದಾರರೊಡನೆ ಕ್ಷುಲ್ಲಕ ಕಾರಣಗಳಿಗಾಗಿ ತಕರಾರಿನ ಪ್ರಸಂಗವು ಮೇಲಿಂದ ಮೇಲೆ ಬರುವದು. ನಿಮ್ಮ ಉತ್ಕರ್ಷ ನೆರೆಯವರಿಗೆ ಸಹನವಾಗದು. ಆಪ್ತರಿಗಿಂತ ಹೊರಗಿನವರಲ್ಲಿಯೆ ಹೆಚ್ಚು ಆದರ. ಹೊಲಗದ್ದೆ ಇದ್ದವರಿಗೆ ಉತ್ಪನ್ನವು ನೆಟ್ಟಗೆ ಬರುವದು ಮತ್ತು ಏನೂ ತೊಂದರೆಯಿಲ್ಲದೆ ಅದು ಮನೆಯಲ್ಲಿ ಬೀಳುವದು. ಒಳ್ಳೆ ಉತ್ಪನ್ನದ ಒಂದು ಹೊಲವನ್ನು ಯೋಗ್ಯ ಬೆಲೆಗೆ ಕೊಂಡುಕೊಳ್ಳುವ ಯೋಗವಿದೆ. ಊರಲ್ಲಿ ನಿಮ್ಮ ವರ್ಚಸ್ಸು ಬಹಳ ಮಟ್ಟಿಗೆ ಹೆಚ್ಚುವ ಸಂಭವವಿದೆ. ನಿಮ್ಮ ತಾಯಿ ಇದ್ದರೆ ಅವಳ ಆರೋಗ್ಯ ಅಷ್ಟೊಂದು ಚನ್ನಾಗಿ ಉಳಿಯುವದಿಲ್ಲ. ಜುಲೈ ೧೬ ರಿಂದ ಅಗಸ್ಟ ೧೫ ರ ವರೆಗೆ ಆರೋಗ್ಯ ಬಹಳ ಕೆಡುವದು. ಜನ್ಮಕುಂಡಲಿಯಲ್ಲಿ ಮಾತೃಸ್ಥಾನದಲ್ಲಿ ಶನಿ, ರಾಹು ಇಲ್ಲವೆ ಮಂಗಳ ಇವುಗಳಲ್ಲಿ ಯಾವುದಾದರೊಂದು ಪಾಪಗ್ರಹವಿದ್ದರೆ ಕದಾಚಿತ್ ಅವಳ ವಿಯೋಗವೂ ಆಗಬಹುದು.

ಧಂದೆ ಕೂಲಿಯವರಿಗೆ ಈ ವರ್ಷ ಬಹಳ ಸಮಾಧಾನದ್ದು. ನವಂಬರ ೫ ರಿಂದ ಪ್ರಗತಿ

ಒಂದೇ ಸವನೆ. ನೋಕರಿಯುವರಿಗೆ ಜೂನ ೩ ರಿಂದ ೨೦ ಜುಲೈ ಇಲ್ಲವೆ ೫ ಸಪ್ಟೆಂಬರದಿಂದ ಅಕ್ಟೋಬರ ೨೨ರ ವರೆಗೆ ಮೇಲಿನ ಗ್ರೇಡು ಖಾತ್ರಿಯಾಗಿ ಸಿಕ್ಕುವದು. ನವಂಬರ ೫ ರಿಂದ ವರಿಷ್ಠರ ಮರ್ಜಿ ಹೆಚ್ಚುತ್ತ ಹೋಗುವದು, ಬದಲಿಯಾಗುವ ಶಾಖೆ ಇದ್ದರೆ ನಿಮಗೆ ಅನುಕೂಲವಿದ್ದ ಸ್ಥಳಕ್ಕೆ ವಿಶೇಷತಃ ಜನೆವರಿ ೩ರಿಂದ ಫೆಬ್ರವರಿ ೨೬, ಮೇ ೧ ರಿಂದ ೧೮, ಆಗಸ್ಟ ೨೬ ರಿಂದ ಸಪ್ಟಂಬರ ೧೩ ಈ ಅವಧಿಯಲ್ಲಿ ಆಗಬಹುದು. ಕಸ್ಟಂ ಪೋಲೀಸ ಮತ್ತು ಜಕಾತಿ ಶಾಖೆಯಲ್ಲಿಯ ನವಕರರಿಗೆ ಹೆಚ್ಚು ಸುಖ ಮತ್ತು ಲಾಭವಾಗುವದು. ಸ್ವತಂತ್ರ ಹುದ್ದೆಯುವರಿಗೆ ನವಂಬರ ೮ ರಿಂದ ಜನೆವರಿ ೨೮, ಮಾರ್ಚ ೧೦ ರಿಂದ ಎಪ್ರಿಲ ೨೦, ಜೂನ ೩ ರಿಂದ ಜುಲೈ ೨೦ ಈ ಅವಧಿ ವಿಶೇಷ ಲಾಭದ್ದಾಗಿ ಪರಿಣಮಿಸುವದು. ಕಿರಕಳ ಧಂದೆಯುವರಿಗೆ ಠೋಕದವರಿಗಿಂತ ಹೆಚ್ಚು ಲಾಭವಾಗುವದು.

ಕೋರ್ಟು ಕಚೇರಿ ದಾವೆಗಳಲ್ಲಿ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ನವೆಂಬರ ೫ ರ ವರೆಗೆ ನೀವೇ ಹಿಮ್ಮೆಡಬೇಕಾಗುವದು. ನಿಮ್ಮ ಸಹಾಯುಕರು ಇಲ್ಲವೆ ಮಿತ್ರರು ಪ್ರತಿಪಕ್ಷಿಗಳಿಗೆ ಫಿತೂರ ಆಗುವರು. ಆದರೆ ಡಿಸೆಂಬರ ೧೯ರಿಂದ ಮುಂದೆ ನಿಮಗೆ ಅನೇಕಕೆಲಸಗಳಲ್ಲಿ ಬಹಳ ಅನುಕೂಲ ಯಶಸ್ಸು; ಪ್ರತಿಪಕ್ಷಿಗಳಲ್ಲಿ ಕೆಲವರು ನಿಮ್ಮ ವಶಕ್ಕೆ ಬರುವರು. ಎಪ್ರಿಲ ೬ ರಿಂದ ಗುಪ್ತ ಶತ್ರುಗಳು ಬಹಳ ತೊಂದರೆ ಕೊಡುವರು.

ಈ ರಾಶಿಯು ಹೆಣ್ಣು ಮಕ್ಕಳು ಹಡೆಯುವವರಿದ್ದರೆ ಅವರು ಸುಲಭರೀತಿಯಿಂದ ಹಡೆಯುವರು. ಎಪ್ರಿಲ ೬ ರ ವರೆಗೆ ಪುತ್ರಪ್ರಾಪ್ತಿಯೋಗವಿದ್ದರೆ ಮುಂದೆ ಮಾತ್ರ ಕನ್ಯಾಪ್ರಾಪ್ತಿಯೋಗ ಬಲವತ್ತರವಿದೆ. ಡಿಸೆಂಬರ ೧೯ ರಿಂದ ಜನೆವರಿ ೨೮, ಸಪ್ಟಂಬರ ೫ ರಿಂದ ೨೨ ಅಕ್ಟೋಬರ ಅವಧಿಯಲ್ಲಿ ಗರ್ಭವತಿಯುರಿದ್ದರೆ ಸ್ವಲ್ಪ ತೊಂದರೆಯಾಗುವದು. ಆದರೆ ನಿಮಗೆ ಇಲ್ಲವೆ ಗರ್ಭಕ್ಕೆ ಯಾವದೇ ಬಗೆಯ ಅಂಜಿಕೆಯಿಲ್ಲ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಎಪ್ರಿಲ ೬ ರ ವರೆಗೆ ಆದರೆ ನಿಶ್ಚಯವಾಗಿ ಯಶಸ್ಸು ಸಿಕ್ಕುವದು. ಅನಂತರ ಯಾರ ಪರೀಕ್ಷೆಯಾಗುವದೋ ಅವರು ಒಳ್ಳೇ ಜೋರಿನಿಂದ ಅಭ್ಯಾಸಮಾಡಿದರೆ ಮಾತ್ರ ಪಾಸಾಗಲು ಬೇಕಾಗುವಷ್ಟು ಗುಣಗಳು ಬೀಳುವವು. ಭಾಷಾವಿಷಯದ ಬಗ್ಗೆ ಹೆಚ್ಚು ಕಾಳಜಿ ತೆಗೆದುಕೊಳ್ಳಬೇಕಾಗುವದು.

## ವೃಷಭ

ಈ ರಾಶಿಯುವರಿಗೆ ಒಟ್ಟಾರೆ ಈ ವರುಷ ಪ್ರಾಪಂಚಿಕ ತೊಂದರೆಯದು ಇದ್ದರೂ ಔದ್ಯೋಗಿಕ ಹಿತದ್ದಿರುವದು. ಅದರಲ್ಲಿಯೂ ಎಪ್ರಿಲ ೬ ರ ನಂತರದ ಕಾಲವು ಹೆಚ್ಚು ಅನುಕೂಲವಿರುವದು.

ಆರೋಗ್ಯಕ್ಕೆ ಈ ವರ್ಷ ಅಷ್ಟೊಂದು ಅನುಕೂಲವಿಲ್ಲ. ಮೊದಲು ನವಂಬರ ೮ ರ ವರೆಗೆ, ಅನಂತರ ಮಾರ್ಚ ೧೦ ರಿಂದ ಎಪ್ರಿಲ ೨೦ ರ ವರೆಗೆ ಮತ್ತು ಆ ಬಳಿಕ ಸಪ್ಟಂಬರ ೫ ರಿಂದ ಅಕ್ಟೋಬರ ೨೨ ರ ವರೆಗೆ ಅದು ಕೆಲಮಟ್ಟಿಗೆ ಕೆಡುವ ಸಂಭವ ಇರುವದು. ಮೂಲವ್ಯಾಧಿ, ವೃಷಣವೃದ್ಧಿ, ತೊಡೆಗಳಿಗೆ ಏನಾದರೂ ವಿಕಾರವಾಗುವದು, ವಿನಾಕಾರಣ ವೀರ್ಯಪಾತವಾಗುತ್ತ ನಡೆಯುವದು ಇವೇ ಮುಂತಾದ ಕಾರಣಗಳಿಂದ ಬಹಳ ತೊಂದರೆಯಾಗುವದು. ಮಾನಸಿಕ ಸಮಾಧಾನ ಎಪ್ರಿಲ ೬ರ ವರೆಗಂತೂ ದುರ್ಲಭವಾಗುವದು. ಪ್ರಾಪಂಚಿಕ ತೊಂದರೆ ಬಹಳ. ಮನೆಯಲ್ಲಿಯ ಬಹಳಷ್ಟು ಜನರು ನಿಮ್ಮ ವಿರುದ್ಧ ವರ್ತಿಸುವರು. ಕೆಲ ಜನರು ಮುಂದೆ ತೊಂದರೆಯಾಗುವಂತೆ ಸ್ಥಾವರ ಸಂಬಂಧದಲ್ಲಿ ವ್ಯವಹಾರ ನಡೆಸುವರು. ಅಣ್ಣತಮ್ಮಂದಿರು ವಿಭಕ್ತರಾಗುವರು. ಆಗದಿದ್ದರೂ ಅಂಥ ಮಾತನ್ನಾದರೂ ಆಡಹತ್ತುವರು. ನಿಮ್ಮನಿಮ್ಮಲ್ಲಿ ತಪ್ಪುತಿಳಿವಳಿಕೆ, ವಿರೋಧ, ಅಪನಂಬಿಕೆ ಮತ್ತು ಮೋಸ ಬಹಳ ಹೆಚ್ಚುವದು. ಆದರೆ ನವಂಬರ ೫ ರಿಂದ ನಿಮಗೆ ಸಹಾಯುಕರ್ತರು ಒಳ್ಳೆಯವರು ದೊರೆಯಹತ್ತುವರು. ಯಾರು ಎಷ್ಟೇ ಮೋಸಮಾಡಬೇಕೆಂದರೂ ಆಯುತ್ತ ಸಮಯದಲ್ಲಿ ಅವರದೇ ಫಜೀತಿಯಾಗುವದು.

ಎಪ್ರಿಲ ೬ ರ ವರೆಗೆ ಹೆಂಡತಿಯೊಡನೆ ನಿಮ್ಮದು ವಿಶೇಷ ಕೂಡಿ ನಡೆಯುವದಿಲ್ಲ. ನಿಮ್ಮ ಮೇಲೆ ಅವಳು ಏನೇನೋ ಆರೋಪ ಹೊರಿಸುವಳು. ನೀವು ಮಾತ್ರ ಅವಳು ವಿಪರೀತ ಲೆಕ್ಕಮಾಡುವವಳೆಂದು ಭಾವಿಸುವಿರಿ. ಆದರೆ ಈ ತಾರೀಖಿನಿಂದ ಮುಂದೆ ಮಾತ್ರ ಉಭಯುತರಲ್ಲಿ ಒಳ್ಳೆ ಸಾಮರಸ್ಯ. ನಿಮ್ಮ ವಿವಾಹವಾಗುವದಿದ್ದರೆ ಎಪ್ರಿಲ ೬ ರ ನಂತರ ಅಲ್ಪಾಯಾಸದಿಂದ ಆಗುವದು, ವಧು ಮಾತ್ರ ನಿಮ್ಮ ಮನಸ್ಸಿಗೆ ಅಷ್ಟೊಂದು ಬರುವದಿಲ್ಲ. ಆದರೆ ಅತ್ತೆಯ ಮನೆಯುವರು ಶ್ರೀಮಂತರಿರುವರು. ಲಗ್ನವಾಗುವಾಗ ಒಂದೆರಡು ಮುರಕಳಿಯ ಅಡಚಣಿಗಳು ಕೂಡ ಬಂದು ಲಗ್ನದ ಮುಹೂರ್ತ ಬದಲಿಸಬೇಕಾಗಿಬರುವದು. ಮಕ್ಕಳಿಂದಲೂ ಈ ವರ್ಷ ನಿಮಗೆ ವಿಶೇಷ ಸುಖ ಸಿಕ್ಕದು. ನವಂಬರ ೫ ರ ನಂತರ ಮಾತ್ರ ಅವರಲ್ಲಿ ಒಬ್ಬನ ಬಹಳ ಉತ್ಕರ್ಷವಾದರೂ ನಿಮಗೇನು ಅದರಿಂದ ಉಪಯೋಗವಾಗದು. ಎಪ್ರಿಲ ೬ ರಿಂದ ಹೆಣ್ಣು ಮಕ್ಕಳಲ್ಲಿ ಪ್ರಗತಿಪರ ಘಟನೆಗಳು ಬಹಳಷ್ಟು ಆಗುವವು. ಅವರ ವಿವಾಹವಾಗುವದಿದ್ದರೆ ಹೆಣ್ಣು ಹುಡುಗೆಯರಿಗೆ ಎಪ್ರಿಲ ೬ ರ ವರೆಗೆ, ಗಂಡು ಹುಡುಗರಿಗೆ ಅನಂತರ, ಬಾಸಿಂಗಬಲವಿದೆ ಎಂದು ತಿಳಿಯತಕ್ಕದ್ದು. ಹೊರಗಿನ ಆಪ್ತರೊಡನೆ ಬಹಳ ಕೂಡಿ ನಡೆಯುವದು. ಮನೆಯಲ್ಲಿ ನೋಕರ ಚಾಕರರು ಇದ್ದರೆ ಅವರಲ್ಲಿ ವಿಶೇಷವಾಗಿ ನಿಮ್ಮ ಮರ್ಜಿಯಲ್ಲಿ ಇದ್ದವರು ನಿಮ್ಮನ್ನು ಮೋಸಗೊಳಿಸುವರು ಇಲ್ಲವೆ ಯಾವದೊಂದು ಅಪರಿಹಾರ್ಯ ಕಾರಣಗಳಿಗಾಗಿ ನೋಕರಿ ಬಿಡುವರು. ಸ್ಥಾವರ ಉತ್ಪನ್ನವಿದ್ದರೆ ಅದು ವಸೂಲ ಆಗಬೇಕಾದರೆ ಬಹಳ ತೊಂದರೆಯೆನಿಸುವದು. ಹೊಸದಾಗಿ ಸ್ಥಾವರ ಜಂಗಮ ಸಂಗ್ರಹ ಸಹಸಾ ಸಂಭವಿಸುವದಿಲ್ಲ. ನೆರೆಯುವರೊಡನೆ ನೀವೇ ದೂರ ಉಳಿಯುವಿರಿ. ದೂರ ಪ್ರವಾಸ ಅನೇಕ ಸಲ, ಅದರ ಹೇತುವೂ ಸಾಧ್ಯವಾಗುವದು.

ನೋಕರರಿಗೆ ನವಂಬರ ೫ ರಿಂದ ಮೊದಲಿಗಿಂತ ಹೆಚ್ಚು ಸುಖದ ದಿನಗಳು. ಡಿಸೆಂಬರ ೧೯ರಿಂದ ಜನೆವರಿ ೨೮ ಮತ್ತು ಎಪ್ರಿಲ ೨೦ ರಿಂದ ಜೂನ ೩ ರೊಳಗಾಗಿ ಬದಲಿ ಆಗುವದು ಇಲ್ಲವೆ ಕೆಲಸ ಬೇರೆಯಾಗಿ ಮೇಲಿನ ಗ್ರೇಡ ಸಿಕ್ಕುವದು. ನವಂಬರ ೫ ರಿಂದ ಎಪ್ರಿಲ ೬ ರ ವರೆಗೆ ಮಾತ್ರ ಕೆಲಸದ ಹೊಣೆ ಬಹಳ. ವರಿಷ್ಠರ ಮರ್ಜಿ ಜೂನ ೩ ರಿಂದ ೨೦ ಜುಲೈ ಮತ್ತು ಅಕ್ಟೋಬರ ೨೨ ರ ನಂತರ ಹೆಚ್ಚು ಕಂಡುಬರುವದು. ಸ್ವತಂತ್ರ ಧಂದೆಯವರಿಗೆ ನವಂಬರ ೫ ರಿಂದ ಪ್ರಗತಿಯ ದಿವಸ ಬರುವ ಖಾತ್ರಿಯಿದ್ದರೂ ಎಪ್ರಿಲ ೬ ರ ನಂತರವೇ ನಿಜವಾಗಿ ದ್ರವ್ಯಲಾಭವಾಗಹತ್ತುವದು. ಜನೆವರಿ ೧೪ ರಿಂದ ಎಪ್ರಿಲ ೧೩, ಮೇ ೧೪ ರಿಂದ ಜೂನ ೧೪ ಮತ್ತು ಅಗಸ್ಟ ೧೬ ರಿಂದ ಅಕ್ಟೋಬರ ೧೭ ಈ ಅವಧಿಯಲ್ಲಿ ಧಂದೆಯಲ್ಲಿ ವಿಶೇಷ ಲೌಕಿಕ ಹೆಚ್ಚುವದು. ಕಲಾವಿಷಯಕ ಧಂದೆಯವರಿಗೆ ವಿಶೇಷ ಉತ್ಕರ್ಷ. ಅವರ ನಂತರ ಸೌಂದರ್ಯ ಪ್ರಸಾಧನ ವಸ್ತು, ಸುವಾಸಿಕ ಪದಾರ್ಥ ಮತ್ತು ಪ್ರೇಕ್ಷಣೀಯ ವಸ್ತುಗಳ ಧಂದೆಯವರಿಗೆ ಬಹಳ ಉತ್ಕರ್ಷವಾಗುವದು. ಬುದ್ಧಿಜೀವಿ ಧಂದೆಯವರಿಗೆ ಮಾತ್ರ ಕೇವಲ ಹೊಟ್ಟೆತುಂಬಿಕೊಳ್ಳುವ ಮಟ್ಟಿಗೆ ಮಾತ್ರ ಸಿಕ್ಕುವದು. ಸ್ವಪ್ರಾಂತದವರಿಗಿಂತ ಹೊರಗಿನ ಪ್ರಾಂತದಲ್ಲಿ ಇದ್ದವರಿಗೆ ಬಹಳ ಸುಖ ಸಮಾಧಾನ.

ಸರಕಾರಿ ಕೋರ್ಟುಗಳಲ್ಲಿ ದಾವೆ ನಡೆದಿದ್ದರೆ ಅವುಗಳಲ್ಲಿ ಯಾವದಾದರೊಂದರ ನಿರ್ಣಯವಾದರೂ ಹೊರಬೀಳುವದಿಲ್ಲ. ಒಂದು ವೇಳೆ ಆ ತೀರ್ಪು ಹೊರಬಿದ್ದರೆ ಎಪ್ರಿಲ ೬ರ ನಂತರ ನಿಮಗೆ ಯಶಸ್ಸು ಸಿಕ್ಕುವದು. ಅರ್ಥಾತ್ ಅದಕ್ಕಿಂತ ಮೊದಲು ತೀರ್ಪು ಆದರೆ ನಿಮ್ಮ ವಿರುದ್ಧವೇ ಆಗಬಹುದು. ಉಳಿದ ಸರಕಾರಿ ಕೆಲಸಗಳ ತೀರ್ಪು ಡಿಸೆಂಬರ ೫ ರಿಂದ ೩೧, ಜನೆವರಿ ೨೭ ರಿಂದ ಮಾರ್ಚ ೭, ಎಪ್ರಿಲ ೫ ರಿಂದ ಮೇ ೨೮, ಜೂನ ೨೯ ರಿಂದ ಜುಲೈ ೨೭ ಮತ್ತು ಸಪ್ಟಂಬರ ೧೭ ರಿಂದ ಅಕ್ಟೋಬರ ೧೩ ಈ ಅವಧಿಯಲ್ಲಿ ಹೊರಬಿದ್ದರೆ ರೂಪಾಯಿಯಲ್ಲಿ ಹನ್ನೆರಡಾಣೆ ಅನುಕೂಲವಾಗುವದು. ಖಾಸಗಿ ಸ್ಪರ್ಧೆಯಲ್ಲಿ ಈ ವರ್ಷ ಯಾವಾಗಲೂ ಸುಖ ಕಡಿಮೆ.

ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ನವಂಬರ ೫ ರೊಳಗೆ ಸುಲಭಸಾಧ್ಯ. ಹೆಣ್ಣು ಹುಟ್ಟುವದರಿಂದ ಅಸಮಾಧಾನ. ಅನಂತರ ೬ ಎಪ್ರಿಲ ವರೆಗೆ ಸ್ವಲ್ಪ ಕಷ್ಟದಿಂದ ಬಹುಶಃ ಎಲ್ಲರಿಗೂ ಗಂಡು ಹುಟ್ಟುವವು. ಅನಂತರ ಹಡೆದರೆ ಸ್ವಲ್ಪ ಕಷ್ಟವಾದರೂ ಕನ್ಯಾ ಹುಟ್ಟುವ ಮತ್ತು ಕ್ವಚಿತ ಅವಳಿ ಜವಳಿ ಹುಟ್ಟುವ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಎಪ್ರಿಲ ೬ ರವರೆಗೆ ಇದ್ದರೆ ಅವರು ಬಹಳ ಜೋರಿನಿಂದ ಅಭ್ಯಾಸ ಮಾಡಿದರೆ ಮಾತ್ರ ಜಡಗೈಯಿಂದ ಸರಸ್ವತಿಯು ಯಶಸ್ಸಿನ ತಿಲಕ ಹಚ್ಚುವಳು. ಅನಂತರ ಯಾರ ಪರೀಕ್ಷೆಯಾಗುವದಿದೆಯೊ ಅವರು ಅಭ್ಯಾಸದಲ್ಲಿ ಹಯಗಯಿ ಮಾಡಲೇಬಾರದು. ಆದರೂ ಯಶಸ್ಸಿನ ಬಗ್ಗೆ ಮಾತ್ರ ಪೂರ್ಣ ಖಾತ್ರಿ ಹಿಡಿಯಬೇಕು.

## ಮಿಥುನ

ಈ ರಾಶಿಯವರಿಗೆ ಈ ವರ್ಷ ಒಟ್ಟಾರೆ ಪ್ರಾಪಂಚಿಕ ಸುಖಕ್ಕಿಂತ ಔದ್ಯೋಗಿಕ ಯಶಸ್ಸಿಗೆ ಹೆಚ್ಚು ಅನುಕೂಲವಿದೆಯೆಂಬುದು ಮುಂದಿನ ವಿವರಣೆಯಿಂದ ಗೊತ್ತಾಗುವದು.

ಈ ರಾಶಿಯವರ ಆರೋಗ್ಯ ರೋಗದಿಂದ ಬಹಳಷ್ಟು ಕೆಡುವ ಯೋಗವಿಲ್ಲದ್ದರೂ ಅಪಘಾತ ಜಾರಣಮಾರಣಾದಿ ಅಭಿಚಾರ ಪ್ರಯೋಗ ಪಿಶಾಚ ಪೀಡೆ ಇಲ್ಲವೆ ಮನಸ್ಸಿಗೆ ಹತ್ತುವಂಥ ಯಾವದೊಂದು ದುರ್ವಾರ್ತೆಯ ಧಕ್ಕೆ ಕೊಡುವ ಇಂಥ ಅನಾಹುತ ಕಾರಣಗಳಿಂದ ಅದು ಬಹಳ ಮಟ್ಟಿಗೆ ಕೆಡುವ ಅಂಜಿಕೆ. ಎಪ್ರಿಲ ೬ ರ ನಂತರದ ಕಾಲದಲ್ಲಿ ಅದು ಹೆಚ್ಚು ಎನಿಸುವದು.

ಉಳಿದ ವಿಷಯಗಳಲ್ಲಿ ದೇಹಸುಖ ನವಂಬರ ೫ ರಿಂದ ಹೆಚ್ಚು ಚೆನ್ನಾಗಿ ಸಿಕ್ಕರೂ ಎಪ್ರಿಲ ೬ ರ ನಂತರ ವೈರಿಯ ದೃಷ್ಟಿ ತಾಗಿತೇನೋ ಎನ್ನುವಂತೆ ಮನೆಯಲ್ಲಿ ಒಮ್ಮೆಲೆ ಅನಾವರ ಗೃಹಕಲಹ ಎದ್ದು ಅದರ ಜ್ವಾಲೆ ದೂರ ಗ್ರಾಮಗಳಿಗೆ ಮುಟ್ಟುವಷ್ಟು ಹಬ್ಬುವದು. ಮಕ್ಕಳುಮರಿ ಯೋಗ್ಯರೀತಿಯಿಂದ ನಡೆದುಕೊಳ್ಳುವರು. ಆದರೆ ಹೆಂಡತಿಯ ಮೈಯಲ್ಲಿ ಕಲಿಸಂಚಾರವಾಗಿ ಅವಳು ಮಂಥರೆಯ ರೂಪ ಧಾರಣ ಮಾಡುವಳು. ಎಪ್ರಿಲ ೬ ರ ನಂತರ ಅವಳ ಆರೋಗ್ಯವೂ ಕೆಡುವದು. ಒಟ್ಟಾರೆ ಸ್ತ್ರೀಸುಖಕ್ಕೆ ಈವರ್ಷ ಅಷ್ಟು ನೆಟ್ಟಗಿಲ್ಲ.

ಸ್ವತಃ ನಿಮ್ಮ ವಿವಾಹವಾಗುವದಿದ್ದರೆ ನವಂಬರ ೫ ರಿಂದ ಎಪ್ರಿಲ ೬ ರ ವರೆಗೆ ಬಾಸಿಂಗಬಲ ಬಹಳ. ಅನಂತರ ಬಹುಶಃ ಒದಗಿಬಂದರೂ ಅದು ಆಗಿಯೆ ತೀರುವದೆಂದು ಹೇಳಲಿಕ್ಕೆ ಬರುವದಿಲ್ಲ. ಆ ಪಕ್ಷ ಈ ಪಕ್ಷದವರಲ್ಲಿ ಏನಾದರೂ ಅಡಚಣೆ ಬಂದು ಅದು ಮುರಿಯುವದು ಇಲ್ಲವೆ ಬಹಳ ಮುಂದಕ್ಕೆ ಬೀಳುವದು. ಅದರಂತೆ ಎಪ್ರಿಲವರೆಗೆ ಆದರೆ ವಧು ಮನಸ್ಸಿಗೆ ಒಗ್ಗುವಂಥವಳು ಸಿಕ್ಕುವಳು. ಮುಂದೆಯಾದರೆ ಅಷ್ಟು ಮನಸ್ಸಿಗೆ ಬರುವದಿಲ್ಲ. ಬಂಧುವರ್ಗದವರು ಒಳ್ಳೆ ರೀತಿಯಿಂದ ವರ್ತಿಸುವರು ಮತ್ತು ಉಳಿದ ಆಪ್ತರು ನವಂಬರದಿಂದ ಮೊದಲಿಗಿಂತ ಹೆಚ್ಚು ಮಮತೆ ತೋರುವರು. ಪರಸ್ತ್ರೀಯ ಅಭಿಲಾಷೆಯ ಲೋಕಾಪವಾದದ ಅಲ್ಪ ಸ್ವಲ್ಪ ಕಟು ಯೋಗವಿದೆ. ಸ್ಥಾವರ ಜಂಗಮ ಸಂಗ್ರಹ ಸ್ವಲ್ಪಾದರೂ ಹೆಚ್ಚುವದು. ಗೊತ್ತಾದಷ್ಟು ಸ್ಥಾಯಿಕ ಉತ್ಪನ್ನ ಏನೂ ಜೊಬ್ಬಾಟವಿಲ್ಲದೆ ಸಿಕ್ಕುವದು. ಆಪ್ತರಲ್ಲಿ ಯಾರೊಬ್ಬ ಪ್ರೀತಿಯ ಹಿರಿಯರೊಬ್ಬನ ಮರಣವಾಗುವ ಸಂಭವವಿದೆ. ಮನೆಯಲ್ಲಿಯ ನೋಕರಚಾಕರರು ನಂಬಿಕೆಯಿಂದಾದರೂ ಕೆಲಸ ತಪ್ಪಿಸಿ ನಡೆಯುವರು. ಬಹಳ ಬೆಲೆಯ ಇಲ್ಲವೆ ನಿತ್ಯೋಪಯೋಗಿ ವಸ್ತುವು ಕಳವಾಗಿ ಹೋಗುವ ಅಂಜಿಕೆ. ಜನೆವರಿ ೧೪ ರಿಂದ ಫೆಬ್ರುವರಿ೧೨, ಜುಲೈ ೨೦ ರಿಂದ ಸಪ್ಟಂಬರ ೫ ಈ ಅವಧಿಯಲ್ಲಿ ಇದು ವಿಶೇಷವಿದೆ. ಹಳೆಯ ವಾಹನಗಳನ್ನು ಮಾರಿ ಹೊಸವನ್ನು ಕೊಳ್ಳುವಿರಿ. ಆದರೆ ಅವು ಮೊದಲಿನಷ್ಟು ಸುಖದಾಯಕವಾಗುವದಿಲ್ಲ. ತಂದೆತಾಯಿಯಿದ್ದರೆ ಅವರಿಗೆ ಈ ವರ್ಷ ಆರೋಗ್ಯ ಅಷ್ಟೊಂದು ಅನುಕೂಲವಿಲ್ಲ.

ಉದ್ಯೋಗ ಧಂದೆಗೆ ಈ ವರ್ಷ ನವಂಬರ ೫ ರಿಂದ ಒಳ್ಳೆ ಪ್ರಗತಿಯ ಕಾಲವಿದೆ. ಆದರೂ ಎಪ್ರಿಲ ೬ ರಿಂದ ಬಹಳ ಮಹತ್ವದ ಘಟನೆಗಳು ನಡೆದರೂ ಲಾಭ ಬಹಳ ಕಡಿಮೆ. ಎಪ್ರಿಲ ೨೦ರಿಂದ ಜೂನ ೩ ರೊಳಗಾಗಿ ಬಹಳ ಹೊಡೆತ ಕೂಡುವ ಸಂಭವವೂ ಇದೆಯೊ ಯಾರಿಗೆ ಗೊತ್ತು ? ಆದರೆ ಪತ್ತು ಮತ್ತು ಪ್ರತಿಷ್ಠೆ ಮಾತ್ರ ಯಾವಾಗಲೂ ಅಬಾಧಿತ. ಬಗೆಬಗೆಯ ಯಂತ್ರ, ಕಾಗದ, ವರ್ತಮಾನಪತ್ರ ಇಲ್ಲವೆ ಮಾಸಿಕಪತ್ರ ನಡೆಸುವವರು, ಆಡತಿ ಅಂಗಡಿಯವರು ಇಂಥ ಧಂದೆಯವರಿಗೆ ಈ ವರ್ಷ ಬಹಳ ಪ್ರಗತಿಯದು ಮತ್ತು ಪ್ರಸಿದ್ಧಿಯದು ಇದೆ. ನೋಕರರಿಗೆ ನವಂಬರ ೫ ರಿಂದ ಎಪ್ರಿಲ ೬ ರ ವರೆಗೆ ಲಾಭ ಮತ್ತು ಕಲ್ಪನೆ ಮೀರಿ ಭಾಗ್ಯ ಲಭಿಸುವದು. ಜನೆವರಿ ೨೪ ರಿಂದ ಮಾರ್ಚ ೧೦ ರ ವರೆಗೆ ಮಾನಮರ್ಯಾದೆ, ಹಕ್ಕಿನಿಂದ ಮೇಲಿನ ಗ್ರೇಡು ಸಿಕ್ಕುವದು. ಇಷ್ಟಸ್ಥಳಕ್ಕೆ ನೀವು ಕೇಳಿದರೆ ಬದಲಿ ಕೂಡ ಆಗುವದು. ನೋಕರಿಯಲ್ಲಿ ಗುಪ್ತ ಲಾಭವಾಗುವದಿದ್ದರೆ ಅದು ಮನಸ್ಸಿನಂತೆ ಆಗುವ ಸಂಭವ ಬಹಳಷ್ಟು ಇದೆ. ಆದರೆ ಎಪ್ರಿಲ ೬ ರಿಂದ ಮುಂದಿನ ಅವಧಿಯಲ್ಲಿ ವರಿಷ್ಠರ ಅವಕೃಪೆಯಾಗಿ ಸ್ವಲ್ಪ ಕಡಿಮೆಯೆನಿಸುವಂಥ ಸ್ಥಳಕ್ಕೆ ನೇಮಕವಾಗುವ ಅಂಜಿಕೆ ಇದೆ. ರೊಕ್ಕ ಹೆಚ್ಚೆಚ್ಚು ಸಿಕ್ಕುತ್ತ ನಡೆದಂತೆ ವೆಚ್ಚವೂ ಹೆಚ್ಚುತ್ತ ಹೋಗುವದು. ಕೆಲ ಸಮಯ ಶತ್ರುಗಳಿಗಿಂತ ಮಿತ್ರರೇ ನಿಮ್ಮನ್ನು ತಗ್ಗಿನಲ್ಲಿ ಕೆಡಹುವ ಪ್ರಯತ್ನ ಮಾಡುವರು. ಆಪ್ತ ಮಿತ್ರರೊಬ್ಬರ ವಿಯೋಗವಾಗುವ ಸಂಭವವೂ ಇದೆ. ಕೇವಲ ಬುದ್ಧಿಜೀವಿ ಧಂದೆ ಮಾಡುವವರಿಗೆ ಮಾತ್ರ ಈ ವರ್ಷ ನಾಲ್ಕು ದುಡ್ಡು ಹೆಚ್ಚು ಸಿಕ್ಕುವದು.

ವಾದವಿವಾದಗಳಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ನವಂಬರ ೫ ರಿಂದ ಎಪ್ರಿಲ ೬ ರ ವರೆಗಿನ ಕಾಲದಲ್ಲಿ ಪ್ರತಿಪಕ್ಷಿಗಳನ್ನು ಪಾದಾಕ್ರಾಂತ ಮಾಡಿ ಅಪೇಕ್ಷೆಯಂತೆ ವಿಜಯ ದೊರಕಿಸುವ ಅವಕಾಶ ಸಿಕ್ಕುವದು. ಆದರೆ ಅನಂತರ ಅವರೇ ನಿಮಗೆ ನೀರು ಕುಡಿಸುವ ಅಂಜಿಕೆ ಇದೆ.

ಈ ರಾಶಿಯ ಹೆಂಗಸರು ಗರ್ಭಿಣಿಯರಿದ್ದರೆ ನವಂಬರ ೫ ರವರೆಗೆ ಹಡೆದಲ್ಲಿ ಸ್ವಲ್ಪೂ ಕಷ್ಟವಾಗುವದಿಲ್ಲ. ಪುತ್ರರತ್ನವನ್ನು ಹಡೆಯುವರು ಮತ್ತು ಅನಂತರ ಹಡೆಯುವವರ ಕಷ್ಟ ಕಡಿಮೆಯಾದರೂ ಕನ್ಯಾ ಹುಟ್ಟುವದು. ಆದರೆ ಪುತ್ರಗರ್ಭವಿದ್ದಲ್ಲಿ ಮಾತ್ರ ಬಹಳ ಕಷ್ಟವಾಗುವದು. ಮುಂದೆ ಬಾಳಂತಿತನವಾದ ಬಳಿಕವೂ ನಾಲ್ಕಾರು ತಿಂಗಳ ಬಹಳ ಶಾರೀರಕ ಕ್ಲೇಶವನ್ನು ಅನುಭವಿಸಬೇಕಾಗುವದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಎಪ್ರಿಲ ೬ರೊಳಗಾಗಿ ಪರೀಕ್ಷೆಯಿದ್ದರೆ ಯಶಸ್ಸು ಸಿಕ್ಕುವ ಖಾತ್ರಿಯಿದೆ. ಆದರೆ ಮುಂದೆ ಮಾತ್ರ ಅಷ್ಟೊಂದು ಬಲವತ್ತರ ಯೋಗವಿರುವದಿಲ್ಲ.

## ಕರ್ಕ

ಈ ರಾಶಿಯವರಿಗೆ ವಿಚಾರಮಾಡಿ ನೋಡಿದರೆ ಅಲ್ಪಸ್ವಲ್ಪ ಪ್ರಾಪಂಚಿಕ ತೊಂದರೆ ಮತ್ತು ಶಾರೀರಕ ಕ್ಲೇಶವಾಗುವದಿದ್ದರೂ ಔದ್ಯೋಗಿಕ ಯಶಸ್ಸಿನಿಂದ ಅವರು ನಗೆಮೊಗವನ್ನೇ ಮಾಡಿಕೊಂಡು ಆಡ್ಡಾಡುವರು.

ಈ ರಾಶಿಯವರ ಆರೋಗ್ಯ ನವಂಬರದಿಂದ ಮುಂದೆ ಅಷ್ಟೊಂದು ಅನುಕೂಲ ಉಳಿಯುವದಿಲ್ಲ. ಎದೆಯಲ್ಲಿ ನೋವು, ಆಮ್ಲಪಿತ್ತ, ವಾಂತಿ ಮತ್ತು ನಿದ್ರಾನಾಶ ಇವುಗಳಿಂದ ಆರೋಗ್ಯ ಕೆಡುವದು. ನಿಮ್ಮ ಮೇಲೆ ಯಾರಾದರೂ ದುಷ್ಟ ಉದ್ದೇಶದಿಂದ ಏನಾದರೂ ಮಂತ್ರತಂತ್ರಗಳ ಪ್ರಯೋಗ ಮಾಡಿದಂತೆ ಮೇಲಿಂದ ಮೇಲೆ ಭಾಸವಾಗುವದು. ಡಿಸೆಂಬರ ೧೯ ರಿಂದ ಜನೆವರಿ ೨೪, ಮಾರ್ಚ ೧೦ ರಿಂದ ಎಪ್ರಿಲ ೨೦, ಜುಲೈ ೨೦ರಿಂದ ಸಪ್ಟಂಬರ ೫, ಈ ಅವಧಿಯಲ್ಲಿ ಪ್ರಕೃತಿಯನ್ನು ಹೆಚ್ಚು ಜಪ್ಪಿಸಿಕೊಂಡು ಇರಬೇಕು. ಮಾನಸಿಕ ಉತ್ಸಾಹ ಮತ್ತು ಔದಾಸೀನ್ಯ ಇವುಗಳ ರಖರಖಿಯಲ್ಲಿ ಆತ್ಮವಿಶ್ವಾಸವಿಲ್ಲದಂತಾಗುವದು. ಕುಟುಂಬದಲ್ಲಿಯ ಎಲ್ಲ ಜನರು ಒಳ್ಳೆ ರೀತಿಯಿಂದ ಇದ್ದು ಗಟ್ಟಿಮುಟ್ಟು ಇದ್ದರೂ ನಿಮ್ಮನ್ನು ಯಾವದಾದರೂ ಪೇಚಿನಲ್ಲಿ ಕೆಡಹುವದರಲ್ಲಿ ಇರುವರು; ನಿಮ್ಮನ್ನು ಎಲ್ಲರೂ ಉದಾಸೀನತೆಯಿಂದ ನೋಡುವರೆಂದು ಸುಳ್ಳು ಸುಳ್ಳು ಭ್ರಮಿಸುವಿರಿ ಮತ್ತು ಆ ಭಾವದಿಂದ ನೀವು ಎಲ್ಲರೊಡನೆ ಅದೇ ರೀತಿಯಿಂದ ನಡೆದುಕೊಂಡು ಅವರ ಮನಸ್ಸನ್ನು ನೋಯಿಸುವಿರಿ. ಹೆಂಡತಿಯ ಪ್ರಕೃತಿ ಕೂಡ ಎಪ್ರಿಲ ೬ರವರೆಗೆ ಅನುಕೂಲವಿರುವದಿಲ್ಲ, ಗರ್ಭಿಣಿ ಇದ್ದರೆ ಆರೋಗ್ಯ ಮತ್ತಷ್ಟು ಕೆಡುವದು. ನಿಮ್ಮವಳಲ್ಲಿಯ ಪ್ರೇಮ ಮೊದಲಿನಷ್ಟು ಉಳಿಯುವದಿಲ್ಲ ಆದರೆ ನಿಮ್ಮ

ಗಿಂತ ಅವಳ ವರ್ತನೆಯು ವಸ್ತುಸ್ಥಿತಿಗೆ ಹೆಚ್ಚು ಅನುಕೂಲವಾಗಿ ಉಳಿಯುವದು. ನಿಮ್ಮ ವಿವಾಹ ವಾಗುವದಿದ್ದರೆ ಮತ್ತು ಇದೇ ವರ್ಷ ಮಾಡ ಬೇಕೆಂದಿದ್ದರೆ ಎಪ್ರಿಲ ೬ ರ ನಂತರ ಬಾಸಿಂಗಬಲ ಹೆಚ್ಚಿಗೆ ಇದೆ. ಅನುರೂಪ ವಧು ದೊರೆಯು ವಳು. ಅವಳ ಮಾತು ಸವಿಯಾಗಿದ್ದರೂ ಅವಳು ಕರ್ಕಶ ಇರುವಳೆಂಬ ತಪ್ಪು ತಿಳಿವಳಿಕೆ ನಿಮ್ಮಲ್ಲಿ ಬಹಳ ದಿನ ಉಳಿಯುವದು. ವಿವಾಹವು ಅಷ್ಟೊಂದು ಬೊಬ್ಬಾಟವಿಲ್ಲದೆ ನಡೆದು ಹೋಗು ವದು. ಗೊತ್ತುಪಡಿಸಿದ ಸಮಯಕ್ಕೇ ಆಗು ವದು. ಉಳಿದ ಆಪ್ತರಿಂದಲೂ ನವಂಬರ ೫ ರಿಂದ ಎಪ್ರಿಲ ೬ ರ ವರೆಗೆ ಬಹಳ ಉತ್ತಮ ಸುಖ ಸಿಕ್ಕುವದು. ನಿಮ್ಮ ನೇತೃತ್ವದಲ್ಲಿಯೇ ಅವರು ಧಾರ್ಮಿಕ ಇಲ್ಲವೆ ಅನ್ಯ ಮಂಗಳ ಕಾರ್ಯಗಳನ್ನು ಮಾಡುವರು. ಮಕ್ಕಳು ಮರಿಗಳ ಉನ್ನತಿಗೆ ಈ ವರ್ಷ ಮೊದಲಿನಿಂದಲೂ ಉತ್ತಮವಿದೆ. ಆದರೆ ನವಂಬರ ೮ ರಿಂದ ಡಿಸೆಂಬರ ೧೯, ಜನೆವರಿ ೨೮ ರಿಂದ ಮಾರ್ಚ ೧೦, ಎಪ್ರಿಲ ೨೦ ರಿಂದ ಜೂನ ೩ ಮತ್ತು ಅಕ್ಟೋಬರ ೨೨ ರಿಂದ ಮುಂದಿನ ಅವಧಿಯಲ್ಲೂ ಹೆಚ್ಚು ಉತ್ತಮ. ಇದರಲ್ಲಿ ಯಾರ ಮದುವೆಯಾಗಬೇಕಾಗಿದೆಯೋ ಅವರಿಗೆ ಎಪ್ರಿಲ ೬ ರ ನಂತರ ಅನುಕೂಲ ಗ್ರಹಯೋಗವಿದೆ ಮತ್ತು ಸುಖವೂ ದೊರೆಯುವದು. ಸೊಸೆ ಇಲ್ಲವೆ ಅಳಿಯಂದಿರಲ್ಲಿ ಯಾರಾದರೊಬ್ಬರು ಮಾರ್ಚ ೧೦ ರಿಂದ ೨೦ ಎಪ್ರಿಲದೊಳಗಾಗಿ ಅಪಘಾತದಿಂದ ಬಹಳ ಕಷ್ಟಕ್ಕೆ ಗುರಿಯಾಗುವರು. ಅಲ್ಪಸ್ವಲ್ಪಾದರೂ ಸ್ಥಾವರ ಜಂಗಮ ಸಂಗ್ರಹ ಈ ವರ್ಷ ಹೆಚ್ಚಿಸಿಕೊಳ್ಳದೆ ಇರಲಾರಿರಿ. ಜನ್ಮಕುಂಡಲಿ ಯಲ್ಲಿ ದತ್ತಕ ಹೋಗುವ ಇಲ್ಲವೆ ವಾರಸಾ ದೊರಕಿಸುವ ಯೋಗವಿದ್ದರೆ ಹಾಗೆ ಒದಗಿಬರಲು ಈ ವರ್ಷ ಬಹಳ ಅನುಕೂಲವಿದೆ. ನೋಕರ ಚಾಕರರು ಅನುಕೂಲ ರೀತಿಯಿಂದ ನಡೆದು ಕೊಳ್ಳುವರು. ವಾಹನಗಳು ನೆಟ್ಟಗಿದ್ದರೆ ಯೋಗ್ಯ ರೀತಿಯಿಂದ ನಡೆದೇ ನಡೆಯುವವು. ನೆರೆಹೊರೆ ಯುವರೆಲ್ಲ ಮನೆಯುವರಂತೆ ನಡೆದುಕೊಳ್ಳುವರು.

ಧಂದೆ ಕೂಲಿಕಾರರ ದೃಷ್ಟಿಯಿಂದ ನೋಡುವದಾದರೆ ನೋಕರರಿಗೆ ಎಪ್ರಿಲ ೬ ರ ವರೆಗೆ ಬಹಳ ಸುಖಕರವಿದೆ. ಕನಿಷ್ಠರಿಗಿಂತ ವರಿಷ್ಠರಿಗೆ ಆ ಸುಖ ಬಹಳ ಮತ್ತು ಉತ್ತಮ ದೊರೆಯುವದು. ಮಾರ್ಚ ೧೦ ರಿಂದ ಎಪ್ರಿಲ ೨೦ ರ ವರೆಗೆ ಅಥವಾ ಸಪ್ಟಂಬರ ೫ ರಿಂದ ಅಕ್ಟೋಬರ ೨೨ ರ ವರೆಗಿನ ಅವಧಿಯಲ್ಲಿ ಅನೇಕರಿಗೆ ಮೇಲಿನ ಗ್ರೇಡು ಸಿಕ್ಕುವದು. ಸಾಮಾಜಿಕ ಕಾರ್ಯಕರ್ತರಿಗೆ ಹೋದ ಹೋದಲ್ಲೆಲ್ಲ ಬಹಳ ಗೌರವ. ರಾಜಾಧಿಕಾರಿಗಳಿಗಂತೂ ಅಲ್ಲಲ್ಲಿ ವಿಶೇಷ ಅಭೂತಪೂರ್ವ ಉಧೊ ಉಧೋ. ಬದಲಿಯಾಗುವದು ಬೇಡಾಗಿದ್ದರೆ ಆಗುವದಿಲ್ಲ. ನಿಮಗೆ ವರ್ಗವಾಗುವದು ಬೇಕಾಗಿದ್ದರೆ ಇಷ್ಟ ಸ್ಥಳಕ್ಕೆ ಆಗುವದು. ದ್ರವ್ಯ ಲಾಭ ಸುರಳಿತವಾಗಿ ಆಗುವದು. ಧಂದೆ ಯವರಿಗೆ ಕೂಡ ಈ ವರ್ಷ ಅಪೇಕ್ಷೆಗಿಂತ ಹೆಚ್ಚು ಅನುಕೂಲ. ಎಪ್ರಿಲ ೬ ರ ನಂತರವಂತೂ ಹಿಡಿದ ಮಣ್ಣು ಕೂಡ ಹೊನ್ನಾಗುವಷ್ಟು ಯಶಸ್ಸು ಸಿಕ್ಕುವದು. ಪ್ರತಿಯೊಂದು ವಿಷಯಲ್ಲಿ ಅನಾಯಾಸವಾಗಿ ಯಶಸ್ಸು ಸಿಕ್ಕುವ ಯೋಗವಿದೆ. ಜನೆವರಿ ೨೬ ರಿಂದ ಮಾರ್ಚ ೬, ಎಪ್ರಿಲ ೫ ರಿಂದ ಮೇ ೨೮, ಜೂನ ೨೯ ರಿಂದ ಜುಲೈ ೨೬ ಮತ್ತು ಅಗಸ್ಟ ೨೩ ರಿಂದ ಸಪ್ಟಂಬರ ೧೬ ರ ಅವಧಿಯಲ್ಲಿ ಸರಳ ವ್ಯವಹಾರದಲ್ಲಿ ತುಂಬ ಲಾಭ. ಭುಸಾರಿ ಮಾಲು ಅರಳೆ ಮತ್ತು ರೇಶಿಮೆ ಮತ್ತು ನೂಲಿನ ಹೆಂಗಸರ ವಸ್ತ್ರ ನೇಯುವವರಿಗೆ, ಹೊಲಿಯುವವರು ಚಿತ್ರಗಾರರು, ಬಣಗಾರರು, ತಾಮ್ರ ಹಿತ್ತಾಳಿ ಧಂದೆಯವರು, ಪರದೇಶೀ ಮಾಲಿನ ವ್ಯಾಪಾರಿಗಳು ಈ ಧಂದೆ ಮಾಡುವವರಿಗೆ ಈ ವರ್ಷ ಬಹಳ ರೊಕ್ಕ ಸಿಕ್ಕುವದು. ಅದರಂತೆ ಗಾಯಕರು, ವಾದಕರು, ನಟನಟಿಯರು ಸರ್ಕಸ್ಸಿನಲ್ಲಿ ಕೆಲಸ ಮಾಡುವವರು ಇಂಥ ಕಲಾಕಾರರಿಗೂ ಈ ವರ್ಷ ಉತ್ತಮವಿದೆ. ಅದರಂತೆ ಡಾಕ್ಟರರು, ವೈದ್ಯರು ಹೊಸ ಹೊಸ ಔಷಧಗಳ ಸಂಶೋಧಕರು ಮತ್ತು ನಾವಿಕಪ್ರಮುಖರು ಮೊದಲಾದವರಿಗೆ ಉತ್ತಮವಿರುವದು. ಅತಿ ದೂರದ ಪ್ರವಾಸ ಸಂಭವಿಸುವದು. ಒತ್ತಟ್ಟಿಗೆ ಕೂಡ್ರುವವರಿಗೂ ನೂರಿನ್ನೂರು ಮೈಲುಗಳು ಪ್ರವಾಸವಾಗುವದು. ಮಿತ್ರಸುಖ ಎಪ್ರಿಲ ೬ ರ ನಂತರ ಹೆಚ್ಚು ಸಿಕ್ಕುವದು.

ಈ ರಾಶಿಯ ಸ್ತ್ರೀಯರು ಗರ್ಭವತಿಯರಿದ್ದರೆ ಮತ್ತು ಅವರಲ್ಲಿ ಎಪ್ರಿಲ ೬ರೊಳಗೆ ಯಾರಾದರೂ ಹಡೆದರೆ ಅವರಿಗೆ ಹೆರಿಗೆಯು ಕಷ್ಟ ಬಹಳ ಎನಿಸುವದು ನಿಜ, ಆದರೆ ಗಂಡು ಕೂಸು ಹುಟ್ಟುವದರಿಂದ ಆ ಕಷ್ಟ ಬಹಳಷ್ಟು ಎನಿಸಲಾರದು ಮತ್ತು ಎಪ್ರಿಲ ೬ರ ನಂತರ ಯಾರಾದರೂ ಹಡೆಯುವವರು ಇದ್ದರೆ ಅವರು ಅತ್ಯಂತ ಸುಲಭ ರೀತಿಯಿಂದ ಹಡೆಯುವರು ಆದರೆ ಹೆಣ್ಣು ಹುಟ್ಟುವದರಿಂದ ಮನಸ್ಸು ಅಸಂತುಷ್ಟ.

ವಿದ್ಯಾರ್ಥಿಗಳಲ್ಲಿ ಯಾರ ಪರೀಕ್ಷೆ ಎಪ್ರಿಲ ೬ ರೊಳಗೆ ಆಗುವದಿದೆಯೊ ಅವರು ಬಹಳ ಅಭ್ಯಾಸ ಮಾಡಿದರೆ ಮಾತ್ರ ಪಾಸಾಗುವ ಯೋಗವಿದೆ. ಅನಂತರ ಯಾರ ಪರೀಕ್ಷೆ ಆಗುವದಿದೆಯೊ ಅವರು ಅಲ್ಪಾಯಾಸದಿಂದ ಯಶಸ್ವಿಗಳಾಗುವರು.

## ಸಿಂಹ

ಈ ರಾಶಿಯವರಿಗೆ ಈ ವರ್ಷ ಶಾರೀರಿಕ ಮತ್ತು ಆರ್ಥಿಕ ಉನ್ನತಿಯಾಗಿ ಅನೇಕ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಿಕ್ಕುವದರಿಂದ ಅವರು ತಮ್ಮ ಕರ್ತವ್ಯಗಳಲ್ಲಿ ಜಾಗ್ರತರಾಗಿರತಕ್ಕದ್ದೆಂದು ಅಪೇಕ್ಷಿಸಲಾಗುತ್ತದೆ.

ಈ ರಾಶಿಯುವರ ಆರೋಗ್ಯ ನವಂಬರದಿಂದ ಬಹಳ ಅನುಕೂಲವುಳಿಯುವದು. ಆದರೆ ಜನೆವರಿ ೧೪ ರಿಂದ ಫೆಬ್ರುವರಿ ೧೨ ರ ವರೆಗಿನ ಅವಧಿಯಲ್ಲಿ ಎತ್ತರ ಪ್ರದೇಶದಿಂದ ಕೆಳಗೆ ಬೀಳುವದರಿಂದ ಇಲ್ಲವೆ ಯಾರಾದರೂ ಒಗೆದ ಕಲ್ಲು, ಚಂಡಿನಂಥ ಜಡಪದಾರ್ಥ ತಾಕಿ ಗಾಯವಾಗುವದರಿಂದ ಸ್ವಲ್ಪ ತೊಂದರೆಯಾಗುವ ಅಂಜಿಕೆಯಿದೆ. ಜನೆವರಿ ೨೮ ರಿಂದ ಮಾರ್ಚ ೧೦ ರ ವರೆಗೆ ಯಾವದೊಂದು ಖಾಸಗಿ ಮಾತಿಗಾಗಿ ಬಹಳ ಮಾನಸಿಕ ತೊಂದರೆಯಾಗುವ ಯೋಗವಿದ್ದರೂ ಉಳಿದ ದಿನಗಳಲ್ಲಿ ಒಳ್ಳೆ ಮನೋತ್ಸಾಹ ದೊರಕುವದು. ಸ್ಥೂಲ ಮಾನದಿಂದ, ಕಳೆದ ೭॥ ವರ್ಷಗಳಿಂದ ಬೆನ್ನು ಹತ್ತಿದ ಸಾಡೇಸಾತಿ ನವಂಬರದಲ್ಲಿ ಒಮ್ಮೆ

ಮುಗಿದು ಹೋಗುವದರಿಂದ, ಅಂದಿನಿಂದ ಶನಿ ಮಹಾರಾಜನು ತನಗೆ ಸಂತುಷ್ಟಿಕಾರಕವಾದ ೩ನೇ ಸ್ಥಾನದಲ್ಲಿ ಮತ್ತು ತನ್ನ ಉಚ್ಚ ತುಲಾ ರಾಶಿಯಲ್ಲಿ ಬರುವದರಿಂದ ಡಿಸೆಂಬರದಿಂದ ಎಲ್ಲ ಸಂಗತಿಗಳು ಒಂದರಿಂದೊಂದರಂತೆ ಫಲಿಸುತ್ತ ಹೋಗುವವು ಮತ್ತು ಸಾಡೇಸಾತಿಯಲ್ಲಿ ಅನುಭೋಗಿಸಿದ ದುಃಖದ ಸಂಗತಿಗಳು ಮರೆತು ಹೋಗಹತ್ತುವವು. ಆದರೆ ಈ ಮೂರನೇ ಶನಿ ನಿಮ್ಮ ಬಂಧುಗಳ ಹೆಂಡಂದಿರಿಗೆ, ಅಕ್ಕತಂಗಿಯರ ಗಂಡಂದಿರಿಗೆ ಮತ್ತು ನಿಮ್ಮ ಹೆಂಡತಿಯ ಬಂಧುಗಳಿಗೆ ಸುಖಕರ ವಿರುವದಿಲ್ಲ. ನಿಮಗೆ ಮಾತ್ರ ಅಪೇಕ್ಷಿತ ವಿಷಯಗಳಲ್ಲಿ ಮಾರ್ಚ ೧೦ ರಿಂದ ಜುಲೈ ೨೦ ರ ವರೆಗೆ ಮತ್ತು ಸಪ್ಟಂಬರ ೫ರಿಂದ ಅಕ್ಟೋಬರ ೨೨ ವರೆಗೆ ಒಳ್ಳೆ ಸುಖ ಮತ್ತು ಯಶಸ್ಸು ಸಿಕ್ಕುವದು. ನಿಮ್ಮ ತೂಕ ಸ್ವಲ್ಪಾದರೂ ಏರದೆ ಇರಲಾರದು. ಅದೇ ರೀತಿಯಾಗಿ ಜನರಲ್ಲಿ ನಿಮ್ಮ ವರ್ಚಸ್ಸು ಅಂದರೆ ಲೌಕಿಕ ವರ್ಚಸ್ಸು ಮೊದಲಿಗಿಂತ ಹೆಚ್ಚುವದು. ಎಪ್ರಿಲ ೬ ರಿಂದ ಇದು ಹೆಚ್ಚು ಅನುಕೂಲವಾಗುತ್ತ ನಡೆಯುವದು.

ಈ ವರ್ಷ ಹೆಂಡತಿಯ ಆರೋಗ್ಯವೂ ಡಿಸೆಂಬರದಿಂದ ಬಹಳ ಆರೋಗ್ಯಯುಕ್ತವಾಗುವದು. ಮಾರ್ಚ ೧೦ ರಿಂದ ಎಪ್ರಿಲ ೨೦ ರ ವರೆಗೆ ಅವಳಿಗೆ ತವರುಮನೆಯ ಕೆಲಮಟ್ಟಿಗೆ ದುಃಖ ಇಲ್ಲವೆ ಉದ್ವೇಗದಿಂದ ಮಾನಸಿಕ ತೊಂದರೆ ಬಹಳ ಮಟ್ಟಿಗೆ ಆಗುವ ಸಂಭವವಿದೆ. ಎಲ್ಲ ಸಣ್ಣ ದೊಡ್ಡ ವಿಷಯಗಳಲ್ಲಿ ನಿಮ್ಮಿಬ್ಬರದು ಒಳ್ಳೆ ಐಕಮತ್ಯವಾಗುವದು ಪರಸ್ಪರ ಪ್ರೇಮವೂ ವೃದ್ಧಿಂಗತವಾಗುವದು. ನಿಮ್ಮ ವಿವಾಹವಾಗುವದಿದ್ದರೆ ಪ್ರಾರಂಭದಿಂದಲೆ ಕನ್ಯಾಪಕ್ಷದವರು ಒಂದೇ ಸವನೆ ಬೆನ್ನುಹತ್ತುವರು. ಆದರೆ ಅದು ಒದಗಿಬರುವ ಯೋಗ ಮಾತ್ರ ಎಪ್ರಿಲದಿಂದ ಪ್ರಬಲವಿದೆ. ವಧೂವರರು ಪರಸ್ಪರ ಒಳ್ಳೆ ಅನುರೂಪ ದೊರೆಯುವರು ಮತ್ತು ಲಗ್ನ ಸಮಾರಂಭ ಒಳ್ಳೆ ಸಂಭ್ರಮದಿಂದ ಜರುಗುವದು. ಮಕ್ಕಳ ಸುಖವೂ ಈ ವರ್ಷ ಬಹಳ ಅನುಕೂಲವಿದೆ. ಮಕ್ಕಳು ನೀವು ಹೇಳಿದಂತೆಯೇ ನಡೆದುಕೊಳ್ಳುವರು ಮತ್ತು ಅವರಲ್ಲಿ ಬಹುಶಃ ಎಲ್ಲರ ಉನ್ನತಿ ಅವರವರ ವಯೋಮಾನ ಯೋಗ್ಯತೆಗನುಗುಣವಾಗಿ ಎಪ್ರಿಲದೊಳಗಾಗಿಯೇ ಅನುಭವಕ್ಕೆ ಬರುವದು. ಆದರೆ ಎಪ್ರಿಲನಂತರ ಮಾತ್ರ ಅವರಲ್ಲಿ ಒಬ್ಬಿಬ್ಬರು ಸ್ಥಳಾಂತರ ಹೋಗುವದರಿಂದ ಕೆಲದಿನ ಮನಸ್ಸಿಗೆ ಬಹಳ ವ್ಯಥೆಯೆನಿಸುವದು. ಅವರಲ್ಲಿ ಯಾರದು ವಿವಾಹ ಮಾಡುವದಿದೆಯೋ ಅದು ಎಪ್ರಿಲದೊಳಗಾಗಿಯೆ ಬಹುಶಃ ಕೂಡಿ ಬರುವದು. ಮುಂದೆ ಆಗುವದೇ ಇಲ್ಲೆಂದಲ್ಲ ಆದರೆ ಅದು ಒದಗಿ ಬರುವದಕ್ಕೆ ಬಹಳ ಕಿಟಕಿಟಿಯುಂಟಾಗುವದು ಇಷ್ಟೇ. ಈ ವರ್ಷ ಸ್ಥಾವರ ಜಂಗಮ ಸಂಗ್ರಹ ಬಹಳ ಹೆಚ್ಚುವದು. ಮನಸ್ಸಿನಲ್ಲಿಲ್ಲದಿದ್ದರೂ ಆದರ ಮಹತ್ವ ಮತ್ತು ಪೂರ್ವ ಸಂಬಂಧಕ್ಕಾಗಿ ತೆಗೆದುಕೊಳ್ಳಲಿಕ್ಕೆಬೇಕಾಗುವದು. ವಾಹನಸುಖ ಉತ್ತಮ ದೊರೆಯುವದು. ಕದಾಚಿತ್ ಮನೆಯಲ್ಲಿ ಇಲ್ಲದಿದ್ದರೂ ಹೊರಗಿನವರದು ಒಂದೇ ಸವನೆ ದೊರೆಯುವ ಯೋಗವಿದೆ. ಆಪ್ತರು ಮತ್ತು ನೆರೆಯವರು ಪ್ರೇಮದಿಂದ ಮತ್ತು ನಮ್ರತೆಯಿಂದ ವರ್ತಿಸುವರು.

ಧಂದೆ ಮತ್ತು ಕೂಲಿಕಾರರಿಗಂತೂ ಕುಬೇರನೇ ಬಂದಂತೆನಿಸುವದು. ನೋಕರಿ ಮಾಡುವವರಿಗೆ ಕನಸು ಮನಸ್ಸಿನಲ್ಲಿಲ್ಲದಿದ್ದರೂ ಮೇಲಿನ ಗ್ರೇಡು ಸಿಕ್ಕುವದು. ಕೈಕೆಳಗಿನವರು ವಿನಮ್ರಭಾವದಿಂದ ನಡೆದುಕೊಳ್ಳುವರು. ಆದರೆ ನಿಮ್ಮ ಅರೇರಾವಿ ಮಾತ್ರ ಅನೇಕರ ಮನಸ್ಸಿಗೆ ಹತ್ತುವದು. ನವಂಬರ ೮ ರಿಂದ ಡಿಸೆಂಬರ ೧೯, ಮಾರ್ಚ ೧೦ ರಿಂದ ಜುಲೈ ೨೦ ಮತ್ತು ಸಪ್ಟಂಬರ ೫ ರಿಂದ ಮುಂದಿನ ಕಾಲ ಬಹಳ ಆನಂದದಿಂದ ಹೋಗುವದು. ಖಾತೆ ಬದಲಾಗುವದಿದ್ದರೆ ಅದು ಯೋಗ್ಯ ಸ್ಥಳಕ್ಕೆ ನವಂಬರ ೧೧ರಿಂದ ಡಿಸೆಂಬರ ೫ ರ ವರೆಗೆ ಮೇ ೨೮ರಿಂದ ಜೂನ ೨೯ ಮತ್ತು ಜುಲೈ ೨೬ರಿಂದ ಆಗಷ್ಟ ೨೩ ಈ ಅವಧಿಯಲ್ಲಿ ಆಗುವ ಸಂಭವ ಹೆಚ್ಚು. ಲೋಕಪ್ರೇಮ ಬಹಳ ಅನುಕೂಲ. ರೆವಿನ್ಯೂ, ಪೋಲಿಸ ಮತ್ತು ಮಿಲಿಟರಿ ಖಾತೆಗಳಲ್ಲಿ ಇದ್ದವರಿಗೆ ಈ ವರ್ಷ ಹೆಚ್ಚು ಸುಖ ಮತ್ತು ಯಶಸ್ಸು ಸಿಕ್ಕುವವು. ಸ್ವತಂತ್ರ ಉದ್ಯೋಗವಿದ್ದವರಿಗೆ ಎಪ್ರಿಲ ೬ ರಿಂದ ವಿಪುಲ ಲಾಭವಾಗಿ ನಂತರ ಅದರಗೂಡ ಪ್ರತಿಷ್ಠೆಯೂ ಹೆಚ್ಚುವದು. ಸಾಮಾಜಿಕ ಕೆಲಸಗಳಲ್ಲಿ ಧುರೀಣತ್ವ ದೊರೆಯುವದು. ಪ್ರತಿಯೊಂದು ರಾಜಕೀಯ ವಿಷಯದಲ್ಲಿ ನಿಮ್ಮ ಹೆಸರಿನ ಮಹತ್ವ ಹೆಚ್ಚುವದು. ಎಪ್ರಿಲ ೨೦ ರಿಂದ ಜೂನ ೩ ಮತ್ತು ಸಪ್ಟಂಬರ ೫ ರಿಂದ ಅಕ್ಟೋಬರ ೨೨ ರ ಅವಧಿಯಲ್ಲಿ ಯಾವದೇ ಸಣ್ಣ ದೊಡ್ಡ ಚುನಾವಣಿಗೆ ಉಮೇದ್ವಾರರಾಗಿ ನಿಂತರೆ ಸ್ಪರ್ಧೆ ಒಳ್ಳೆ ತೀಕ್ಷ್ಣವಾದರೂ ಪ್ರತಿಪಕ್ಷಿಗಳಿಗಿಂತ ಬಹಳಷ್ಟು ಹೆಚ್ಚು ಮತಗಳನ್ನು ಪಡೆದು ನೀವು ಆರಿಸಿ ಬರುವಿರಿ. ಧಂದೆ ಎಂಥದೇ ಇದ್ದರೂ ಈ ವರ್ಷ ಉತ್ತಮ ಲಾಭ ಮತ್ತು ಒಳ್ಳೆ ಲೌಕಿಕದ್ದಾಗಿ ಪರಿಣಮಿಸುವದು. ಬೌದ್ಧಿಕ ವ್ಯವಸಾಯ ಮಾಡುವವರ ಲೌಕಿಕವೂ ಬೇಗ ಹೆಚ್ಚುವದು. ಬಹುಶಃ ಧಾರ್ಮಿಕ ಉದ್ದೇಶಗಳಿಗಾಗಿ ಪ್ರವಾಸ ಸಂಭವಿಸುವದು. ಎಪ್ರಿಲ ೬ರ ವರೆಗೆ ಮಿತ್ರಸುಖ ಬಹಳ ಅನುಕೂಲ. ಅನಂತರ ಮಾತ್ರ ನಿಮ್ಮ ನಿಮ್ಮಲ್ಲಿ ಮತಭೇದ ಹೆಚ್ಚುತ್ತ ನಡೆದು ಗಾಢ ಮಿತ್ರತ್ವದಲ್ಲಿ ಶೈಥಿಲ್ಯವುಂಟಾಗುವದು. ಡಿಸೆಂಬರದಿಂದ ಭಾವೀ ಅಭ್ಯುದಯಕ್ಕೆ ಪರಿಪೋಷಕವಾಗುವಂಥ ಅನೇಕ ಲೇಖೀ ಕರಾರಪತ್ರ ಮೊದಲಾದವುಗಳು ಆಗುವವು.

ವಾದವಿವಾದ ಇಲ್ಲವೆ ಸ್ಪರ್ಧೆಯಲ್ಲಿ ನವಂಬರ ೫ ರಿಂದ ಅನುಕೂಲತೆಯ ವಾತಾವರಣ ಉತ್ಪನ್ನವಾಗುತ್ತ ನಡೆದು ಡಿಸೆಂಬರ ೧೫ ರಿಂದ ಜನೆವರಿ ೧೪, ಫೆಬ್ರುವರಿ ೧೨ ರಿಂದ ಮಾರ್ಚ ೧೪, ಎಪ್ರಿಲ ೧೩ ರಿಂದ ಮೇ ೧೪ ಮತ್ತು ಆಗಷ್ಟ ೧೬ ರಿಂದ ಸಪ್ಟಂಬರ ೧೬ ರ ಒರೆಗಿನ ಅವಧಿಯಲ್ಲಿ ಯಶಸ್ಸು ದೊರೆತು ಶತ್ರುಗಳು ಪೂರ್ಣವಾಗಿ ಸೋಲುವರು.

ಗರ್ಭಿಣಿಸ್ತ್ರೀಯರಲ್ಲಿ ಎಪ್ರಿಲ ೬ ರೊಳಗಾಗಿ ಯಾರು ಹಡೆಯುವರೋ ಅವರು ಸುಲಭವಾಗಿ ಹಡೆಯುವರಲ್ಲದೆ ಪುತ್ರವತಿಯರಾಗಿ ಇಮ್ಮಡಿ ಆನಂದದಲ್ಲಿ ನಲಿದಾಡುವ ಯೋಗವಿದೆ. ಆದರೆ ಅನಂತರ ಹಡೆಯುವವರಿಗೆ ಅಲ್ಪಸ್ವಲ್ಪ ಪ್ರಸೂತಿ ಕಷ್ಟ ಸಹಿಸಬೇಕಾಗಿ ಬಂದು ಕೊನೆಗೆ ಹೆಣ್ಣು ಹುಟ್ಟುವದರಿಂದ ಮನಸ್ಸಿಗೆ ಇಮ್ಮಡಿ ದುಃಖವಾಗುವದು. ಗಂಡು ಹುಟ್ಟಲಿ ಹೆಣ್ಣು ಹುಟ್ಟಲಿ ಕೂಸು ಒಳ್ಳೆ ಆರೋಗ್ಯದಿಂದ ಇದ್ದು ಕೂಸು, ಬಾಣಂತಿಯರು ಒಳ್ಳೇ ಕ್ಷೇಮದಿಂದ ಇರುವರು.

ಯಾರ ಪರೀಕ್ಷೆ ಎಪ್ರಿಲ ೬ ರೊಳಗಾಗಿ ಆಗುವದಿದೆಯೋ ಆ ವಿದ್ಯಾರ್ಥಿಗಳು ಯಶಸ್ಸಿಗಾಗಿ ಎಷ್ಟೊಂದು ಖಾತ್ರಿಹಿಡಿಯುವರೋ ಅಷ್ಟು ಅನಂತರ ಪರೀಕ್ಷೆಯಾಗುವವರಿಗೆ ಪಾಸಾಗುವ ಖಾತ್ರಿ ಉಳಿಯದು.

# ಕನ್ಯಾ

ಈ ರಾಶಿಯವರು ಇದೊಂದು ವರುಷ ಸಾಡೇಸಾತಿಯಲ್ಲಿಯೇ ಇರಬೇಕಾಗಿರುವದರಿಂದ ಯಾವದೇ ವಿಷಯದಲ್ಲಿ ಪೂರ್ಣ ವಿಚಾರ ಮಾಡಿ ಮುಂದೆ ಹೆಜ್ಜೆಯನ್ನಿಡಬೇಕಾಗುವದು. ಹೀಗಿದ್ದರೂ ಎಪ್ರಿಲದಿಂದ ಮುಂದೆ ಭಾಗ್ಯದ ಅರುಣೋದಯವಾದಂತೆನಿಸುವದರಲ್ಲಿ ಯಾವ ಸಂದೇಹವಿಲ್ಲ.

ಈಗ ಈ ರಾಶಿಯವರಿಗಿದ್ದ ಸಾಡೇಸಾತಿಯು ಎರಡನೇ ವಿಭಾಗವು ನವಂಬರಕ್ಕೆ ಮುಗಿದು ಅನಂತರ ಅದರ ಕೊನೆಯ ಭಾಗ ಪ್ರಾರಂಭವಾಗುವದು. ಈ ಕೊನೆಯ ವಿಭಾಗ ಮೊದಲಿನ ಎರಡು ವಿಭಾಗಗಳಿಗಿಂತ ಕೆಲಮಟ್ಟಿಗಾದರೂ ಸುಖಕರವೆನಿಸುವದು ನಿಶ್ಚಿತ. ಆದರೆ ಎಪ್ರಿಲವರೆಗೆ ಇರುವ ಎಂಟನೇ ಗುರುವಿನಿಂದ ನಿಮ್ಮ ಆರೋಗ್ಯ ಮಾತ್ರ ಅನುಕೂಲವುಳಿಯುವದಿಲ್ಲ. ಆಮವಾತ, ಆಮಾಂಶ, ಅಪಚನ, ಬೆನ್ನೋವು, ತಲೆನೋವು ಮೊದಲಾದ ವಿಕಾರಗಳಿಂದ ತೊಂದರೆಯಾಗುವದು. ಆದರೆ ಆಯುಷ್ಯಕ್ಕೆ ಮಾತ್ರ ಅಂಜಿಕೆ ಇಲ್ಲ. ಉಳಿದ ವಿಷಯಗಳಲ್ಲಿ ಆವಶ್ಯಕ ದೇಹಸುಖ ಎಪ್ರಿಲಿನಿಂದ ಬಹಳ ಮಟ್ಟಿಗೆ ಸಿಕ್ಕುತ್ತ ಹೋಗುವದು. ಡಿಸೆಂಬರ ೫ ರಿಂದ ಜನೆವರಿ ೧, ಎಪ್ರಿಲ ೫ ರಿಂದ ಮೇ ೨೮ ಮತ್ತು ಜೂನ ೨೯ ರಿಂದ ಸಪ್ಟಂಬರ ೧೭ ರ ವರೆಗಿನ ಅವಧಿಯಲ್ಲಿ ಪ್ರಾಪಂಚಿಕ ಉತ್ಕರ್ಷದ ಮೂರು - ನಾಲ್ಕು ಸಂಗತಿಗಳಾದರೂ ವಿಶೇಷ ಖಾತ್ರಿಯಿಂದ ಸಂಭವಿಸುವವು.

ಹೆಂಡತಿ ತವರುಮನೆಗೆ ಹೋಗುವದರಿಂದ ಇಲ್ಲವೆ ಬೇರೆ ಕಡೆಗೆ ಹೋಗುವದರಿಂದ ಕೆಲ ಸಮಯ ಸ್ತ್ರೀ ಸುಖವು ಸಿಕ್ಕುವದಿಲ್ಲವಾದರೂ ಒಟ್ಟಾರೆ ಅವಳ ಆರೋಗ್ಯ ಅನುಕೂಲವುಳಿದು ಇಬ್ಬರಲ್ಲಿ ಪೂರ್ಣ ಪ್ರೇಮ ಮತ್ತು ಸಂಪೂರ್ಣ ಮತೈಕ್ಯ ಉಳಿಯುವದು. ಅವಳ ಮಾತಿನಂತೆ ನಡೆಯುವಲ್ಲಿಯೇ ಹಿತ ಮತ್ತು ಯಶಸ್ಸು ಇದ್ದಂತೆ ಕೆಲ ನಿದರ್ಶನಗಳು ಬರುವವು. ಎಪ್ರಿಲ ೬ ರಿಂದ ಮುಂದೆ ಮನೆಯಲ್ಲಿಯ ಇತರ ಜನರಿಂದ ನೀವಿಬ್ಬರೂ ಕೆಲಮಟ್ಟಿಗೆ ತೊಂದರೆ ಅನುಭೋಗಿಸಬೇಕಾದ ಪ್ರಸಂಗ ಬರುವದು. ಆದರೆ ಪತಿಪತ್ನಿಯರಲ್ಲಿ ಮಾತ್ರ ನಿಷ್ಠೆ ಸ್ವಲ್ಪ ಮಟ್ಟಿಗೂ ಕಡಿಮೆಯಾಗುವದಿಲ್ಲ. ನಿಮ್ಮ ಮದುವೆಯಾಗುವದಿದ್ದರೆ ಎಪ್ರಿಲದ ನಂತರವೇ ಆಗುವ ಯೋಗ ಪ್ರಬಲವಿದೆ. ಕದಾಚಿತ್ ಎಪ್ರಿಲಕ್ಕಿಂತ ಮೊದಲು ಸಂಭವಿಸಿದರೆ, ಅದು ಕೂಡಿಬಂದಂದಿನಿಂದ ಕೊರಳಲ್ಲಿ ಮಾಲೆಬೀಳುವವರೆಗೆ ಕನಸುಮನಸ್ಸಿನಲ್ಲಿ ಇಲ್ಲದಷ್ಟು ಅಡಚಣಿ ಆಯತ್ತ ಸಮಯದಲ್ಲಿ ಧುತ್ ಎಂದು ಮುಂದೆ ಬಂದು ಅವನ್ನೆಲ್ಲ ನಿವಾರಿಸಬೇಕಾದರೆ ಸಾಕು ಬೇಕಾಗಿ ಹೋಗುವದು. ವಧೂವರರು ಮಾತ್ರ ಅನುರೂಪ ಇರುವರು. ಮಕ್ಕಳಿಗೆ ಈ ವರ್ಷ ಬೌದ್ಧಿಕ ಮತ್ತು ಆರ್ಥಿಕ ದೃಷ್ಟಿಯಿಂದ ಬಹಳ ಉತ್ತಮ. ಆದರೆ ಆರೋಗ್ಯ ಮಾತ್ರ ಅಷ್ಟು ಅನುಕೂಲವಿಲ್ಲ. ಆರೋಗ್ಯ ಹೇಗೆ ಕೆಟ್ಟಿತು ಎಂಬುದು ಕೂಡ ಒಮ್ಮೆಲೆ ಗೊತ್ತಾಗುವದಿಲ್ಲ. ಆದರೂ ಎಪ್ರಿಲದಿಂದ ಅಷ್ಟೊಂದು ಅಂಜಿಕೆ ಇಲ್ಲ. ನಿಮ್ಮ ತಂದೆ ತಾಯಿ ಜೀವಂತ ಇದ್ದರೆ ತಂದೆಗೆ ನವಂಬರವರೆಗೆ ಮತ್ತು ತಾಯಿಗೆ ಎಪ್ರಿಲದಿಂದ ಮುಂದೆ ಕೆಲ ಮಟ್ಟಿಗೆ ಕ್ಲೇಶವಾಗುವದು. ಸ್ಥಾವರ ಜಂಗಮಗಳಲ್ಲಿ ಹೇಳಿಕೊಳ್ಳುವಂಥ ಬದಲಾವಣೆಗಳೇನೂ ಆಗುವದಿಲ್ಲ. ನೆರೆಹೊರೆಯವರು ಮತ್ತು ಉಳಿದ ಆಪ್ತರು ಮೊದಲು ನವಂಬರ ೮ ರ ವರೆಗೆ ಅನಂತರ ಜೂನ ೩ ರಿಂದ ಜುಲೈ ೨೦ ಮತು ಸಪ್ಟಂಬರ ೫ ರಿಂದ ಅಕ್ಟೋಬರ ೨೨ ಈ ಕಾಲದಲ್ಲಿ ಏನಾದರೊಂದು ನೆವ ತೆಗೆದು ನಿಮ್ಮೊಡನೆ ವಿರೋಧ ಮಾಡುವರು. ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ಅದಕ್ಕೆ ಎಪ್ರಿಲದಿಂದ ನಿಜವಾದ ಬಾಶಿಂಗಬಲವಿದೆ. ಆದರೆ ಬೀಗರು ಮಾತ್ರ ಬಹಳ ತೀಕ್ಷ್ಣಸ್ವಭಾವದವರು ಸಿಕ್ಕುವರು. ವಾಹನಗಳಿದ್ದರೂ ಅವುಗಳಿಂದ ಸುಖ

ಕ್ಕಿಂತ ಅವು ಮುರಿಯುವ ನಾದುರಸ್ತಿಯಾಗುವ ಕೆಟ್ಟುಹೋಗುವ ಇಲ್ಲವೆ ಕಳವಾಗಿ ಹೋಗುವ ಮೊದಲಾದ ತೊಂದರೆಗಳೇ ಆಗುವವು.

ದ್ರವ್ಯಲಾಭಕ್ಕೆ ಈ ವರ್ಷ ಬಹಳ ಅನುಕೂಲ. ಆದರೆ ಕೈಗೆ ಬರತಕ್ಕ ಹಣ ಗೊತ್ತಾದ ಸಮಯಕ್ಕೆ ಬರದೆ ಬಹಳ ವಿಲಂಬಿಸಿ ಬರುವದರಿಂದ ಮೇಲಿಂದ ಮೇಲೆ ಹಣದ ತೊಂದರೆಯೆನಿಸುವದು. ಅಂದಾಜಿಗಿಂತ ಹೆಚ್ಚು ವೆಚ್ಚವಾಗುವದು. ಆದರೆ ಆ ವೆಚ್ಚ ಬಹಳ ಮಟ್ಟಿಗೆ ಶುಭಪ್ರದ ಇರುವದು ಮತ್ತು ಅದರ ಉದ್ದೇಶ ಸಾಕಷ್ಟು ಸಾಧಿಸುವದು. ನೋಕರ ವರ್ಗದವರಿಗೆನ್ನಿರಿ ಧಂದೆಯವರಿಗೆನ್ನಿರಿ ಎಪ್ರಿಲ ೬ ರಿಂದ ಉತ್ಸಾಹದ ದಿನಗಳು ಕಾಣುವವು. ಅದರಲ್ಲಿಯೂ ನವಂಬರ ೧೧ ರ ವರೆಗೆ ಮತ್ತು ಮುಂದೆ ಡಿಸೆಂಬರ ೫ ರಿಂದ ಜನೆವರಿ ೧, ಜನೆವರಿ ೨೭ ರಿಂದ ಮಾರ್ಚ ೭, ಮೇ ೧ ರಿಂದ ೨೮, ಜೂನ ೨೯ ರಿಂದ ಜುಲೈ ೨೭ ಮತ್ತು ಅಗಸ್ಟ ೨೩ ರಿಂದ ಸಪ್ಟಂಬರ ೧೭ ಈ ಅವಧಿ ಹೆಚ್ಚು ಲಾಭಪ್ರದ್ವೆನಿಸುವದು. ನೌಕರರಿಗೆ ಜೂನ ೩ರಿಂದ ೨೧ ಮತ್ತು ಸಪ್ಟಂಬರ ೧೩ ರಿಂದ ೨೯ರ ಅವಧಿಯಲ್ಲಿ ಮೇಲಿನ ಗ್ರೇಡು ಸಿಕ್ಕುವ ಆಸೆಯಿದ್ದರೆ ಅದು ಸಹಸಾ ಸುಳ್ಳಾಗುವದಿಲ್ಲ. ಎಪ್ರಿಲ ೬ ರೊಳಗಾಗಿ ಆಗುವ ಬದಲಿ ಅನುಕೂಲ ಸ್ಥಳಕ್ಕೆ ಮತ್ತು ಅನಂತರ ಆದರೆ ಸ್ವಲ್ಪ ಅನನುಕೂಲ ಸ್ಥಳಕ್ಕಾಗುವದು. ಶೋಕ ವ್ಯಾಪಾರಿಗಳಿಗಿಂತ ಕಿರುಕಳ ಧಂದೆಯವರಿಗೆ ಹೆಚ್ಚು ಲಾಭವಾಗುವದು. ಬುದ್ಧಿಜೀವಿ ಧಂದೆಯವರಿಗೆ ಲಾಭಕ್ಕೆ ಅನುಕೂಲವಿದ್ದರೂ ಬುದ್ಧಿಯ ತೇಜಸ್ಸು ಮಾತ್ರ ಬಹಳಷ್ಟು ಪ್ರಕಾಶಮಾನವಾಗುವದಿಲ್ಲ. ಗೊತ್ತುಮಾಡಿದ ವಿಚಾರ ಇಲ್ಲವೆ ತರ್ಕ ಯೋಗ್ಯವೊ ಅಯೋಗ್ಯವೊ ಎಂಬ ಸಂಶಯ ಆಯತ್ತಹೊತ್ತಿಗೆ ತಲೆಯಲ್ಲಿ ಸುಳಿದು ಅತಿ ಗೊಂದಲವುಂಟಾಗುವದು. ಎಷ್ಟೇ ರೊಕ್ಕ ಸಿಕ್ಕರೂ ಹಿಂದಿನ ದಗದಗಿಯನ್ನೆಲ್ಲ ಸರಿಪಡಿಸುವಲ್ಲಿ ಎಲ್ಲ ವ್ಯಯವಾಗಿ ಹೋಗುವದು.

ವಾದವಿವಾದಗಳಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಯಾವಾಗಲೂ ತೀಕ್ಷ್ಣ ಸ್ಪರ್ಧೆ ಆಗುವದು. ಆದರೆ ಎಪ್ರಿಲ ೬ ರ ನಂತರ ವಿಜಯಶ್ರೀ ನಿಮ್ಮ ಕಡೆಗೇ ಒಲೆಯುವಳು. ಸಹಾಯ ಮಾಡುವವರಿಗೆ ಬಗೆಬಗೆಯ ಆಮಿಷಗಳನ್ನು ತೋರಿಸಿ ಅವರನ್ನು ಫಿತೂರಿ ಮಾಡಿಕೊಳ್ಳುವ ಪ್ರಯತ್ನವನ್ನು ನಿಮ್ಮ ಶತ್ರುಗಳು ಮಾಡುವರು.

ಗರ್ಭವತಿ ಸ್ತ್ರೀಯರು ಎಪ್ರಿಲದೊಳಗಾಗಿ ಹಡೆಯುವವರಿದ್ದರೆ ಅವರಿಗೆ ಗಂಡುಮಗು ಹುಟ್ಟುವ ಸಂಭವ ಹೆಚ್ಚು ಇದ್ದರೂ ಆಯುಷ್ಯದ ನಿರ್ಣಯವನ್ನು ಅವುಗಳ ಜನ್ಮ ಕುಂಡಲಿಯ ಮೇಲಿಂದಲೆ ಕೊಡಬೇಕಾಗುವದು. ಎಪ್ರಿಲದಿಂದ ಮುಂದೆ ಹಡೆಯುವವರು ದೀರ್ಘಾಯುಷಿಗಳಾದ ಹೆಣ್ಣು ಹಡೆಯುವರು. ಆದರೆ ಪ್ರಸೂತಿಕಷ್ಟವನ್ನು ಮಾತ್ರ ಇಬ್ಬರೂ ಅನುಭವಿಸಬೇಕಾಗುವದು.

ಎಪ್ರಿಲದೊಳಗಾಗಿ ಪರೀಕ್ಷೆಕಟ್ಟುವ ವಿದ್ಯಾರ್ಥಿಗಳು ನಿಶ್ಚಯವಾಗಿ ಯಶಸ್ವಿಯಾಗುವರೆಂದು ಹೇಳಲಿಕ್ಕೆ ಬಾರದಿದ್ದರೂ ಅನಂತರ ಪರೀಕ್ಷೆ ಕಟ್ಟುವವರು ಮಾತ್ರ ನಿಶ್ಚಯವಾಗಿ ಯಶಸ್ವಿಗಳಾಗುವರೆಂಬಲ್ಲಿ ಸಂದೇಹವಿಲ್ಲ.

## ತುಲಾ

ಈ ರಾಶಿಯವರಿಗೆ ಈ ವರ್ಷ ಕಳೆದ ವರ್ಷಕ್ಕಿಂತ ಬಹಳ ಪ್ರಗತಿಯದಾಗಿದೆ ಎಂಬಲ್ಲಿ ಸಂದೇಹವಿಲ್ಲ.

ಸದ್ಯದಲ್ಲಿ ಈ ರಾಶಿಯವರಿಗೆ ಇನ್ನೂ ಸಾಡೇಸಾತಿ ಇದ್ದರೂ ಕಳೆದ ಎರಡು ಎರಡೂವರೆ ವರುಷಗಳಿಂದ ಇದ್ದ ೧೨ ನೇ ಶನಿ ನವಂಬರದಿಂದ ಬದಲಾಗಿ ಅನಂತರ ಮೊದಲನೇ ಶನಿಯ ಪ್ರಭಾವ ಬೀಳುವದು. ಅಂದರೆ ಸಾಡೇಸಾತಿಯ ಮೊದಲನೇ ಭಾಗ ಮುಗಿದು ಎರಡನೇ ಭಾಗ ಪ್ರಾರಂಭವಾಗುವದು. ತುಲಾ ರಾಶಿ ಶನಿಯ ಉಚ್ಚರಾಶಿಯಿರುವದರಿಂದ ಮತ್ತು, ಈ ರಾಶಿಯ ಮುಖ್ಯರಾಜಯೋಗಕರ್ತನು ಶನಿಯೇ ಆಗಿರುವದರಿಂದ ಮೊದಲಿನ ಎರಡೂವರೆ ವರ್ಷದಷ್ಟು ಅವನು ತಾಪದಾಯಕನಾಗಲಾರನು. ತದ್ವಿರುದ್ಧವಾಗಿ ಸ್ವಲ್ಪ ಸುಖದಾಯಕನೇ ಆಗುವನು. ಅಂದರೆ ಈ ಎರಡೂವರೆ ವರ್ಷ ನಿಮಗೆ ಸುಖವೇ ಆಗುತ್ತ ಹೋಗುವದೆಂದು ನಿಶ್ಚಯವಾಗಿ ತಿಳಿದುಕೊಂಡು ನಡೆಯತಕ್ಕದ್ದು. ಈ ವರ್ಷ ಎಪ್ರಿಲ ೬ ರ ವರೆಗೆ ಪ್ರಕೃತಿಗೆ ಅನುಕೂಲವಿದ್ದರೂ ಮುಂದೆ ಮಾತ್ರ ಅಷ್ಟು ಅನುಕೂಲವಿಲ್ಲ. ಮಧುಮೇಹ, ಅತಿಸಾರ, ಹೊಟ್ಟೆಉಬ್ಬುವದು ಇಲ್ಲವೆ ಗಂಟಲ ನೋವು ಮೊದಲಾದವುಗಳಿಂದ ಅಲ್ಪಸ್ವಲ್ಪ ತೊಂದರೆಯಾಗುವದು. ಮಾನಸಿಕ ಅಸಮಾಧಾನವೂ ಕೆಲಮಟ್ಟಿಗೆ. ನಿಮ್ಮ ಆಯುಷ್ಯದ ಮರ್ಯಾದೆ ಮತ್ತು ಪ್ರಾಪಂಚಿಕ ಜೀವನದ ಭಾವೀ ಕಾಲದ ಬಗ್ಗೆ ಇಲ್ಲದ್ದೊಂದು ಕುಕಲ್ಪನೆ ಮಾಡುತ್ತ ಕೂಡ್ರುವ ಕೆಟ್ಟ ಚಟ ಹತ್ತುವದು. ಉಳಿದ ವಿಷಯಗಳಲ್ಲಿ ದೇಹಸುಖಕ್ಕೆ ಪರಿಪೋಷಕವಾಗುವಂಥ ವಸ್ತುಸ್ಥಿತಿ ಉಳಿದು ವರ್ಷಾರಂಭದಿಂದ ಜನೆವರಿ ೨೭ ರವರೆಗೆ ಮತ್ತು ಅನಂತರ ಮೇ ೨೮ ರಿಂದ ಜೂನ ೨೯, ಜುಲೈ ೨೭ ರಿಂದ ಅಗಸ್ಟ ೨೩ ಅನಂತರ ಸಪ್ಟಂಬರ ೧೭ ರಿಂದ ಅಕ್ಟೋಬರ ೧೩ರ ವರೆಗಿನ ಅವಧಿ ದೇಹಸುಖಕ್ಕೆ ಬಹಳ ಅನುಕೂಲವಿದೆ. ಎಪ್ರಿಲ ೬ ರ ವರೆಗೆ ಸ್ತ್ರೀಸುಖಕ್ಕೆ ಅನುಕೂಲವಿದ್ದರೂ ಮುಂದೆ ಅದು ಅಷ್ಟೊಂದು ಮನಸ್ಸಿನಂತೆ ದೊರೆಯದು. ಕೆಲದಿನ ಅವಳು ಪರಗ್ರಾಮಗಳಿಗೆ ಹೋಗುವದರಿಂದ ಸಹವಾಸಕ್ಕೆ ವ್ಯತ್ಯಯ ಬರುವದು, ಕೆಲಸಮಯ ಇಬ್ಬರಲ್ಲಿ ಒಬ್ಬರಿಗೆ ಶಾರೀರಕ ಇಲ್ಲವೆ ಮಾನಸಿಕ ಉಪಾಧಿಯಾಗಿ ಸಹವಾಸಕ್ಕೆ ಮನಸ್ಸು ಉದಾಸೀನವಾಗುವದು ಅಲ್ಲದೆ ಉಭಯತರಲ್ಲಿ ಮೇಲಿಂದ ಮೇಲೆ ಮತಭೇದವಾಗುವದರಿಂದ ಪ್ರತಿಯೊಬ್ಬರ ಮನಸ್ಸು ರಂಜಿತವೇ. ಪ್ರತಿಯೊಬ್ಬರು ಎರಡನೆಯವರ ಮೇಲೆ ವರ್ಚಸ್ಸು ಹಾಕಲು ಪ್ರಯತ್ನಿಸುವರು. ವಿವಾಹವಾಗುವದಿದ್ದರೆ ಎಪ್ರಿಲ ೬ ರೊಳಗೆ ಎಷ್ಟು ಸುಲಭವಾಗಿ ಆಗುವದೊ ಅಷ್ಟು ಸುಲಭವಾಗಿ ಮುಂದೆ ಆಗಲಾರದು. ಅನುರೂಪ ವಧೂವರರು ದೊರೆತರೂ ಪರಸ್ಪರ ಸ್ವಭಾವದ ಬಗ್ಗೆ ಶಂಕೆ ಇದ್ದದ್ದೆ. ನಿಮ್ಮ ಮತ್ತು ಹೆಂಡತಿಯ ತಂದೆ ತಾಯಿಗಳಿಗೆ ಈ ವರ್ಷ ಕ್ಲೇಶವಿದೆ; ಅಲ್ಲದೆ ಅವರದೂ ನಿಮ್ಮದೂ ಮೊದಲಿನಷ್ಟು ಕೂಡಿ ನಡೆಯಲಾರದು. ಸ್ಥಾವರ ಜಂಗಮ ಆಸ್ತಿ ವ್ಯವಸ್ಥಿತ ಉಳಿಯುವದಲ್ಲದೆ ಹೊಸ ಸಂಗ್ರಹವೂ ಆಗಬಹುದು. ಆದರೂ ಗೊತ್ತಾದಷ್ಟು ವಾರ್ಷಿಕ ಉತ್ಪನ್ನ ಕೈಗೆ ಬರಬೇಕಾದರೆ ಕೆಲ ಖಾಸಗಿ ಕೆಲ ಸರಕಾರೀ ಅಡಚಣೆಗಳು ಅಡ್ಡಬಂದು ತೊಂದರೆ ಕೊಡುವವು. ನೆರೆಹೊರೆಯವರು ಅಂತಸ್ಥ ದ್ವೇಷಮಾಡಿದರೆ ಆಪ್ತಜನರು ನಿಮ್ಮನ್ನು ಕಷ್ಟಕ್ಕೀಡು ಮಾಡುವರು. ನೋಕರ ಚಾಕರರು ಪ್ರಾಮಾಣಿಕ ಇದ್ದರೂ ಅಸಹ್ಯ ಏರಿಕೆಯ ಧೋರಣವನ್ನಿಟ್ಟುಕೊಂಡು ನಡೆಯುವರು. ವಾಹನಗಳಿದ್ದರೆ ನಿಮಗಿಂತ ಹೊರಗಿನವರೇ ಅವುಗಳ ಉಪಯೋಗವನ್ನು ಹೆಚ್ಚಿಗೆ ಮಾಡುವರು. ಮಕ್ಕಳುಮರಿಗಳ ಉತ್ಕರ್ಷಕ್ಕೆ ಈ ವರ್ಷ ಬಹಳ ಅನುಕೂಲವಿದೆ. ವಿಶೇಷವಾಗಿ ಮಾರ್ಚ ೧೦ ರಿಂದ ಎಪ್ರಿಲ ೨೦, ಜೂನ ೩ ರಿಂದ ಜುಲೈ ೨೦ ಮತ್ತು ಸಪ್ಟಂಬರ ೫ ರಿಂದ ಅಕ್ಟೋಬರ ೨೨ ಈ ಅವಧಿಯಲ್ಲಿ ಹೆಚ್ಚು ಅನುಕೂಲ. ಅವರಲ್ಲಿ ಯಾರದಾದರೂ ವಿವಾಹವಾಗುವದಿದ್ದರೆ ಎಪ್ರಿಲ ೬ ರ ನಂತರ ಹೆಚ್ಚು ಅಲ್ಪಾಯಾಸದಿಂದ ಆಗುವ ಯೋಗವಿದೆ. ಬೀಗರು ಉದಾರರೆನಿಸಿದರೂ ಸ್ವಭಾವತಃ ಕಂಜೂಷರಿರುವ ಸಂಭವವಿದೆ. ಗೋತ್ರದ ಅಡಚಣೆಗಾಗಿ ಮೊದಲು ಗೊತ್ತಾದ ಮುಹೂರ್ತ ಸಾಧಿಸದೆ ಎರಡನೇ ಮುಹೂರ್ತ ನೋಡಬೇಕಾಗುವದು. ಮಕ್ಕಳು ನಿಮ್ಮೊಡನೆ ಭಕ್ತಿಯಿಂದ ನಡೆದುಕೊಳ್ಳುವರು. ಉಳಿದ ದೇವಧರ್ಮಾದಿ ಕೆಲಸಗಳೂ ಯಥಾಸಾಂಗವಾಗಿ ನೆರವೇರುವವು.

ಧಂದೆ ಕೂಲಿಯವರಿಗೆ ನವಂಬರ ೫ ರಿಂದ ಹೆಚ್ಚು ಉತ್ಕರ್ಷದ ಕಾಲ; ಪ್ರಗತಿ ಮತ್ತು ಲಾಭ. ನೋಕರರಿಗೆ ಎಪ್ರಿಲ ೬ ರಿಂದ ಇದ್ದರೆ ಉಳಿದ ಧಂದೆ ಮಾಡುವವರಿಗೆ ಅನಂತರದ ಕಾಲ ಬಹಳ ಸುಖಕರ. ನೋಕರರಿಗೆ ಈ ವರ್ಷದಲ್ಲಿ ಕಡಿಮೆಯೆಂದರೆ ಎರಡುಸಲ ಬದಲಿಯಾಗುವದು. ಆದರೆ ಎಪ್ರಿಲ ೬ ರೊಳಗಾಗಿ ಬದಲಿ ಆಗುವ ಸ್ಥಳ ಅನುಕೂಲವಿದ್ದಷ್ಟು

ಮುರಿದೆ ಆಗುವ ಸ್ಥಳವಿರುವದಿಲ್ಲ. ಮೇಲಿನ ಗ್ರೇಡು ಸಿಕ್ಕುವದಾದರೂ ಎಪ್ರಿಲ ೬ರೊಳಗಾಗಿಯೇ. ಎಪ್ರಿಲ ೬ರ ನಂತರದ ಕಾಲವನ್ನು ಒಬ್ಬ ಲಹರೀ ವರಿಷ್ಠಾಧಿಕಾರಿಯ ಕೈಕೆಳಗೆ ಕಳೆಯಬೇಕಾಗಿ ಬರುವದೆಂದೆನಿಸುತ್ತದೆ. ಸಿಕ್ಕತಕ್ಕ ಲಾಭ ಕಾಲಕ್ಕೆ ಸರಿಯಾಗಿ ಸಿಕ್ಕರೂ ಎಪ್ರಿಲದ ನಂತರ ವೆಚ್ಚ ಹೆಚ್ಚಿ ಕೈಯೂರಿಕೊಂಡು ಕೂಡ್ರಬೇಕಾದ ಪ್ರಸಂಗ ಬರಬಹುದು. ಧಂದೆ ಮಾಡುವವರಿಗೆ ಪ್ರಗತಿ ಮತ್ತು ಲಾಭ ಅನುಕೂಲವೇ. ಆದರೆ ಉದ್ಯೋಗದಲ್ಲಿ ಪತ್ತು ಕಾಯ್ದುಕೊಂಡು ಹೋಗಬೇಕಾದರೆ ಬಹಳ ಯಾತಾಯಾತ ಪಡಬೇಕಾಗುವದು. ಈ ವಿಷಯದಲ್ಲಿ ಜನವರಿ ೧೪ರಿಂದ ಫೆಬ್ರುವರಿ ೧೨, ಎಪ್ರಿಲ ೧೩ ರಿಂದ ಮೇ ೧೪, ಜುಲೈ ೧೬ ರಿಂದ ಅಗಸ್ಟ ೧೬ ಮತ್ತು ಅನಂತರ ಅಕ್ಟೋಬರ ೧೭ ರ ನಂತರದ ಕಾಲವು ಸ್ವಲ್ಪವಾದರೂ ತೊಂದರೆ ಕೊಡುವಂತಹದು. ಬುದ್ಧಿಜೀವಿ ಧಂದೆಯವರಿಗೆ ಈ ವರ್ಷ ಲಾಭ ಉತ್ತಮ ಪ್ರತಿಷ್ಠೆಯಂತೂ ಇಮ್ಮಡಿ ಅನುಕೂಲ. ಪ್ರವಾಸ ಮಾತ್ರ ಅನಪೇಕ್ಷಿತವಾಗಿ ಒಮ್ಮೆಲೆ ಒದಗಿಬರುವದು.

ವಾದವಿವಾದ ಮತ್ತು ಸ್ಪರ್ಧೆಯಲ್ಲಿ ಮಾತ್ರ ನಿಮಗೂ ಪ್ರತಿಪಕ್ಷಿಗಳಿಗೂ ಸಮಪ್ರಮಾಣದಲ್ಲಿ ಅನುಕೂಲ. ಕೆಲ ಸಲ ನಿಮಗೆ ಅನುಕೂಲವಾದರೆ ಕೆಲ ಸಲ ಅವರಿಗೆ ಅನುಕೂಲ. ಆದರಲ್ಲಿಯೂ ಎಪ್ರಿಲ ವರೆಗೆ ನಿಮಗೇ ಹೆಚ್ಚು ಯಶಸ್ಸು.

ಈ ರಾಶಿಯ ಸ್ತ್ರೀಯರು ಗರ್ಭಿಣಿಯಿದ್ದು ಡಿಸೆಂಬರದೊಳಗಾಗಿ ಹಡೆಯುವವರಿದ್ದರೆ ಅವರಿಗೆ ಸ್ವಲ್ಪ ಕಷ್ಟವಾಗುವದು. ಅನಂತರ ಸುಲಭ ಪ್ರಸೂತಿಯಾಗುವದು. ಎಪ್ರಿಲವರೆಗೆ ಗಂಡು ಮತ್ತು ಅನಂತರ ಹೆಣ್ಣು ಹಡೆಯುವ ಯೋಗವಿದೆ. ಬಾಣಂತಿಗಿಂತ ಮಕ್ಕಳಿಗೇ ಹೆಚ್ಚು ಅನುಕೂಲ ಕಾಲವಿದೆ.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಎಪ್ರಿಲದೊಳಗೆ ಮತ್ತು ಅಗಸ್ಟ ೧೬ರಿಂದ ಸಪ್ಟಂಬರ ೧೬ರ ವರೆಗೆ ಮತ್ತು ಸಪ್ಟಂಬರ ೨೯ ರಿಂದ ಅಕ್ಟೋಬರ ೨೩ ಅವಧಿಯಲ್ಲಿ ಆಗುವದಿದೆಯೊ ಅವರಿಗೆ ಸರಸ್ವತಿಯು ಯಶಸ್ಸು ಕೊಡುವ ಖಾತ್ರಿ ಹೆಚ್ಚಿಗೆ ಇದೆ.

ವವು. ಆದರೂ ಮನಸ್ಸಿನಂತೆ ಪ್ರಾಪಂಚಿಕ ಸುಖವೆಂದಿಗೂ ಸಿಕ್ಕಲಾರದು. ಸಮಾಧಾನವೆನಿಸುವಷ್ಟರಲ್ಲಿಯೇ ಮತ್ತೊಂದು ವಿರುದ್ಧ ಸಂಗತಿ ಸಂಭವಿಸುವದು.

ಸ್ತ್ರೀಸುಖ ಎಪ್ರಿಲದಿಂದಲೆ ಹೆಚ್ಚಿಗೆ ದೊರೆತರೂ ಅವಳ ಆರೋಗ್ಯದ ಬಗ್ಗೆ ಒಂದಿಲ್ಲೊಂದು ತಕರಾರು ದಿನವೂ ಇದ್ದದ್ದೆ. ಉಭಯತರಲ್ಲಿ ಜನರ ಕಣ್ಣಿಗೆ ಕಾಣುವಷ್ಟು ವಿರೋಧ ಬರದಿದ್ದರೂ ಒಳಗೊಳಗೆ ಮತೈಕ್ಯ ಸ್ವಲ್ಪೂ ಉಳಿಯದೆ ರಸಕಸಿ ನಡೆದದ್ದೇ. ಆದರೆ ಅದರಲ್ಲಿ ನಿಮ್ಮ ತಪ್ಪೇ ಹೆಚ್ಚು. ನಿಮ್ಮನ್ನು ಪೇಚಿನಲ್ಲಿ ತರಲು ಅವಳು ಬೇಕೆಂತಲೆ ಹೆಚ್ಚು ವೆಚ್ಚ ಮಾಡುವಳೆಂದು ನಿಮಗೆ ತಪ್ಪುತಿಳುವಳಿಕೆಯಾಗುವದು. ಈ ರಾಶಿಯವರ ಲಗ್ನವಾಗುವದಿದ್ದರೆ ಎಪ್ರಿಲ ನಂತರವೇ ಬಾಶಿಂಗಬಲ ಒದಗಿಬರುವದು. ಆದರೊಳಗಾಗಿ ಕೂಡಿಬರುವದೆಂದೆನಿಸಿದರೂ ವಧೂವರರ ಮನಸ್ಸಿನಲ್ಲಿ ಏನೇನೋ ವಿಪರೀತ ಗ್ರಹವುಂಟಾಗಿ ಅದು ಮುರಿದುಹೋಗುವದು. ವಧೂವರರು ಪರಸ್ಪರ ಭಿನ್ನ ಗುಣ, ಭಿನ್ನ ರೂಪದವರಿರುವದರಿಂದ ವಿವಾಹೋತ್ತರ ಜೀವನವೂ ಅಷ್ಟೊಂದು ಸುಖದಾಯಕವಾಗಲಾರದು. ಬೀಗರೂ ಮರ್ಕಟಸ್ವಭಾವದವರು ಸಿಕ್ಕುವರು ಮತ್ತು ಗೊತ್ತುಪಡಿಸಿದ ಯಾದಿಯಂತೆ ನಡೆಯುವದಿಲ್ಲ. ನಿಮ್ಮ ಮತ್ತು ಹೆಂಡತಿಯ ಬಂಧುವರ್ಗದವರಿಗೆ ಶರೀರಕ್ಲೇಶ. ಅಲ್ಲದೆ ನಿಮ್ಮದು ಅವರದು ರವಷ್ಟೂ ಕೂಡ ಕೂಡಿ ನಡೆಯಲಾರದು. ನವಂಬರ ೫ ರ ನಂತರ ಮಕ್ಕಳಲ್ಲಿ ಕೆಲವರ ಉನ್ನತಿಯಾದರೂ ಅದರ ಉಪಯೋಗವು ನಿಮಗೆ ಎಳ್ಳಷ್ಟೂ ಆಗಲಾರದು. ಸ್ಥಾವರ ಜಂಗಮ ಸಂಗ್ರಹ ಹೆಚ್ಚಳದ ಆಸೆ ಬಿಟ್ಟರೂ ಅದು ಕಡಿಮೆಯಾಗದಿದ್ದರೆ ನಿಮ್ಮ ಸುದೈವ. ಎಪ್ರಿಲ ೬ ರಿಂದ ನೋಕರ ಚಾಕರರು ಮತ್ತು ಬಂಧುವರ್ಗದವರು ಸ್ವಲ್ಪ

## ವೃಶ್ಚಿಕ

ಈ ರಾಶಿಯವರಿಗೆ ಒಟ್ಟಾರೆ ಈ ವರ್ಷ ಕಷ್ಟಸಾಧ್ಯವಾದ ದುರ್ಗಮ ರೀತಿಯಿಂದ ಯಶಸ್ಸು ದೊರೆಯುವದೆಂಬುದು ಕೆಳಗಿನ ವಿವೇಚನೆಯಿಂದ ನಿಮ್ಮ ಲಕ್ಷಕ್ಕೆ ಬರಬಹುದು.

ಈ ವರ್ಷಭವಿಷ್ಯಕ್ಕಾಗಿ ಆಧಾರವೆಂದು ತೆಗೆದುಕೊಂಡ ಶ್ರೀ ಅನಂತಶಾಸ್ತ್ರಿ ಛತ್ರೆ ಮುಂಬಯಿ ಇವರ ಪಂಚಾಂಗದಂತೆ ನವಂಬರ ೫ ಕ್ಕೆ ತುಲಾದಲ್ಲಿ ಅಂದರೆ ಈ ರಾಶಿಯವರಿಗೆ ಬರುವ ೧೨ನೇ ಶನಿಯಿಂದ ಸಾಡೇಸಾತಿ ಪ್ರಾರಂಭವಾಗುವದೆಂದು ತಿಳಿಯತಕ್ಕದ್ದು. ಆದರೆ ಅವನು ತನ್ನ ಉಚ್ಚರಾಶಿಯಾದ ತುಲಾದಲ್ಲಿ ಇರುವದರಿಂದ ತನ್ನ ಮೊದಲನೇ ವಿಭಾಗದ ಎರಡೂವರೆ ವರ್ಷ ಅಷ್ಟೊಂದು ಫಲಿಸಲಾರನು. ಮಿತಿಮೀರಿ ವೆಚ್ಚವಾದರೂ ಅದರಲ್ಲಿಯ ಹೇತು ಬಹುಶಃ ಸಾಧ್ಯವಾಗುವದು. ಎಪ್ರಿಲ ೬ ರ ನಂತರ ಆರೋಗ್ಯ ಬಹಳ ಅನುಕೂಲ. ಅಲ್ಲಿಯವರೆಗೆ ಮಾತ್ರ ಸ್ವಲ್ಪ ಕುರಕುರಿ. ಅದರ ಕಾರಣವಾದರೂ ಬೇನೆಗಿಂತ ಮಾನಸಿಕವೇ. ಎಪ್ರಿಲ ೬ ರಿಂದ ಸುಖಕ್ಕೆ ಹೆಚ್ಚು ಅನುಕೂಲ. ಹೆಚ್ಚು ಉಪಯುಕ್ತ ಸಂಗತಿಗಳು ಸಂಭವಿಸು

ಹೆಚ್ಚು ಅನುಕೂಲತೆಯಿಂದ ನಡೆದುಕೊಳ್ಳುವರು. ಮಕ್ಕಳುಮರಿಗಳಲ್ಲಿ ಯಾರದಾದರೂ ಲಗ್ನ ಗೊತ್ತಾಗಿದ್ದರೆ ಎಪ್ರಿಲ ೬ ರೊಳಗಾಗಿ ಅದಕ್ಕೆ ಸಾಮಾನ್ಯ ಯೋಗವಿದೆ. ಮುಂದೆ ಮಾತ್ರ ಪ್ರಬಲ ಯೋಗವಿದೆ. ವಾಹನ ಸುಖ ಸಾಧಾರಣ.

ಧಂದೆ ಕೂಲಿಕಾರರ ಯೋಗವನ್ನು ನೋಡಿದರೆ ನೌಕರಿಯಲ್ಲಿ ಎಪ್ರಿಲ ೬ ರ ವರೆಗೆ ಮತ್ತು ಅನಂತರ ಧಂದೆಯಲ್ಲಿ ಹೆಚ್ಚು ಸುಖ ದೊರೆಯುವದು. ನೋಕರರಿಗೆ ನವಂಬರ ೮ ರಿಂದ ಡಿಸೆಂಬರ ೧೯, ಮಾರ್ಚ ೧೦ ರಿಂದ ಎಪ್ರಿಲ ೨೦, ಜೂನ ೩ ರಿಂದ ಜುಲೈ ೨೦ ಮತ್ತು ಸಪ್ಟೆಂಬರ ೫ ರಿಂದ ಅಕ್ಟೋಬರ ೨೨ ರ ವರೆಗೆ ಮೇಲಿನ ಗ್ರೇಡು ಸಿಕ್ಕುವ ಸಂಭವವಿದೆ. ಬದಲಿ ಆಗಬೇಕೆಂದೆನಿಸಿದರೆ ಅದಕ್ಕಾಗಿ ಬಹಳ ಪ್ರಯತ್ನ ಮಾಡಬೇಕಾಗುವದು. ನೋಕರಿಯಲ್ಲಿ ಕೆಲ ಹಕ್ಕುಬಾಧ್ಯತೆಗಳನ್ನು ಬಿಡಬೇಕಾಗುವದು. ವರಿಷ್ಠರ ಮರ್ಜಿ ಎಪ್ರಿಲ ೬ ರಿಂದ ಮುಂದೆ ಕ್ಷಣಕ್ಕೆ ಅನುಕೂಲವಿದ್ದರೆ ಮರುಕ್ಷಣ ಪ್ರತಿಕೂಲವಾಗುವದು. ದ್ರವ್ಯಲಾಭ ಸ್ವಲ್ಪಾದರೂ ಹೆಚ್ಚುವದು. ಆದರೆ ವೆಚ್ಚವನ್ನು ಬಾಯಿಗೂಡಿಸಲು ಮಾತ್ರ ಅದು ಕಡಿಮೆಯೇ ಎನಿಸುವದು. ಸ್ವತಂತ್ರ ಧಂದೆಯವರಿಗೆ ಎಪ್ರಿಲ ೬ ರಿಂದ ಒಳ್ಳೇ ಅನುಕೂಲ ಕಾಲ. ತಪ್ಪಿನಿಂದ ಮಾಡಿದ ವ್ಯವಹಾರ ಕೂಡ ಲಾಭದ್ದಾಗಿ ಪರಿಣಮಿಸುವದು. ಉದ್ಯೋಗದ ವ್ಯಾಪ್ತಿ ಮೊದಲಿಗಿಂತ ಹೆಚ್ಚುವದು. ಮತ್ತು ಪ್ರತಿಷ್ಠೆ ಕಡಿಮೆಯಾಗಬಹುದೆಂಬ ಅಂಜಿಕೆ ಆಗಾಗ ಕಂಡು ಬಂದರೂ ಅದು ಮೊದಲಿನಂತೆಯೇ ದೃಢವಾಗಿ ಉಳಿಯುವದು. ಅನಾಯಾಸವಾಗಿ ದೊಡ್ಡವರ ಆಶ್ರಯ ಸಿಕ್ಕುವದು. ಪ್ರತ್ಯಕ್ಷ ದ್ರವ್ಯಲಾಭಕ್ಕೆ ಅಕ್ಟೋಬರ ೨೫ ರಿಂದ ನವಂಬರ ೧೬, ಜನೆವರಿ ೨೦ ರಿಂದ ಫೆಬ್ರುವರಿ ೫, ಮಾರ್ಚ ೨೬ ರಿಂದ ಮೇ ೧, ಜೂನ ೩ ರಿಂದ ೨೧ ಮತ್ತು ಸಪ್ಟಂಬರ ೧೩ರಿಂದ ೨೯ ಈ ಅವಧಿ ಬಹಳ ಅನುಕೂಲ. ಆದರೆ ಉತ್ಪನ್ನ ಎಷ್ಟೇ ಹೆಚ್ಚು ಬಂದರೂ ವೆಚ್ಚದ ಓಟವು ಅದಕ್ಕಿಂತ ಮುಂದೆಯೇ. ಶೋಕ ಧಂದೆ ಮಾಡುವವರಿಗೆ ಒಳ್ಳೆ ಉತ್ಕರ್ಷದ ಕಾಲ ಬಂದರೂ ಕೈಯಲ್ಲಿ ಯಾವಾಗಾದರೂ ಹತ್ತೆಂಟು ರೂಪಾಯಿ ಉಳಿಯುವವೋ ಇಲ್ಲವೋ ನಿಯಮವಿಲ್ಲ. ನಿಮ್ಮ ಅವಶ್ಯಕತೆಯನ್ನು ಹಿಂದಕ್ಕಿಟ್ಟು ಎರಡನೆಯವರ ಬೇಡಿಕೆಗಳನ್ನು ಮೊದಲು ಪೂರೈಸಬೇಕಾಗುವದು. ನಿರರ್ಥಕವಾದ ದೊಡ್ಡತನದ ಮೋಹದಲ್ಲಿ ಬೀಳುವ ಪ್ರಸಂಗ ಈ ವರ್ಷ ಬಹಳ ಸಲ. ಸುಳ್ಳುಸುಳ್ಳೇ ಏನೇನೋ ಭಾರೀ ಆಸೆ ಹಿಡಿದು ಮುಂದೆ ಅಡಚಣೆಯನ್ನುಂಟುಮಾಡುವಂತಹ ಲೇವಿ ಕರಾರನಾಮೆಗಳನ್ನು ಮಾಡಿಕೊಳ್ಳುವ ಪ್ರಸಂಗ. ಜರೂರಿಯ ಪ್ರವಾಸ ರದ್ದುಮಾಡಬೇಕಾಗುವದು. ಆದರೆ ಅವಶ್ಯವಿಲ್ಲದ ಪ್ರವಾಸಕ್ಕಾಗಿ ಹಾತೊರೆಯುವದು. ಯಾವಾಗಾದರೂ ಸುಳ್ಳು ಮಾತಾಡುವ ಲಹರಿಯೂ ಬಂದು ಅದರ ಪರಿಣಾಮ ನಿಮ್ಮ ಮೇಲೆಯೇ ಆಗುವದು. ಡಾಕ್ಟರರು ವೈದ್ಯರು, ನಟ-ನಟಿಯರು ಮತ್ತು ಲಲಿತಕಲಾಭಿಜ್ಞರು ಇವರನ್ನು ಬಿಟ್ಟು ಉಳಿದ ಬುದ್ಧಿಜೀವಿಗಳಿಗೆ ಈ ವರ್ಷ ಅಷ್ಟೊಂದು ಒಗ್ಗುವದಿಲ್ಲ.

ಫಿರ್ಯಾದಿ ದಾವೆಗಳಲ್ಲಿ ಇಲ್ಲವೆ ಖಾಸಗಿ ಸ್ಪರ್ಧೆಗಳಲ್ಲಿ ಈ ವರ್ಷ ಬಹಳ ಯಶಸ್ಸು ಸಿಕ್ಕಲಾರದು. ಆಯತ್ತ ಹೊತ್ತಿಗೆ ನಿರ್ಣಯ ಕೊಡುವವರ ಮನಸ್ಸು ನಿಮ್ಮ ವಿರುದ್ಧವಾಗುವದು. ಆದರಲ್ಲಿಯೂ ನವಂಬರ ೧೧ ರವರೆಗೆ ಮತ್ತು ಅನಂತರ ಎಪ್ರಿಲ ೫ ರಿಂದ ಮೇ ೨೮ ಮತ್ತು ಜೂನ ೨೯ ರಿಂದ ಜುಲೈ ೨೬ ರ ವರೆಗಿನ ಅವಧಿಯಲ್ಲಿ ಸ್ವಲ್ಪಾದರೂ ಅನುಕೂಲ ನಿರ್ಣಯ ಹೊರಬೀಳಬಹುದು.

ಈ ವರ್ಷದಲ್ಲಿ ಪ್ರಸೂತರಾಗುವ ಸ್ತ್ರೀಯರು ಬಹುಶಃ ಹೆಣ್ಣು ಹಡೆಯುವರು. ಎಪ್ರಿಲದೊಳಗೆ ಹಡೆದರೆ ಕ್ವಚಿತ್ ಗಂಡು ಹುಟ್ಟಬಹುದು. ಆದರೆ ಹಡೆಯುವಾಗ ವಿಪರೀತ ತೊಂದರೆಯಾಗುವದು. ಎಪ್ರಿಲದಿಂದ ಮುಂದೆ ಸುಲಭ ಪ್ರಸೂತಿಯ ಯೋಗವಿದೆ.

ಈ ರಾಶಿಯ ಎಲ್ಲ ವಿದ್ಯಾರ್ಥಿಗಳು ತಮ್ಮ ಅಭ್ಯಾಸವನ್ನು ಜೋರಿನಿಂದ ಮಾಡಬೇಕು. ಆದರೂ ಎಪ್ರಿಲದಿಂದ ಯಾವದೆ ಪರೀಕ್ಷೆ ಇದ್ದವರು ಖಾತ್ರಿಯಿಂದ ಯಶಸ್ವಿಗಳಾಗುವರು.

## ಧನು

ಈ ರಾಶಿಯವರಿಗೆ ಒಟ್ಟಾರೆ ಈ ವರ್ಷ ಪ್ರಾಪಂಚಿಕ ಕಷ್ಟ ಇದ್ದರೂ ಔದ್ಯೋಗಿಕ ಉತ್ಕರ್ಷದ ಅನುಭವವು ಬರುವದು.

ಈ ರಾಶಿಯವರ ಆರೋಗ್ಯ ಎಪ್ರಿಲ ೬ ರ ವರೆಗೆ ಬಹಳ ಅನುಕೂಲ ಇದ್ದರೂ ಮುಂದೆ ಅಲ್ಪಸ್ವಲ್ಪ ಕೆಡುವದು. ಜುಲೈ ೨೦ ರಿಂದ ಸಪ್ಟಂಬರ ೫ ರ ಅವಧಿಯಲ್ಲಿ ಹಾಸಿಗೆ ಹಿಡಿದು ಮಲಗುವಷ್ಟು ಪ್ರಕೃತಿ ಕೆಡುವ ಸಂಭವ ಇದೆ. ಹೃದಯದ ಇಲ್ಲವೆ ಮೂತ್ರಾಶಯದ ವಿಕಾರವಾಗುವದು. ಇಲ್ಲದಿದ್ದರೆ ಪಿಶಾಚಿಯ ಉಪದ್ರವ, ದೃಷ್ಟಿಬಾಧೆ, ಒಂದಾನೊಂದು ಭಯಂಕರ ದೃಶ್ಯ ನೋಡಿ ಮನಸ್ಸು ವ್ಯಗ್ರವಾಗುವದು ಮುಂತಾದ ಆಗಂತುಕ ಕಾರಣಗಳಿಂದ ಪ್ರಕೃತಿ ಕೆಡುವದು. ನವಂಬರದಲ್ಲಿ ಬರುವ ೧೧ ನೇ ಶನಿಯಿಂದ ಎಲ್ಲ ವಿಷಯಗಳಲ್ಲಿ ದೇಹಸುಖ ಸರ್ವಸಮೃದ್ಧವಾದರೂ ಎಪ್ರಿಲದಿಂದ ಅನುಭವಿಸಿದ ಕಷ್ಟದ ಪರಿಣಾಮವಾಗಿ ಇನ್ನೂ ಮೈ ಹಿಡಿಯಹತ್ತುವದಿಲ್ಲ. ಗುಪ್ತ ಮತ್ತು ಗೂಢ ಚಿಂತೆಯಿಂದ ಅಂತಃಕರಣ ಕುಗ್ಗಿ ಹೋಗುವದು.

ಯಾವಾಗಲೂ ಹೆಂಡತಿ ಹತ್ತಿರ ಇದ್ದರೂ ಅವಳಿಂದ ಸುಖ ಚೆನ್ನಾಗಿ ಸಿಕ್ಕುವದಿಲ್ಲ. ಕ್ಷುಲ್ಲಕ ಮಾತುಗಳಿಂದ ನಿಮ್ಮಿಬ್ಬರಲ್ಲಿ ತೀವ್ರ ಮತಭೇದವಾಗುವದು. ಉಳಿದ ಜನರೊಡನೆ ಯಾವಾಗಲೂ ಕಲಹ ಅಭದ್ರ ಮಾತುಕತೆಗಳು. ನಿಮ್ಮ ಮನಸ್ಸು ಯಾವಳೊಬ್ಬ ಪರಸ್ತ್ರೀಯಲ್ಲಿ ಸದಾ ನಿರತವಾಗಿದೆ ಎಂದೂ ನಿಮ್ಮ ಹೆಂಡತಿಗೆ ಯಾವಾಗಲೂ ಸಂಶಯ ಉಂಟಾಗುವದು. ಅದು ಸುಳ್ಳು ಎಂದೂ ಹೇಳಲಿಕ್ಕೆ ಬರುವದಿಲ್ಲ. ಎಪ್ರಿಲದಿಂದ ಬೇರೆ ಬೇರೆ ಕಾರಣಗಳಿಗಾಗಿ ಆಪ್ತರು ಬಂಧುಬಾಂಧವರು ನೆರೆಹೊರೆಯವರು ಇವರೊಡನೆ ಬಹಳ ವಿರೋಧ. ನಿಮ್ಮ ಮದುವೆ ಆಗುವದಿದ್ದರೆ ಎಪ್ರಿಲವರೆಗೆ ಪ್ರಬಲ ಯೋಗವಿದೆ. ಮುಂದೆ ಮಾತ್ರ ಅಷ್ಟು ಯೋಗ ಇರುವ

ದಿಲ್ಲ. ಪತಿಪತ್ನಿಯುರು ಪೂರ್ಣ ಅನುರೂಪ ಇದ್ದರೂ ಸ್ವತಃ ನಿಮಗೆ ಹಾಗೆ ಅನಿಸುವದಿಲ್ಲ. ನಿಮಗೆ ತಂದೆ ಇದ್ದರೆ ಅವರಿಗೆ ಡಿಸೆಂಬರದವರೆಗೆ, ತಾಯಿ ಇದ್ದರೆ ಅವಳಿಗೆ ಎಪ್ರಿಲದಿಂದ ಅಲ್ಪ ಸ್ವಲ್ಪ ಶರೀರ ಕ್ಲೇಶವಾಗುವದು. ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ಎಪ್ರೀಲ ಒಳಗಾಗಿಯೇ ಯೋಗವಿದೆ. ಅನಂತರ ಎಪ್ರೀಲ ೨೦ ರಿಂದ ಜೂನ ೩, ಸಪ್ಟೆಂಬರ ೫ ರಿಂದ ಅಕ್ಟೋಬರ ೨೨ ರ ಒಳಗಾಗಿ ವಿಶೇಷ ಪ್ರಬಲ ಯೋಗವಿದೆ. ಬೀಗರು ಸುಸ್ವಭಾವದವರು; ಗೊತ್ತುಮಾಡಿದ ದಿವಸವೇ ಎಲ್ಲ ಕಾರ್ಯಸಿದ್ಧಿಯಾಗುವದು. ಸ್ಥಾವರಾಸ್ತಿಯು ಎಪ್ರೀಲವರೆಗೆ ಬಹಳ ಹೆಚ್ಚುವದು. ರೋಖ ದ್ರವ್ಯಸಂಗ್ರಹವು ಡಿಸೆಂಬರದಿಂದ ಬಹಳ ಹೆಚ್ಚುವದು. ಅದರಂತೆ ಬಗೆಬಗೆಯು ಉತ್ತಮ ವಸ್ತುಗಳ ಸಂಗ್ರಹವು ಆಗುವದು. ಎಪ್ರೀಲದಿಂದ ಮುಂದೆ ಸ್ಥಾವರಾಸ್ತಿಯಲ್ಲಿ ಹೊಸ ಕಿಟಿಕಿಟಿ ಸುರುವಾಗುವದು. ನೌಕರಚಾಕರರು ಎಪ್ರೀಲದ ವರೆಗೆ ನಮ್ರರಾಗಿ ಪ್ರಾಮಾಣಿಕತನದಿಂದ ನಡೆಯುವರು. ಮುಂದೆ ಮಾತ್ರ ಅವರಲ್ಲಿ ಕೆಲವರು ತಲೆತಿರುಕರಂತೆ ಅಪ್ರಾಮಾಣಿಕರಾಗಿ ವರ್ತಿಸುವರು. ಮಕ್ಕಳು ಮತ್ತು ಬಂಧುವರ್ಗದವರಿಗೆ ಈ ವರ್ಷ ಬಹಳ ಉತ್ಕೃಷ್ಟ. ಆದರೆ ಮಕ್ಕಳ ಆರೋಗ್ಯಕ್ಕೆ ಮಾತ್ರ ಜನೇವರಿ ೨೮ ರಿಂದ ಮಾರ್ಚ ೧೦, ಜುಲೈ ೨೦ ರಿಂದ ಸಪ್ಟೆಂಬರ ೫ ಈ ಕಾಲದಲ್ಲಿ ಸ್ವಲ್ಪ ಕ್ಲೇಶ ಉಂಟಾಗುವದು. ಸ್ವತಃ ನಿಮಗೆ ಯಾವಾಗಲೂ ದುಃಸ್ವಪ್ನಗಳು ಬೀಳುವವು.

ಸ್ವತಂತ್ರ ಧಂದೆ ಮಾಡುವವರಿಗೆ ಮತ್ತು ನೌಕರದಾರರಿಗೆ ಕೂಡ ಡಿಸೆಂಬರದಿಂದ ವಿಪರೀತ ದ್ರವ್ಯಲಾಭವಾಗುವದು. ಎಪ್ರೀಲವರೆಗೆ ಉದ್ಯೋಗಸ್ಥರಿಗೆ, ಅನಂತರ ನೌಕರರಿಗೆ ಬಹಳ ಲಾಭ. ಬೌದ್ಧಿಕ ಉದ್ಯೋಗ ಮಾಡುವವರ ಕೀರ್ತಿ ಎಲ್ಲೆಡೆ ಹಬ್ಬುವದು. ಕಾರ್ಯಕೌಶಲದ ಪ್ರಶಂಸೆ ಎಲ್ಲ ಕಡೆಗಾಗುವದು. ಯಾವದೊಂದು ವಸ್ತುವಿನ ಧಂದೆ ಮಾಡುವವರ ಪತ್ತು ಪ್ರತಿಷ್ಠೆ ದಿನದಿನಕ್ಕೆ ಹೆಚ್ಚಿ ಮೊದಲು ಒಳ್ಳೆಸ್ಥಿತಿಯಲ್ಲಿರುವ ವ್ಯಕ್ತಿಯು ಕೂಡ ಈಗ ಅರ್ಜನ ಮಾಡಹತ್ತುವದು. ಧಂಥೆ ಇಲ್ಲವೆ ನೌಕರಿ ಏನೇ ಇದ್ದರೂ ಮೇ ೧ ರಿಂದ ಜೂನ ೨೦, ಜುಲೈ ೨೬ ರಿಂದ ಅಗಸ್ಟ ೨೩ ಮತ್ತು ಸಪ್ಟೆಂಬರ ೧೬ ರಿಂದ ಅಕ್ಟೋಬರ ೧೩ ಈ ಕಾಲ ಲಾಭಕ್ಕೆ ಬಹಳ ಅನುಕೂಲ. ನೌಕರರಿಗೆ ಹೆಚ್ಚಿನ ಗ್ರೇಡ ಸಿಗುವದಿದ್ದರೆ ಅದು ಮೇ ೧ ರಿಂದ ೧೮, ಜೂನ ೩ ರಿಂದ ೨೧, ಅಗಸ್ಟ ೨೬ ರಿಂದ ಅಕ್ಟೋಬರ ೨೩ ಈ ಅವಧಿಯಲ್ಲಿ ಯಾವಾಗಾದರೂ ಸಿಕ್ಕುವದು. ಡಿಸೆಂಬರ ೧೯ ರಿಂದ ಜನೇವರಿ ೨೮, ಎಪ್ರೀಲ ೨೦ ರಿಂದ ಜೂನ ೩ ಮತ್ತು ಸಪ್ಟೆಂಬರ ೫ ರಿಂದ ಅಕ್ಟೋಬರ ೨೨ ಈ ಅವಧಿಯಲ್ಲಿ ಯೋಗ್ಯ ಸ್ಥಳಕ್ಕೆ ಬದಲಿ ಆಗುವದು. ವರಿಷ್ಠರು ಯಾವಾಗಲೂ ಸುಪ್ರಸನ್ನರಾಗಿರುವರು. ಅನೇಕ ದೂರ ದೂರದ ಪ್ರವಾಸ; ಅದರ ಉದ್ದೇಶ ಪೂರ್ಣ ಸಾಧಿಸುವದು. ಮಹತ್ವದ ಲೇಖನ ಕೆಲಸಗಳು ವ್ಯವಸ್ಥಿತವಾಗಿ ಮುಗಿಯುವವು. ಮಿತ್ರರು ಮಾತ್ರ ಆದರ ಮಾಡದೆ ದ್ವೇಷದಿಂದ ವರ್ತಿಸುವರು. ಧರ್ಮಾಭಿಮಾನದ ಒಂದೆರಡು ಕೃತ್ಯಗಳಾಗುವವು. ಸ್ವಭಾವದಲ್ಲಿ ಸಿಟ್ಟು, ಮತು ಕರ್ತೃತ್ವಶಕ್ತಿ ಮೇಲಿಂದ ಮೇಲೆ ಪ್ರತಿಬಿಂಬಿತ ಆಗುವದು.

ಖಾಸಗಿ ಸ್ಪರ್ಧೆಗಿಂತ ಕೋರ್ಟು ಕಚೇರಿಗಳಲ್ಲಿ ನಡೆದ ವಾದವಿವಾದಗಳಲ್ಲಿ ಈ ವರ್ಷ ಹೆಚ್ಚು ಯಶ. ಅದರಲ್ಲಿಯೂ ಜನವರಿ ೩ ರಿಂದ ೨೦, ಫೆಬ್ರುವರಿ ೫ ರಿಂದ ೨೬, ಮೇ ೧ ರಿಂದ ೧೮, ಜೂನ ೩ ರಿಂದ ೨೧, ಅಗಸ್ಟ ೨೬ ರಿಂದ ಸಪ್ಟೆಂಬರ ೧೩ ಮತ್ತು ಸಪ್ಟೆಂಬರ ೨೯ ರಿಂದ ಅಕ್ಟೋಬರ ೨೩ ಈ ಕಾಲ ಹೆಚ್ಚು ಅನುಕೂಲ. ಖಾಸಗಿಸ್ಪರ್ಧೆಯಲ್ಲಿ ಗಂಡಸರಿಗಿಂತ ಒಬ್ಬ ಹೆಂಗಸೇ ಅಗ್ರಣಿ ಆಗುವಳು.

ಗರ್ಭವತಿಯರು ಎಪ್ರೀಲ ಒಳಗಾಗಿ ಹಡೆದರೆ ಏನೂ ಕಷ್ಟವಿಲ್ಲದೆ ಹಡೆಯುವರು. ಬಹುಶಃ ಪುತ್ರರತ್ನವಾಗುವದು. ಎಪ್ರಿಲದಿಂದ ಮುಂದೆ ಹಡೆಯುವವರಿಗೆ ಬಹುಶಃ ಹೆಣ್ಣು ಹುಟ್ಟುವದರಿಂದ ಮೋರೆ ಸಪ್ಪಗಾಗುವದು. ಪ್ರಸೂತಿಕಷ್ಟವೂ ಸ್ವಲ್ಪ ಆಗುವದರಿಂದ ಒಟ್ಟಾರೆ ಬಾಣಂತಿತನ ಅಷ್ಟೊಂದು ಮೈಹಿಡಿಯುವದಿಲ್ಲ.

ಯಾರ ಪರೀಕ್ಷೆ ಎಪ್ರಿಲ ಒಳಗಾಗಿ ಮತ್ತು ಜೂನ ೩ ರಿಂದ ಜುಲೈ ೨೦ ಮತ್ತು ಸಪ್ಟೆಂಬರ ೫ ರಿಂದ ಅಕ್ಟೋಬರ ೨೨ ಈ ಅವಧಿಯಲ್ಲಿ ಆಗುವದೋ ಅವರಿಗೆ ಯಶಃಪ್ರಾಪ್ತಿಯ ಖಾತ್ರಿ ಇದ್ದಷ್ಟು ಉಳಿದ ಅವಧಿಯಲ್ಲಿ ಇರುವದಿಲ್ಲ.

## ಮಕರ

ಒಟ್ಟಾರೆ ಈ ವರ್ಷ ಈ ರಾಶಿಯುವರಿಗೆ ಕಳೆದ ವರ್ಷಕ್ಕಿಂತ ಹೆಚ್ಚು ಉತ್ಕರ್ಷವಾಗುವದು. ಎಂಬಲ್ಲಿ ಸಂದೇಹವಿಲ್ಲ ಎಂಬುದು ಮುಂದಿನ ವಿವೇಚನೆಯಿಂದ ಗೊತ್ತಾಗುವದು.

ಈ ರಾಶಿಯುವರು ತಮ್ಮ ಆರೋಗ್ಯದ ಬಗ್ಗೆ ಯಾವಾಗಲೂ ಕಾಳಜಿ ತೆಗೆದುಕೊಳ್ಳಬೇಕಾದುದು ಅವಶ್ಯ. ಅದರಲ್ಲಿಯೂ ಎಪ್ರಿಲ ೬ ರ ವರೆಗೆ ವಿಶೇಷ ಕಾಳಜಿ ತೆಗೆದುಕೊಳ್ಳಬೇಕು. ಬ್ಲಡ್ ಪ್ರೆಶ್ಶರ ಇದ್ದವರು ಹೆಚ್ಚು ಜಪ್ಪಿಸಬೇಕು. ಅದರಂತೆ ಅಪರಾತ್ರಿಯಲ್ಲಿ ನಿರ್ಜನ ಸ್ಥಳದಲ್ಲಿ ಒಬ್ಬೊಂಟಿಗರಾಗಿ ಈ ವರ್ಷ ಎಂದೂ ಅಡ್ಡಾಡಬೇಡಿರಿ. ಹೊಟ್ಟೆಶೂಲಿಯಿದ್ದವರು ಡಿಸೆಂಬರ ೧೯ ರಿಂದ ಜನೆವರಿ ೨೮ ಮತ್ತು ಜುಲೈ ೧೪ ರಿಂದ ಸಪ್ಟೆಂಬರ ೧೫ ಈ ಕಾಲದಲ್ಲಿ ಆಹಾರವಿಹಾರಗಳಲ್ಲಿ ಬಹಳ ಪಥ್ಯದಿಂದ ಇರಬೇಕು. ದೇಹಸುಖಕ್ಕಾಗಿ ಮಾಡಲ್ಪಡುವ ಬಾಹ್ಯೋಪಚಾರಗಳಿಂದ ನವೆಂಬರ ೫ ರಿಂದಲೆ ಅನುಕೂಲತೆ ಹೆಚ್ಚಹತ್ತುವದು. ಕೌಟುಂಬಿಕ ಉತ್ಕರ್ಷದಲ್ಲಿ ಸ್ಥೈರ್ಯವನ್ನುಂಟು ಮಾಡುವಂತಹ ಘಟನೆಗಳು ಎಪ್ರಿಲದಿಂದ ಒಂದರ ಹಿಂದೊಂದರಂತೆ ಸಂಭವಿಸಹತ್ತುವವು. ಮಾನಸಿಕ ಸುಖ ಅನುಕೂಲವುಳಿದು ಕೆಲಸಮಯ ಸುಂದರ ಮನೋರಾಜ್ಯವನ್ನು ಕಲ್ಪಿಸುವಂಥ ಸುಖ ಸ್ವಪ್ನಗಳು ಬೀಳಹತ್ತುವವು.

ಹೆಂಡತಿ ಮತ್ತು ನಿಮ್ಮದು ಚೆನ್ನಾಗಿ ಕೂಡಿ
ನಡೆಯುವದು. ಪರಸ್ಪರ ಸಹವಾಸದಲ್ಲಿ ಸಹಸಾ
ಅಂತರಬೀಳುವದಿಲ್ಲ. ಕದಾಚಿತ್ ಕೆಲದಿನ ವಿರಹ
ವಾದರೆ ಅದಕ್ಕೆ ನಿಮ್ಮ ಪೂರ್ಣ ಅನುಮತಿ ದೊರೆ
ಯುವದು. ಆದರೂ ಈ ವರ್ಷ ಅವಳ ಆರೋಗ್ಯ
ಅಷ್ಟೊಂದು ಅನುಕೂಲವುಳಿಯುವದಿಲ್ಲ. ನವಂ
ಬರದಲ್ಲಿ ಅಲ್ಪಸ್ವಲ್ಪ ಕೆಡುತ್ತ ನಡೆದು
ಡಿಸೆಂಬರ ೧೯ ರಿಂದ ಜನೆವರಿ ೨೮, ಮಾರ್ಚ ೧೦
ರಿಂದ ಎಪ್ರಿಲ ೨೦ ಮತ್ತು ಜುಲೈ ೨೦ ರಿಂದ
ಸಪ್ಟಂಬರ ೫ರ ಅವಧಿಯಲ್ಲಿ ಅದು ಹೆಚ್ಚು ಕೆಡುವ
ಸಂಭವವಿದೆ. ಯಾರ ಜನ್ಮಕುಂಡಲಿಯಲ್ಲಿ
ಸಪ್ತಮ ಅರ್ಥಾತ್ ಜಾಯಾಸ್ಥಾನದಲ್ಲಿ ಕೇತು,
ರಾಹು ಇಲ್ಲವೆ ಮಂಗಳವಿದೆಯೊ ಅಂಥವರಿಗೆ
ಕದಾಚಿತ್ ಅವಳ ವಿಯೋಗವೂ ಅಗಬಹುದು.
ನಿಮ್ಮ ಮದುವೆಯಾಗುವದಿದ್ದರೆ ಎಪ್ರಿಲದೊಳಗೆ
ಆಗುವದು. ಮೊದಲು ಕಠಿನವಿದ್ದಷ್ಟು ಮುಂದೆ
ಅಷ್ಟು ಸುಲಭಸಾಧ್ಯವಾಗುವದು. ವಧೂವರ
ಪರಸ್ಪರ ಅನುಕೂಲ ದೊರೆಯುವರು. ಉಳಿದ
ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ.
ಕುಟುಂಬದಲ್ಲಿ ಮಾತ್ರ ಪ್ರತಿಯೊಬ್ಬರು ತಮ
ತಮ್ಮ ವಯಸ್ಸಿಗನುಗುಣವಾಗಿ ಉತ್ಕರ್ಷ ಹೊಂದು
ವರು. ಎಲ್ಲರೊಡನೆಯೂ ನಿಮ್ಮದು ಚೆನ್ನಾಗಿ
ಕೂಡಿ ನಡೆಯುವದು ನಿಜ. ಆದರೆ ಬಂಧುವರ್ಗದ
ವರೊಡನೆ ಸ್ವಲ್ಪ ವಿರೋಧವುಂಟಾಗುವ ಸಂಭವ
ವಿದೆ. ಅದರಂತೆಯೇ ಆಪ್ತರಲ್ಲಿ ಕೆಲ ಜನರೊಡನೆ
ಕಲಹವೆದ್ದು ಬಹಳ ದಿನ ಉಳಿಯುವಷ್ಟು ವಿತು
ಷ್ಟತೆ ಉಂಟಾಗುವದು. ಮಕ್ಕಳಲ್ಲಿ ಯಾರದಾದರೂ
ವಿವಾಹ ಮಾಡುವದು ಗೊತ್ತಾಗಿದ್ದರೆ, ಎಪ್ರಿಲ
ದೊಳಗಾಗಿಯೇ ಬಲು ಬೇಗ ಕೂಡಿ ಬಂದು
ನಿರ್ವಿಘ್ನದಿಂದ ಆಗುವ ಪ್ರಬಲ ಯೋಗವಿದೆ.
ಸೊಸೆ ಇಲ್ಲವೆ ಅಳಿಯ ಬಹಳ ಅನು ಕೂಲ ದೊರೆ
ಯುವರು. ಸ್ಥಾವರ ಆಸ್ತಿ ಸ್ವಲ್ಪ ಹೆಚ್ಚಿದರೆ
ಜಂಗಮ ಆಸ್ತಿ ಮಾತ್ರ ಬಹಳ ಹೆಚ್ಚುವದು.
ರೋಖ ಹಣದ ಸಂಗ್ರಹವೂ ಹೆಚ್ಚು. ಊರಲ್ಲಿ
ಇಲ್ಲವೆ ಪ್ರಾಂತದಲ್ಲಿ ನಿಮ್ಮ ಹೆಸರು ಮತ್ತು
ಕರ್ತೃತ್ವಗಳ ಗಾಯನ ಮೊದಲಿಗಿಂತ ಬಹಳ
ಹೆಚ್ಚುವದು. ವಾಹನಸುಖ ಮಾತ್ರ ಅನುಕೂಲ
ದೊರೆಯದು. ಜೂನ ೩ ರಿಂದ ಜುಲೈ ೨೦
ಮತ್ತು ಸಪ್ಟಂಬರ ೫ ರಿಂದ ಅಕ್ಟೋಬರ ೨೨ ಈ
ಅವಧಿಯಲ್ಲಿ ಹೊಸ ವಾಹನವಿದ್ದರೂ ಅದು
ಕೆಟ್ಟುಹೋಗುವದು. ನೋಕರಚಾಕರರು ವ್ಯವ
ಸ್ಥಿತ ರೀತಿಯಿಂದ ವರ್ತಿಸುವರು. ಆದರೆ
ಮಾರ್ಚ ೧೦ ರಿಂದ ಎಪ್ರಿಲ ೨೦ ರ ವರೆಗೆ ಒಬ್ಬಿ
ಬ್ಬರು ನೋಕರಿ ಬಿಡಬಹುದು. ಧಂದೆ ಕೂಲಿ
ಮಾಡುವವರಿಗೆ ಈ ವರ್ಷ ಬಹಳ ಉತ್ತಮವಿದೆ.
ಈ ರಾಶಿಯ ಸ್ವಾಮಿಯಾಗಿರುವ ಶನಿಯು ನವಂ
ಬರದಲ್ಲಿ ದಶಮ ಅಂದರೆ ಕರ್ಮಸ್ಥಾನದಲ್ಲಿ
ಮತ್ತು ತನ್ನ ಉಚ್ಚರಾಶಿಯಾದ ತುಲಾದಲ್ಲಿ
ಬರುವದರಿಂದ ಅಂದಿನಿಂದ ಧಂದೆಯಲ್ಲಿ ಅನ್ನಿರಿ,
ನೋಕರಿಯಲ್ಲಿ ಅನ್ನಿರಿ ಒಳ್ಳೆ ಉತ್ಕರ್ಷ ಮತ್ತು
ಲಾಭ. ಉದ್ಯೋಗ ಧಂದೆ ಮನಸೋಕ್ತ ಪ್ರಸಾರ
ಹೊಂದಿ ಅದರಲ್ಲಿಯ ಪ್ರಾಮಾಣಿಕತೆ ಮತ್ತು
ಪ್ರಾವೀಣ್ಯ ಎಲ್ಲೆಡೆ ಪ್ರಖ್ಯಾತವಾಗುವದು.
ಬುದ್ಧಿಜೀವಿಗಳ ಉದ್ಯೋಗ ಧಂದೆಯೂ ಬಹಳ
ಅಭಿವೃದ್ಧಿಹೊಂದಿ ಬುದ್ಧಿಯ ತೇಜಸ್ಸು ಬಹಳ
ಮಟ್ಟಿಗೆ ಹೊಳೆಯಹತ್ತುವದು. ಎಪ್ರಿಲದಿಂದ
ಮುಂದೆ ಹತ್ತುಪಟ್ಟು, ನೂರುಪಟ್ಟು ದ್ರವ್ಯ ಲಾಭ
ವಾಗಹತ್ತುವದು. ನೋಕರರಿಗೆ ವರಿಷ್ಠರ ಮರ್ಜಿ
ಬಹಳಾಗಿ ನಿಮ್ಮ ಪ್ರತಿಯೊಂದು ಕೆಲಸದಲ್ಲಿ
ಅವರು ಕೆಲಮಟ್ಟಿಗೆ ನಿಮ್ಮ ಪ್ರಶಂಸೆಮಾಡುವರು.
ನಿಮ್ಮ ಸಂಬರು ಇಲ್ಲದಿದ್ದರೂ ಯೋಗ್ಯತೆಯಿಲ್ಲ
ದಿದ್ದರೂ ಎಷ್ಟೋ ಸಲ ಮೇಲಿನ ಗ್ರೇಡು ದೊರೆ
ಯುವದು. ಎಪ್ರಿಲದೊಳಗಾಗಿ ಬದಲಿಯಾದರೆ
ಲಾಭಕ್ಕೆ ಮತ್ತು ವರ್ಚಸ್ಸಿಗೆ ಅನುಕೂಲ. ಆದರೆ
ಕೌಟುಂಬಿಕ ದೃಷ್ಟಿಯಿಂದ ಅಲ್ಪ ಸ್ವಲ್ಪ ಅನಾನು
ಕೂಲ ಸ್ಥಳಕ್ಕೆ ಆಗುವದು. ಎಪ್ರಿಲದಿಂದ ಮುಂದೆ
ವರ್ಗವಾದರೆ ಎಲ್ಲ ರೀತಿಯಿಂದ ಅನುಕೂಲ
ಸ್ಥಳಕ್ಕೆ ಆಗುವದು. ನವಂಬರ ೮ ರಿಂದ ಮಾರ್ಚ
೧೦, ಎಪ್ರಿಲ ೨೦ ರಿಂದ ಜೂನ ೩ ಮತ್ತು ಸಪ್ಟಂ
ಬರ ೫ ರಿಂದ ಮುಂದೆ ಬಹಳ ಲಾಭ ದೊರೆಯುವ
ಸಂಭವವಿದೆ. ಹಲವರ ರಾಜಕೀಯ ಮಹತ್ವ
ಹೆಚ್ಚಿದರೆ ಬೇರೆ ಹಲವರಿಗೆ ಸಮಾಜದಲ್ಲಿ ಅಗ್ರ
ಸ್ಥಾನ ದೊರೆಯುವದು. ಲಾಭದ ಪ್ರಮಾಣವನ್ನ
ನುಸರಿಸಿ ವೆಚ್ಚದ ಪ್ರಮಾಣ ಹೆಚ್ಚಿದರೂ ಯೋಗ್ಯ
ಮತ್ತು ಹೇತುಸಾಧ್ಯವಾಗುವ ಕೆಲಸಗಳಲ್ಲಿ ಆಗು
ವದರಿಂದ ಆ ಬಗ್ಗೆ ಮನಸ್ಸು ವ್ಯಗ್ರವಾಗದೆ
ಸಮಾಧಾನವೇ ಎನಿಸುವದು. ಹಿಂದಿನ ಕೊಡ
ತಕ್ಕೊಳ್ಳುವ ತೊಂದರೆಯೆಲ್ಲ ಮಾಯವಾಗುವದು.
ಎಪ್ರಿಲದಿಂದ ಒಂದೆರಡು ಸಲವಾದರೂ ದೂರದ
ಪ್ರವಾಸ ಕೈಕೊಳ್ಳುವಿರಿ. ಅದರಲ್ಲಿಯ ಉದ್ದೇಶ
ವಂತೂ ನಿಮ್ಮಅಪೇಕ್ಷೆಮೀರಿ ಸಾಧ್ಯವಾಗುವದು.

ವಾದವಿವಾದಗಳಲ್ಲಿ ಮತ್ತು ಸ್ಪರ್ಧೆಯಲ್ಲಿ
ಎಪ್ರಿಲವರೆಗೆ ಶತ್ರುಗಳಿಗೆ, ಅನಂತರ ನಿಮಗೆ
ಹೆಚ್ಚು ಬಲ ಬರುವದು. ಅವುಗಳಲ್ಲಿ ಕೆಲವು
ಒಡಂಬಡಿಕೆಯಿಂದ ನಿರ್ಣಯಿಸಲ್ಪಡುವವು.
ಜೂನ ೩ ರಿಂದ ಜುಲೈ ೨೦ರ ವರೆಗಿನ ಕಾಲದಲ್ಲಿ
ಪ್ರತಿಪಕ್ಷಿಗಳ ಮೇಲೆ ಸಂಪೂರ್ಣ ವಿಜಯ
ಸಂಪಾದಿಸುವಿರಿ.

ಈ ರಾಶಿಯವರು ಗರ್ಭವತಿಯರಾಗಿದ್ದು
ಎಪ್ರಿಲ ೬ ರೊಳಗೆ ಹಡೆದರೆ ಸ್ವಲ್ಪ ಕಷ್ಟಪಡ
ಬೇಕಾಗುವದು. ಆದರೆ ಬಹುಶಃ ಗಂಡು
ಹುಟ್ಟುವವು. ಮತ್ತು ಅನಂತರ ಹಡೆದವರಿಗೆ
ಪ್ರಸೂತಿಕಷ್ಟ ಸ್ವಲ್ಪವೂ ಆಗುವದಿಲ್ಲ. ಬಹಳ
ಮಟ್ಟಿಗೆ ಕನ್ಯಾರತ್ನ ಹುಟ್ಟುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಎಪ್ರಿಲದೊಳ
ಗಾಗಿ ಆಗುವದೋ ಅವರ ಯಶಸ್ವಿನ ಬಗ್ಗೆ ಸ್ವಲ್ಪ
ಸಂಶಯವೇ ಇದೆ. ಎಪ್ರಿಲದಿಂದ ಮುಂದೆ ಯಾರ
ಪರೀಕ್ಷೆ ಆಗುವದೋ ಅವರು ಮಾತ್ರ ನಿಶ್ಚಯ
ವಾಗಿ ಯಶಸ್ಸು ಸಂಪಾದಿಸುವರು.

## ಕುಂಭ

ಈ ರಾಶಿಯುವರಿಗೆ ಈ ವರ್ಷ ಅನೇಕ ವಿಷಯು
ಗಳಲ್ಲಿ ಯಶಸ್ಸು, ಬಲ ಮತ್ತು ಪ್ರಜ್ಞೆ
ಬಹಳ ಮಟ್ಟಿಗೆ ಹೆಚ್ಚುವದು ನಿಶ್ಚಿತ ಎಂಬುದನ್ನು
ಕೆಳಗಿನ ವಿವರಣೆಗಳಿಂದ ತಿಳಿಯುಬಹುದು.

ಕಳೆದ ಎರಡೂಕಾಲು ವರ್ಷಗಳಿಂದ ಈ
ರಾಶಿಯುವರಿಗೆ ಕಷ್ಟವನ್ನು ಕೊಡುತ್ತಿದ್ದ ೮ ನೇ
ಶನಿ ನವಂಬರ ೫ ರಿಂದ ೯ನೆಯು ಸ್ಥಾನಕ್ಕೆ ಅಂದರೆ
ತನ್ನ ಉಚ್ಚರಾಶಿಯಾದ ತುಲಾರಾಶಿಗೆ ಬರುವದ
ರಿಂದ ಈ ರಾಶಿಯುವರಿಗೆ ಆರೋಗ್ಯ ಬಹಳ
ಮಟ್ಟಿಗೆ ಸುಧಾರಿಸಿ ಒಂದು ಸುಂಠಿಬೇರು ಕೂಡಾ
ಬೇಕಾಗುವದಿಲ್ಲ. ಒಟ್ಟಿಗೆ ಈ ತಾರೀಖಿನಿಂದ
ಆರೋಗ್ಯ ಸುಖ ಬಹಳ ದೊರೆಯುವದು.
ಉತ್ಸಾಹವನ್ನು ಹೆಚ್ಚಿಸುವಂತಹ ಅನೇಕ ಸಂಗತಿ
ಗಳು ಒಂದೇ ಸವನೆ ಸಂಭವಿಸಹತ್ತುವದರಿಂದ
ಹರ್ಷ ಹೆಚ್ಚಿ ನಿಮ್ಮ ವರ್ತನೆಯಲ್ಲಿ ಯಾವಾಗಾದ
ರೊಮ್ಮೆ ಉದ್ದಾಮತೆನ ಕಂಡುಬರುವದು. ದೇಹ
ಸುಖ ಹೀಗೆ ದೊರೆಯುತ್ತಾ ಹೋದರೂ ಎಪ್ರಿಲ
ನಂತರ ಕ್ಷುಲ್ಲಕ ಕಾರಣಗಳಿಗಾಗಿಯೂ ವಿಪ
ರೀತ ತರ್ಕವಿತರ್ಕ ಮಾಡಿ ಖೇದಪಡಬೇಕಾದ
ಚಟ ಬೀಳುವದು. ಎರಡನೆಯುವರಿಗಾದ
ಉತ್ಕರ್ಷದ ಬಗ್ಗೆ ಕ್ಷಣಮಾತ್ರವಾದರೂ ಅಸೂಯೆ
ಎನಿಸುವದು.

ಎಪ್ರಿಲ ೬ ರ ನಂತರ ಸ್ತ್ರೀಸುಖದ ಬಗ್ಗೆ
ಎಂದೂ ತಕರಾರು ಮಾಡುವ ಅವಶ್ಯಕತೆ ಬೀಳುವ
ದಿಲ್ಲ. ಅನಂತರ ಮಾತ್ರ ಅವಳ ಪ್ರಕೃತಿ ಕೆಡುವ
ಸಂಭವ ಇದೆ. ಅಲ್ಲದೆ ಯಾವದೊಂದು ಮನೆ
ತನದ ಕೆಲಸದಲ್ಲಿ ನಿಮ್ಮನಿಮ್ಮಲ್ಲಿ ಮತಭೇದವಾಗಿ
ಪರಸ್ಪರ ಬಹಳ ದೋಷಾರೋಪ ಮಾಡುವಿರಿ.
ಆದರೆ ಪರಸ್ಪರರಲ್ಲಿದ್ದ ಆದರದಲ್ಲಿ ನ್ಯೂನತೆ
ಬೀಳುವದಿಲ್ಲ. ನಿಮ್ಮ ಮದುವೆ ಆಗುವದಿದ್ದರೆ
ಎಪ್ರಿಲ ೬ ರೊಳಗಾಗಿ ಬಾಸಿಂಗಬಲ ಕೂಡಿ
ಬರುವಷ್ಟು ಮುಂದೆ ಬರುವದಿಲ್ಲ. ಮದುವೆ ಕೂಡಿ
ಬಂದರೂ ಕೊರಳಲ್ಲಿ ಮಾಲೆ ಬೀಳಬೇಕಾದರೆ
ಹದಿನೆಂಟು ಅಡಚಣೆಗಳು ಬಂದು ಮನಸ್ಸಿಗೆ
ಬೇಜಾರಾಗುವದು. ಮದುವೆ ಎಂದೇ ಆದರೂ
ವಧೂವರರು ಅನುರೂಪ ಇರುವರು. ಮಕ್ಕಳಲ್ಲಿ
ಒಬ್ಬಿಬ್ಬರು ಕನಸು ಮನಸ್ಸಿನಲ್ಲಿ ಇಲ್ಲದೆ ಉತ್ಕರ್ಷ
ಹೊಂದುವರು. ಮತ್ತು ಅವರು ವಚನದಂತೆ
ನಡೆವ ನಟನೆ ಮಾಡುವರು. ಅವರಲ್ಲಿ ಯಾರದಾ
ದರೂ ಮದುವೆ ಆಗುವದಿದ್ದರೆ ಎಪ್ರಿಲದೊಳ
ಗಾಗಿಯೇ ಸುಲಭವಾಗಿ ಆಗುವ ಯೋಗವಿದೆ.
ಬೀಗರು ನಿಮಗಿಂತ ಶ್ರೀಮಂತರು ಸಿಗುವರು.
ಸೊಸೆ ಇಲ್ಲವೆ ಅಳಿಯ ಒಳ್ಳೇ ಜಾಣ ಮತ್ತು
ಸುಂದರ ಇರುವರು. ಮನೆ, ಹೊಲ ಮೊದಲಾದ

ಸ್ಥಾವರ ಆಸ್ತಿಯನ್ನು ಮಾಡುವ ಯೋಗವು ಅನಾಯಾಸವಾಗಿ ಮತ್ತು ಸ್ವಲ್ಪೇ ಹಣದಲ್ಲಿ ಇದೆ. ಇಂಥ ಯೋಗವು ವರ್ಷಾರಂಭದಿಂದ ನವೆಂಬರ ೧೧ ರ ವರೆಗೆ, ಅನಂತರ ಡಿಸೆಂಬರ ೩೦ ರಿಂದ ಮೇ ೨೮ ಮತ್ತು ಜೂನ ೨ ರಿಂದ ಜುಲೈ ೨೭ ರ ವರೆಗಿನ ಅವಧಿಯಲ್ಲಿ ಬಹುಶಃ ಒದಗಿಬರುವದು. ವಸ್ತ್ರಾಲಂಕಾರ ಮೊದಲಾದ ಉಚ್ಚವಸ್ತುಗಳನ್ನು ಕೊಳ್ಳುವಿರಿ. ಆಪ್ತೇಷ್ಟರು ನಿಮ್ಮ ವೈಭವವನ್ನು ನೋಡಿ ಅಂಜಿ ಇಲ್ಲವೆ ಭ್ರಾಂತಿಯಿಂದ ನಿಮ್ಮೊಡನೆ ಪ್ರೀತಿಯಿಂದ ಇರುವರು. ಯಾಂತ್ರಿಕ ಇಲ್ಲವೆ ಚತುಷ್ಪಾದ ವಾಹನಗಳ ಸುಖ ಬೇಕಾದಷ್ಟು ಸಿಕ್ಕುವದು. ಖರೀದಿ ಮಾಡಿದರೆ ಅವು ಬಹಳ ಒಳ್ಳೆಯವು ದೊರೆಯುವವು. ಮನೆಯಲ್ಲಿಯ ನೋಕರರು ಆಳುಗಳು ತಮ್ಮತಮ್ಮ ಕೆಲಸಗಳಲ್ಲಿ ತತ್ಪರರಾಗಿ ನಿಮ್ಮೊಡನೆ ಯೋಗ್ಯರೀತಿಯಿಂದ ವರ್ತಿಸುವರು. ಎಪ್ರಿಲದಿಂದ ಮುಂದೆ ಬೀಳುವ ಸ್ವಪ್ನಗಳು ಶುಭಸೂಚಕ ಇರುವವು. ಮರೆತು ಹೋದ ಗುರುತಿನ ಜನರ ಭೆಟ್ಟಿ ಆಗಿ ಆ ಸ್ನೇಹ ಬೆಳೆಯಹತ್ತುವದು. ನಿದ್ರೆ ಚನ್ನಾಗಿ ಹತ್ತುವದು.

ಧಂದೆ ಕೂಲಿಗಾರರಿಗೆ ಈ ವರ್ಷ ನವಂಬರ ೫ ರಿಂದ ಪ್ರಗತಿ, ಪ್ರತಿಷ್ಠೆ ಮತ್ತು ಲಾಭ ಈ ತ್ರಿವೇಣೀಸಂಗಮವು ಅತಿ ಉತ್ತಮವಿದ್ದು ಅದರಿಂದ ಪುರುಷಾರ್ಥಕ್ಕೆ ಅನುಕೂಲವಾದ ಅನೇಕ ಸಂಗತಿಗಳು ಸಂಭವಿಸುವವು. ಎಪ್ರಿಲ ೬ರ ವರೆಗೆ ದ್ರವ್ಯಲಾಭ ಬೇಕಾದಷ್ಟು ಸಿಕ್ಕುವದು. ಅನಂತರವಾದರೂ ಅದಕ್ಕೇನೂ ಕೊರತೆ ಬೀಳುವದಿಲ್ಲ. ಆದರೆ ಗೊತ್ತುಮಾಡಿದ ವೇಳೆಗಿಂತ ಸ್ವಲ್ಪ ತಡಮಾಡಿ ಸಿಗುವದು. ವರಿಷ್ಠರು ಇಲ್ಲವೆ ಒಡೆಯರೇ ಆಳುಗಳ ಮರ್ಜಿ ಸಂಭಾಳಿಸಬೇಕಾಗುವದು. ಹಕ್ಕುಗಳಿಗಿಂತ ಹೆಚ್ಚಿನ ಗ್ರೇಡು ಸಿಕ್ಕು ಬದಲಿ ಆಗುವದು. ನಿಮ್ಮ ಮನಸ್ಸಿಗೆ ಬಂದ ಸ್ಥಳಕ್ಕೆ ನೀವು ಹೋಗುವಿರಿ. ವಿಶೇಷ ಹೊಣೆಗಾರಿಕೆಯ ಕೆಲಸದ ಮೇಲೆ ನೇಮಕವಾಗುವದರಿಂದ ಅದಕ್ಕೆ ಸಂಬಂಧಿಸಿದ ಜನರ ಮೇಲೆ ನಿಮ್ಮ ವರ್ಚಸ್ಸು ಬೀಳುವದು. ಉದ್ಯೋಗ ಮಾಡುವವರ ಪತ್ತು ಮತ್ತು ಲೌಕಿಕ ಹೆಚ್ಚುವಂತಹ ದೊಡ್ಡ ಜನರ ಸಹವಾಸ ಅನಾಯಾಸವಾಗಿ ಸಿಕ್ಕು ನಿಮ್ಮ ಉದ್ಯೋಗದ ಬಗ್ಗೆ ಎಲ್ಲೆಲ್ಲಿಯೂ ಪ್ರಶಂಸೆ ನಡೆಯುವದು. ನಿಮ್ಮ ಮನಸ್ಸು ಪ್ರಸನ್ನವಾಗುವದು. ಹುರುಪು ಹೆಚ್ಚಿ ಅನೇಕರಿಗೆ ಸಹಾಯ ಮಾಡುವಿರಿ. ಉದ್ರಿ ಮಾಡಿದ್ದರೆ ಕೈಗಡ ಇಲ್ಲವೆ ಸಾಲಾ ತೆಗೆದಿದ್ದರೆ ಅದನ್ನೆಲ್ಲ ಬಹಳ ಮಟ್ಟಿಗೆ ತೀರಿಸುವಿರಿ. ರಾಜಕೀಯ ಇಲ್ಲವೆ ಸಾಮಾಜಿಕ ದರ್ಜೆ ಹೆಚ್ಚುವದು. ಬುದ್ಧಿಜೀವಿ ಉದ್ಯೋಗದವರಿಗೆ ಸರಸ್ವತಿಯಂತೆ ಲಕ್ಷ್ಮಿಯೂ ಪ್ರಸನ್ನಳಾದದ್ದು ಕಂಡುಬರುವದು. ಲಾಟ್ರಿ, ಸಟ್ಟಾ, ರೇಸು, ವಾರ್ಸಾ ಸಿಗುವದು, ಭೂಮಿಯಲ್ಲಿ ಹೂಳಿಟ್ಟ ದ್ರವ್ಯ ಸಿಗುವದು, ಮೊದಲಾದ ಗುಪ್ತ ಲಾಭಗಳು ಈ ವರ್ಷ ಅಲ್ಪಸ್ವಲ್ಪ ಆಗುವವು. ಮನೋರಂಜನೆಯ ಕಲಾವಿದರಿಗೆ ಈ ವರ್ಷ ಕೀರ್ತಿ ದೊರೆತು ಹಣವೂ ತೀರದಷ್ಟು ಸಿಗುವದು. ಸಾಮಾನ್ಯವಾಗಿ ನವಂಬರ ೧೧ ರಿಂದ ಡಿಸೆಂಬರ ೫, ಜನೆವರಿ ೧ ರಿಂದ ಮೇ ೨೮, ಜೂನ ೪ ರಿಂದ ಅಗಸ್ಟ ೨೩ ಈ ಅವಧಿಯಲ್ಲಿ ಮೇಲೆ ಹೇಳಿದ ಸಂಗತಿಗಳಿಗೆಲ್ಲ ವಿಶೇಷಾನುಕೂಲ. ದೂರ ದೂರ ಪ್ರವಾಸ ಕೈಕೊಂಡು ಹೊಸ ಹೊಸ ದೇಶಗಳನ್ನು ನೋಡುವಿರಿ. ಮಿತ್ರ ಸುಖ ಅನುಕೂಲ.

ವಾದದಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ವಿಜಯ ದೊರೆತು ಶತ್ರುಗಳು ಸಂಪೂರ್ಣ ಪರಾಜಯ ಹೊಂದುವರು. ಹೊಸ ಸಂಕಟಗಳು ಬರದಿದ್ದರೂ ಹಳೆಯವೇ ಬಹಳ ತೊಂದರೆ ಕೊಡುವವು.

ಗರ್ಭಿಣಿ ಸ್ತ್ರೀಯರಲ್ಲಿ ಈ ವರ್ಷಾರಂಭದಿಂದ ಅಕ್ಟೋಬರ ೨೫ ರ ವರೆಗೆ ಮತ್ತು ಅನಂತರ ಜನೆವರಿ ೩ ರಿಂದ ೨೦, ಫೆಬ್ರುವರಿ ೫ ರಿಂದ ೨೬, ಮೇ ೧ ರಿಂದ ೧೮, ಜೂನ ೩ ರಿಂದ ೨೧, ಅಗಸ್ಟ ೨೬ ರಿಂದ ಸಪ್ಟಂಬರ ೧೩ ಮತ್ತು ಸಪ್ಟಂಬರ ೪ ರಿಂದ ಅಕ್ಟೋಬರ ೧೩ ಈ ಅವಧಿಯಲ್ಲಿ ಹಡೆದರೆ ಕಷ್ಟವಿಲ್ಲದೆ ಹಡೆದು, ಬಹುಶಃ ಗಂಡು ಹುಟ್ಟುವದು. ಉಳಿದ ಕಾಲದಲ್ಲಿ ಸುಲಭವಾಗಿ ಹೆರಿಗೆ ಆಗಿ ಹೆಣ್ಣು ಹುಟ್ಟುವ ಸಂಭವವಿದೆ.

ವಿದ್ಯಾರ್ಥಿಗಳಲ್ಲಿ ಎಪ್ರಿಲದೊಳಗಾಗಿ ಯಾರ ಪರೀಕ್ಷೆ ಆಗುವದೊ ಅವರು ನಿಶ್ಚಯವಾಗಿ ಪಾಸಾಗುವರು. ಅನಂತರ ಪರೀಕ್ಷೆ ಕಟ್ಟಿದರೆ ಯಶಸ್ಸು ಅಷ್ಟು ಖಾತ್ರಿ ಹೇಳಲಿಕ್ಕೆ ಬರುವದಿಲ್ಲ.

# ಮೀನ

ಈ ರಾಶಿಯುವರಿಗೆ ಈ ವರ್ಷ ಸಾಂಸಾರಿಕ ಜೀವನಕ್ಕಿಂತ ಔದ್ಯೋಗಿಕ ಸಮಾಧಾನ ಹೆಚ್ಚು ಸಿಕ್ಕುವ ಸಂಭವವಿದೆ ಎಂಬುದು ಕೆಳಗಿನ ವಿವೇಚನೆಯಿಂದ ಗೊತ್ತಾಗುವದು.

ಈ ರಾಶಿಯು ಜನರ ಆರೋಗ್ಯ ನವಂಬರದಿಂದ ಬರುವ ಎಂಟನೇ ಶನಿಯಿಂದ ಬಹಳ ಕೆಡಬಹುದು ಎಂಬ ಅಂಜಿಕೆಯು ಇದ್ದರೆ ಅದು ಬಹುಶಃ ಸುಳ್ಳಾಗುವದು. ಯಾಕಂದರೆ ಅಂದಿನಿಂದ ಆ ಗ್ರಹವು ತನ್ನ ಉಚ್ಚ ರಾಶಿಯಿಂದ ಭ್ರಮಣ ಮಾಡಹತ್ತುವದರಿಂದ ಆರೋಗ್ಯ ಕೆಡದೆ ಮೊದಲಿಗಿಂತ ಹೆಚ್ಚು ಸುಧಾರಿಸುವದು. ಆದರೆ ವಾತದ ಕಿರುಕಳ ಉಪದ್ರವವು ಮಾತ್ರ ಮೇಲಿಂದ ಮೇಲೆ ಆಗುವದು. ಮತ್ತು ಕೆಲವು ಸಲ ಅದು ಬಹಳ ತೊಂದರೆ ಕೊಡುವದು. ಕಣ್ಣುಬೇನೆ, ಮೋತಿಬಿಂದು, ಪರೆ ಬರುವದು ಮೊದಲಾದ ವಿಕಾರಗಳಿಂದ ಅಲ್ಪ ಸ್ವಲ್ಪ ತೊಂದರೆ ಆಗುವದು. ಹೊಟ್ಟೆಯಲ್ಲಿ ಯಾವಾಗಾದರೊಮ್ಮೆ ಗ್ಯಾಸ ಆಗುವದು. ಎಪ್ರಿಲ ೬ ರ ವರೆಗೆ ಎಲ್ಲ ಅನುಕೂಲ ಇದ್ದರೂ ಅನಂತರ ಮಾತ್ರ ಮೇಲೆ ಹೇಳಿದಂತೆ ತೊಂದರೆ ಆಗುವ ಸಂಭವ ಇದೆ. ಪ್ರಾಪಂಚಿಕ ಉತ್ಕರ್ಷವನ್ನು ಹೆಚ್ಚಿಸುವಂಥ ಘಟನೆಗಳು ಎಪ್ರಿಲ ಒಳಗಾಗಿ ನಿಧಾನ ಮೂರು ನಾಲ್ಕಾದರೂ ಸಂಭವಿಸುವವು. ಅನಂತರ ಸ್ವೋನ್ನತಿಯು ಒಂದೆರಡು ಘಟನೆಗಳಾದರೂ ಸಂಭವಿಸುವವು. ಸ್ವಭಾವದಲ್ಲಿ ಇರುವ ಭೀತಿ ಮತ್ತು ಸಂಶಯವೃತ್ತಿ ಬಹಳ ಮಟ್ಟಿಗೆ ಕಡಿಮೆ ಆಗಿ ಅದು ನಿಶ್ಚಯದ್ದಾಗುವದು. ಪ್ರಕೃತಿಯುನ್ನು ಬಿಟ್ಟು ಉಳಿದ ವಿಷಯುಗಳಲ್ಲಿ ಈ ವರ್ಷದ ಪ್ರಾರಂಭದಿಂದ ಡಿಸೆಂಬರ ೧೯ ರ ವರೆಗೆ ಮತ್ತು ಅನಂತರ ಎಪ್ರಿಲ ೨೦ ರಿಂದ ಜೂನ ೩ ರ ವರೆಗೆ ಮತ್ತು ಸಪ್ಟಂಬರ ೫ ರಿಂದ ಅಕ್ಟೋಬರ ೨೨ ರ ವರೆಗೆ ಬಹಳ ಅನುಕೂಲ ಇದೆ.

ಹೆಂಡತಿಯು ಆರೋಗ್ಯ ಎಪ್ರಿಲದಿಂದ ನಿರೋಗಿ ಉಳಿದು ಇಬ್ಬರ ಸಹವಾಸದಲ್ಲಿ ವ್ಯತ್ಯಯು ಬೀಳುವದಿಲ್ಲ. ಯಾವಾಗಾದರೊಮ್ಮೆ ಬಿದ್ದರೆ ಅದು ಫೆಬ್ರುವರಿ ೫ ರಿಂದ ೨೬ ಮತ್ತು ಅಗಸ್ಟ ೨೬ ರಿಂದ ಸಪ್ಟಂಬರ ೧೩ ಈ ಅವಧಿಯುಲ್ಲಿ ಬೀಳುವ ಸಂಭವ ಇದೆ. ಆದು ಅನಿಷ್ಟ ಕಾರಣಗಳಿಗಾಗಿ ಅಲ್ಲ, ಇಷ್ಟ ಕಾರ್ಯಕ್ಕಾಗಿಯೇ ಸಂಭವಿಸುವದು. ಉಭಯುತರಲ್ಲಿ ಪ್ರೇಮುಭಾವನೆ, ಸ್ನೇಹ ಉತ್ತಮ ಉಳಿಯುವದು. ಆದರೆ ಪ್ರತಿಯೊಂದು ಮಾತಿನಲ್ಲಿ ನಿಮಗಿಂತ ಅವಳ ವರ್ಚಸ್ಸೇ ಹೆಚ್ಚು ಬೀಳುತ್ತ ನಡೆಯುವದು. ನಿಮ್ಮ ಮದುವೆ ಆಗುವದಿದ್ದರೆ, ಮತ್ತು ಅದನ್ನು ಈ ವರ್ಷ ಮಾಡುವ ಮನಸ್ಸಿದ್ದರೆ ಎಪ್ರಿಲ ೬ ರ ಒಳಗಾಗಿ ರೂಪಾಯಿಯುಲ್ಲಿ ಆರಾಣೆ ಅನಂತರ ಹತ್ತಾಣೆ ಬಾಸಿಂಗ ಬಲ ಇದೆ. ವಧುವರರು ರೂಪದಿಂದ ಮಧ್ಯಮರು ಆದರೆ ಗುಣದಿಂದ ಇಬ್ಬರೂ ಪರಸ್ಪರ ಪ್ರೀತಿಯುಳ್ಳವರು ದೊರೆಯುವರು. ಎಪ್ರಿಲದಿಂದ ಮುಂದೆ ಲಗ್ನವಾದರೆ ಯಾವದೇ ಬಗೆಯು ಅಡಚಣೆ ಬರುವದಿಲ್ಲ. ಆದರೆ ಕುಟುಂಬದಲ್ಲಿ ಉಳಿದ ಜನರೊಡನೆ ಎಪ್ರಿಲ ಒಳಗಾಗಿ ಕೂಡಿ ನಡೆಯುವದು. ಮುಂದೆ ಮೇಲಿಂದ ಮೇಲೆ ಬಹಳ ಕಲಹವಾಗುವದು. ಏಕತ್ರ ಕುಟುಂಬ ಇದ್ದರೆ ಅದು ವಿಭಕ್ತವಾಗುವ ಮಾತುಕತೆ ನಡೆಯುವದು. ಯಾರ ಕೈಗೆ ಏನು ಸಿಗುವದೋ ಅವರು ಅದನ್ನು ಎತ್ತಿಕೊಂಡು ಹೋಗುವರು. ಮಕ್ಕಳಿಂದ ಸುಖ ಸಿಗುವದು ಒತ್ತಟ್ಟಿಗೆ ಉಳಿಯಲಿ, ಶಾಬ್ದಿಕ ಸುಖ ಇಲ್ಲವೆ ಧೈರ್ಯದ ಮಾತುಗಳು ಕೂಡ ಹೊರಡುವದಿಲ್ಲ. ಆದರೆ ಅವರಲ್ಲಿ ಎಪ್ರಿಲವರೆಗಿನ ಕಾಲ ಹೆಣ್ಣು ಹುಡಿಗಿಗೆ, ಅನಂತರ ಕೆಲ ಗಂಡು ಹುಡುಗರಿಗೆ ಬಹಳ ಉನ್ನತಿಯು ಕಾಲ ಇರುವದರಿಂದ ಕೌಟುಂಬಿಕ ಲೌಕಿಕ ಉತ್ಕರ್ಷ ಹೆಚ್ಚುವದು. ಅವರಲ್ಲಿ ಯಾರದಾದರೂ ಲಗ್ನವಾಗುವದಿದ್ದರೆ ಎಪ್ರಿಲ ಒಳಗಾಗಿಯೇ ಯೋಗವಿದೆ. ಬೀಗರುಮಾತ್ರ ಸ್ವಲ್ಪ ಚಕ್ರಮ ಸ್ವಭಾವದವರು ಇರುವರು. ಅಳಿಯ ಇಲ್ಲವೆ ಸೊಸೆ ಸರಳ ಸ್ವಭಾವದವರು ಸಿಗುವರು. ಕಷ್ಟಾರ್ಜಿತ ದುಡ್ಡಿನಿಂದ ಸ್ಥಾವರ ಜಂಗಮ ಆಸ್ತಿ ಮಾಡುವ ಯೋಗ ಈ ವರ್ಷ ಕಡಿಮೆ ಇದೆ. ಆದರೆ ಅನಾಯಾಸವಾಗಿ ಇಲ್ಲವೆ ಅಕಲ್ಪಿತ ಹಣ ಇಲ್ಲವೆ ಸ್ಥಾವರ ಜಂಗಮ ಲಾಭದ ಯೋಗ ನಿಶ್ಚಯುವಾಗಿ ಇದೆ. ನಿಮ್ಮ ನಿಮ್ಮ ದೈವಾಸಾರ. ಅದು ಕಡಿಮೆ ಸಿಗಬಹುದು ಹೆಚ್ಚೂ ಸಿಗಬಹುದು. ಆಪ್ತೇಷ್ಟರು ಮಾತ್ರ ಅಷ್ಟಕ್ಕಷ್ಟೆ ಸಂಬಂಧ ಇಟ್ಟುಕೊಳ್ಳುವರು. ನಿಮ್ಮವೇ ವಾಹನಗಳಿದ್ದರೆ, ಅವುಗಳ ಸುಖ ನಿಮಗೆ ಸಿಗುವದಿಲ್ಲ. ಎಪ್ರಿಲದಿಂದ ನೌಕರ ಚಾಕರರು ಮನಬಂದಂತೆ ನಡೆಯುವರು. ಒಟ್ಟಾರೆ ನಿಮಗೆ ಶಾರೀರಕ ತೊಂದರೆ ಇಲ್ಲದಿದ್ದರೂ ಮಾನಸಿಕ ಅಸ್ವಸ್ಥತೆ ಆಸ್ಥಳವನ್ನು ವ್ಯಾಪಿಸುವದು. ಧಂದೆ ಮತ್ತು ಕೂಲಿ ಮಾಡುವವರಿಗೆ ಈ ವರ್ಷ ಕುಂಭ ರಾಶಿಯುವರಂತೆಯೇ ಅನುಕೂಲ ಇರುತ್ತದೆ. ನೌಕರರ ದರ್ಜೆ ಮಿತಿಮೀರಿ ಹೆಚ್ಚಿ ಕೆಲಸದಲ್ಲಿಯು ಅಸಾಮಾನ್ಯ ಪ್ರಾವೀಣ್ಯದಿಂದ ನಡುವಿನ ಒಂದೆರಡು ಮೆಟ್ಟಲುದಾಟ ಮುಂದಿನ ಗ್ರೇಡು ಒಮ್ಮೆಲೆ ಸಿಗುವದು. ಮತ್ತು ಬಹುಶಃ ಈ ಸುಯೋಗ ಡಿಸೆಂಬರ ೧೯ ಒಳಗಾಗಿಯೇ ಒದಗಿ ಬರುವದು. ಅದು ಆಗದಿದ್ದರೆ ಎಪ್ರಿಲ ೨೦ ರಿಂದ ಜೂನ ೩ ರ ಒಳಗಾಗಿ ಬರುವದು. ವರಿಷ್ಠರಂತೆ ಕೈಕೆಳಗಿನ ಜನರು ಪ್ರೇಮದಿಂದ ವರ್ತಿಸುವರು. ಜಾಹೀರ ರೀತಿಯಿಂದ ಸಮಾಜದಲ್ಲಿ ಗೌರವ ಹೆಚ್ಚುವದು. ನೀವಾದರೂ ಶಕ್ಯವಿದ್ದಷ್ಟು ಲೋಕಕಲ್ಯಾಣ ಮಾಡುವಿರಿ. ದ್ರವ್ಯಲಾಭ ಹೆಚ್ಚುವದು. ಕೆಲ ಸಲ ಅನಪೇಕ್ಷಿತವಾಗಿ ದ್ರವ್ಯ ಸಿಕ್ಕುವದು. ನಿಮ್ಮ ನೌಕರಿಯುಲ್ಲಿ ಬದಲಿ ಆಗುವದಿದ್ದರೆ ಎಪ್ರಿಲ ಒಳಗಾಗಿ ಆದರೆ ಪೂರ್ಣ ಅನುಕೂಲ ಇದ್ದ ಸ್ಥಳಕ್ಕೆ ಆಗುವದು. ಅನಂತರ ವರ್ಗವಾದರೆ ಕೆಲಸದ ದೃಷ್ಟಿಯಿಂದ ಅಷ್ಟು ಅನುಕೂಲ ಇರುವದಿಲ್ಲ. ಧಂದೆಯುವರಿಗೆ ಕೂಡ ಲಕ್ಷ್ಮಿಯು ವರದಹಸ್ತ ಸಾಕಷ್ಟು ಇರುವದು. ವಿಶೇಷವಾಗಿ ಅಕ್ಟೋಬರ ೨೫ ರಿಂದ ಜನವರಿ ೩, ಜನೆವರಿ ೨೦ ರಿಂದ ಫೆಬ್ರುವರಿ ೫, ಮೇ ೧೪ ರಿಂದ ಜೂನ ೩, ಜೂನ ೨೧ ರಿಂದ ಅಗಸ್ಟ ೨೬, ಸಪ್ಟಂಬರ ೧೩ ರಿಂದ ೨೯ ಮತ್ತು ಅಕ್ಟೋಬರ ೨೩ ರಿಂದ ಮುಂದಿನ ಕಾಲ ಬಹಳ ಲಾಭದ್ದು ಇರುವದು. ಸಾರ್ವಜನಿಕ ಸಂಸ್ಥೆಗಳಲ್ಲಿ ಉಚ್ಚಸ್ಥಾನದಲ್ಲಿ ಬಹುಮತದಿಂದ ನೀವು ಆರಿಸಲ್ಪಡುವಿರಿ. ದೊಡ್ಡವರ ಭೆಟ್ಟಿಯ ಯೋಗ ಮೇಲಿಂದ ಮೇಲೆ ಒದಗಿ ಬಂದು ಮಹತ್ವದ ಕಾರ್ಯಕಾರೀ ಮಂಡಳದಲ್ಲಿ ನಿಮ್ಮ ಹೆಸರು ಹೊಳೆಯುಹತ್ತುವದು. ಬುದ್ಧಿಜೀವಿ ಧಂದೆಯುವರಿಗಿಂತ ವ್ಯಾಪಾರ ಮತ್ತು ಶ್ರಮಜೀವಿಗಳಿಗೆ ಹೆಚ್ಚು ಲಾಭವಾಗುವದು. ಎಲ್ಲರಿಗೂ ಹೆಚ್ಚು ಪ್ರಮಾಣದಲ್ಲಿ ವೆಚ್ಚವಾಗುವದು. ಅದರಲ್ಲಿಯೂ ಎಲ್ಲವೂ ಕೂಡಿ ಬರುವದರಿಂದ ಯಾವದೇ ಬಗೆಯು ಅಸಮಾಧಾನ ಎನಿಸುವದಿಲ್ಲ. ಅನೇಕ ಸಲ ದೂರದ ಪ್ರವಾಸ ಮಾಡುವಿರಿ. ಆದು ಹೆಚ್ಚು ವೆಚ್ಚದ್ದಿದ್ದರೂ ಅದೆಲ್ಲ ಶುಭ ಕಾರ್ಯಕ್ಕೆ ಆಗುವದರಿಂದ ಉತ್ಸಾಹದಿಂದಲೇ ಎಲ್ಲವನ್ನು ಮಾಡುವಿರಿ. ಮಿತ್ರತ್ವದಲ್ಲಿ ಸ್ವಲ್ಪ ವಿರೋಧ ಉಂಟಾಗಿ ಮನಸ್ಸಿನಲ್ಲಿ ಅಸಮಾಧಾನ.

ವಾದದಲ್ಲಿ ಸ್ಪರ್ಧೆಯುಲ್ಲಿ ಎಪ್ರಿಲ ವರೆಗೆ ಶತ್ರುವಿನ ಮುಂದೆ ನೀವು ನಮ್ರರಾಗಿ ನಿಲ್ಲುವ ಪ್ರಸಂಗ ಬಂದರೂ ಅನಂತರ ಅದರ ಇಮ್ಮಡಿ ವಿಜಯು ನಿಮಗೆ ಸಿಕ್ಕಬಹುದು. ಸಪ್ಟಂಬರ ೫ ರಿಂದ ಅಕ್ಟೋಬರ ೨೨ ವರೆಗಂತೂ ಸಂಪೂರ್ಣ ವಿಜಯು ಸಿಕ್ಕುವದು.

ಹೆಣ್ಣು ಮಕ್ಕಳು ಗರ್ಭಿಣಿ ಇದ್ದು ಯಾರು ಈ ವರ್ಷ ಹಡೆಯುವರೋ ಅವರೆಲ್ಲರಿಗೆ ಹೆರಿಗೆಯು ಕಷ್ಟ ಬಹಳ ಹೆಚ್ಚು ಮತ್ತು ಬಾಣಂತಿತನವು ಮೈಹಿಡಿಯುವದಿಲ್ಲ. ಆದರೆ ಕೂಸು ಮಾತ್ರ ಸಶಕ್ತ ಗುಂಡುದುಂಡಾಗಿ ಇರುವದು. ಎಪ್ರಿಲ ವರೆಗೆ ಗಂಡು, ಅನಂತರ ಹೆಣ್ಣು ಹುಟ್ಟುವ ಸಂಭವ ಹೆಚ್ಚು.

ಈ ರಾಶಿಯು ವಿದ್ಯಾರ್ಥಿಗಳ ಪರೀಕ್ಷೆ ಎಪ್ರಿಲ ಒಳಗಾಗಿ ಆಗುವದಿದ್ದರೆ ಯುಶಸ್ಸಿನ ಬಗ್ಗೆ ನಿಶ್ಚಿಂತರಾಗಿ ಇರಬೇಕು.

— ಶುಭಂ ಭವತು —

●

---

ತಾನು ನುಡಿದ ಭವಿಷ್ಯ ಸುಳ್ಳಾಗದಿರುವಂತೆ
ಜೋಯಿಸನ ಆಸೆ ನಾ ಸಾಯಲೇಬೇಕೆಂದು.

— ಸ್ಪಿಷ್.

**ಸಾಮಾಜಿಕ ವಿಚಾರ**

# ಸೋಜಿಗದ ಸಾಮಾಜಿಕ ರೂಢಿ: ಅಳಿಯ ಸಂತಾನ ಕಟ್ಟು

ಎಲ್ಲಾದರೂ ಕೇಳಿದ್ದೀರಾ? ತಂದೆಯ ಆಸ್ತಿಯಲ್ಲಿ ಮಕ್ಕಳಿಗೆ ಹಕ್ಕಿಲ್ಲ; ಸೋದರಳಿಯಂದಿರಿಗಿದೆ. ಹೆಂಡತಿ ಮಕ್ಕಳು ಗಂಡನ ಕುಟುಂಬದವರಲ್ಲ; ಅವರ ಹೊಟ್ಟೆ ಹೊರೆಯುವ ಹೊಣೆಯೂ ಗಂಡನದಲ್ಲ. ಮದುವೆಯಾದ ಒಂದೇ ಕಾರಣದಿಂದ ವಿವಾಹವಿಚ್ಛೇದ ಪಡೆಯಬಹುದು. ದಕ್ಷಿಣ ಕನ್ನಡದ ಅಳಿಯ ಸಂತಾನ ಕಟ್ಟಿನಲ್ಲಿ ಹೀಗಿದೆ. . . . . .

ಲೇಖಕರು: ಶ್ರೀ ರಂಗರಾವ ತಲಚೇರಿಕರ,
ವಕೀಲರು, ಬೆಳಗಾವಿ

---

ದೇವಪಾಂಡ್ಯನೆಂಬ ವರ್ತಕನು ಕೆಲವು ಹಡಗುಗಳನ್ನು ಕಟ್ಟಿಸಿ ಕಡಲಿನಲ್ಲಿ ತೇಲಿಸಿದಾಗ ಅವು ಏನು ಮಾಡಿದರೂ ಮುಂದೆ ಸಾಗಲೊಲ್ಲವು. ಕಾರಣವೇನೆಂದು ವಿಚಾರಿಸಲಾಗಿ ಕುಂಡೋದರ ಎಂಬ ಭೂತವು ಅವುಗಳನ್ನು ಅಡ್ಡಗಟ್ಟಿರುವುದೆಂದೂ ಆ ಭೂತಕ್ಕೆ ನರಬಲಿಯನ್ನು ಅರ್ಪಿಸದಿದ್ದರೆ ಅದು ಹಡಗುಗಳನ್ನು ಹೋಗಗೊಡಲು ಬಿಡಲಾರದೆಂದೂ ತಿಳಿದುಬಂದಿತು. ಭಾವಿಕನಾದ ದೇವಪಾಂಡ್ಯನು ತನ್ನ ಸ್ವಾರ್ಥಸಾಧನೆಗಾಗಿ ಪರರ ಮಕ್ಕಳನ್ನು ಬಲಿಗೊಡುವ ಯೋಚನೆ ಮಾಡದೆ ತನ್ನ ಮಕ್ಕಳಲ್ಲಿ ಒಬ್ಬನನ್ನು ಬಲಿಯಾಗಿ ಅರ್ಪಿಸುವುದೆಂದು ನಿರ್ಧರಿಸಿದನು. ಆದರೆ, ಅವನ ಪತ್ನಿಯು ಅದಕ್ಕೊಪ್ಪದೆ ಎಲ್ಲಾ ಮಕ್ಕಳನ್ನು ಕರೆದುಕೊಂಡು ತವರುಮನೆಗೆ ಹೊರಟುಹೋದಳು.

ಇದನ್ನು ಕಂಡು ದೇವಪಾಂಡ್ಯನು ಚಿಂತಾಕ್ರಾಂತನಾಗಿದ್ದ ಸಮಯದಲ್ಲಿ ಅವನ ತಂಗಿ ಸತ್ಯವತಿಯು ಅದರ ಕಾರಣವನ್ನು ತಿಳಿದವಳಾಗಿ ತನ್ನ ಮಗನನ್ನು ಕುಂಡೋದರ ಭೂತಕ್ಕೆ ಬಲಿಯಾಗಿ ಅರ್ಪಿಸಲು ಒಪ್ಪಿದಳು.

ತನಗೆ ಬಲಿಯಾಗಿ ಅರ್ಪಿಸಿದ ಬಾಲಕನಲ್ಲಿ ರಾಜಲಕ್ಷಣಗಳಿದ್ದುದನ್ನು ಕಂಡು, ಕುಂಡೋದರನು ಆ ಬಲಿಯನ್ನು ಸ್ವೀಕರಿಸಲಿಲ್ಲ. ಹಾಗೂ ಬಲಿ ಇಲ್ಲದೆನೇ ದೇವಪಾಂಡ್ಯನ ಹಡಗುಗಳನ್ನು ಸಮುದ್ರಯಾನ ಗೈಯಲು ಬಿಟ್ಟನು.

ಹೋದ ಹಡಗುಗಳು ಬಹುದೂರ ಪ್ರಯಾಣ ಮಾಡಿ ಅಮೂಲ್ಯವಾದ ಸಿದ್ಧರಸವನ್ನು ಹೇರಿಕೊಂಡು ಬಾರಕೂರಿಗೆ ಮರಳಿದವು. ನರಬಲಿಯ ಪ್ರಶ್ನೆ ಪುನಃ ಏಳಬಹುದೆಂದು ಅಂಜಿ ದೇವಪಾಂಡ್ಯನ ಮಡದಿಯು ತನ್ನ ಮಕ್ಕಳಿಗೆ ಆ ಹಡಗುಗಳಲ್ಲಿದ್ದ ಸರಕುಗಳ ಮೇಲೆ ಯಾವುದೇ ಹಕ್ಕುಬಾಧ್ಯತೆ ಬೇಡವೆಂದು ಜಾಹೀರ ಮಾಡಿ ಮತ್ತೊಮ್ಮೆ ತನ್ನ ತವರುಮನೆಗೆ ಹೊರಟುಹೋದಳು.

ಇತ್ತ ಕುಂಡೋದರ ಭೂತದ ಆದೇಶದಂತೆ, ರಾಜಲಕ್ಷಣಗಳಿದ್ದ ದೇವಪಾಂಡ್ಯನ ಅಳಿಯನಿಗೆ ಭೂತಾಳಪಾಂಡ್ಯನೆಂಬ ಹೆಸರಿನಿಂದ ಬಾರಕೂರು ನಗರದಲ್ಲಿ ವಿಕ್ರಮಾದಿತ್ಯನ ಗದ್ದುಗೆಯ ಮೇಲೆ ರಾಜ್ಯಾಭಿಷೇಕ ಮಾಡಲಾಯಿತು. ಕುಂಡೋದರನ ಆಜ್ಞೆಗನುಸರಿಸಿ ಭೂತಾಳಪಾಂಡ್ಯನು ತನ್ನ ರಾಜ್ಯದಲ್ಲಿ ಮಕ್ಕಳ ಸಂತಾನ ಪದ್ಧತಿಯನ್ನು ರದ್ದುಗೊಳಿಸಿ ಅಂದಿನಿಂದ ಅಳಿಯ ಸಂತಾನಕಟ್ಟೇ ರಾಜನಿಗೂ ಪ್ರಜೆಗಳಿಗೂ ಅನ್ವಯಿಸಬೇಕೆಂದು ಜಾಹೀರಮಾಡಿದನು. ಆ ಪದ್ಧತಿಯ ಕಟ್ಟುಕಟ್ಟಳೆಗಳನ್ನು ಬಾರಕೂರಿನ ಶ್ರೀ ಅನಂತೇಶ್ವರ ದೇವಸ್ಥಾನದ ಮಡಿಯ ಮಂಟಪದಲ್ಲಿ ಬರೆಯಿಸಿ ಅದನ್ನು ಪಾಲಿಸದವರ ವಂಶವೇ ನಷ್ಟವಾಗುವುದೆಂದು ಶಾಪವಿರುವ ಎಚ್ಚರಿಕೆಯನ್ನೂ ಕೊಟ್ಟನು.

ತುಳುನಾಡು ಎಂಬ ಐತಿಹಾಸಿಕ ಹೆಸರಿರುವ ದಕ್ಷಿಣ ಕನ್ನಡ ಅಥವಾ ಮಂಗಳೂರ ಜಿಲ್ಲೆಯ ಬ್ರಾಹ್ಮಣೇತರ ಜಾತಿಗಳ ಪೈಕಿ ಹೆಚ್ಚಿನವರು ಆಚರಿಸುವ ಅಳಿಯ ಸಂತಾನ ಪದ್ಧತಿಯ ಉತ್ಪತ್ತಿಯ ಬಗ್ಗೆ ಇರುವ ದಂತಕಥೆ ಇದು. ಈ ಕಥೆಯ ಮೂಲದಲ್ಲಿರುವ ಐತಿಹಾಸಿಕ ಸತ್ಯ ಯಾವುದು ಎಂಬುದನ್ನು ಊಹಿಸಲು ಯಾವ ಆಧಾರವೂ ಈ ವರೆಗೆ ಸಂಶೋಧಿತವಾಗಿಲ್ಲ. ಹಾಗೂ ಈ ಭೂತಾಳಪಾಂಡ್ಯನು ನಿಜವಾದ ಐತಿಹಾಸಿಕ ವ್ಯಕ್ತಿಯೊ ಅಥವಾ ಪರಂಪರಾಗತ ಕಾಲ್ಪನಿಕ ವ್ಯಕ್ತಿಯೊ ಎಂಬುದನ್ನು ಕೂಡ ಹೇಳುವುದು ಅಸಾಧ್ಯ. ಆದರೆ ಸಮಾಜರಚನೆ ಹಾಗೂ ಕುಟುಂಬ ಪದ್ಧತಿಯಲ್ಲಿ ಮಕ್ಕಳ ಸಂತಾನ ಕ್ರಮವು ಸಂಪೂರ್ಣ ನಷ್ಟವಾಗಿ ಅಳಿಯ ಸಂತಾನದಂತಹ ಕ್ರಾಂತಿಕಾರಕ ಬದಲಾವಣೆಯು ಒಬ್ಬ ರಾಜನ ಶಾಸನದಂತೆ ಇಡಿಯ ನಾಡಿನಲ್ಲಿ ಒಮ್ಮಿಗೆಲೆ ಆಗುವುದು ತೀರಾ ಅಸಂಭವನೀಯ. ಈ ರೀತಿಯ ಪದ್ಧತಿಯು ಜಗತ್ತಿನಲ್ಲಿ ಕೆಲವು ಮೂಲ ನಿವಾಸಿಗಳಲ್ಲಿ ಇದೆಯೆಂದು ಸಮಾಜಶಾಸ್ತ್ರಜ್ಞರು ಹೇಳುತ್ತಾರೆ. ಆದರೆ, ಕೇರಳ ಅಥವಾ ಮಲೆಯಾಳ ಪ್ರದೇಶವನ್ನು ಬಿಟ್ಟರೆ ನಾಗರಿಕ ಜನಾಂಗಗಳಲ್ಲಿ ಇದು ಜಾರಿಯಲ್ಲಿರುವುದು ಮಂಗಳೂರ ಜಿಲ್ಹೆಯಲ್ಲಿ ಮಾತ್ರ. ಮಲೆಯಾಳ ಪ್ರದೇಶದಲ್ಲಿ ಸಮಾಜರಚನೆಯು ಈ ಪದ್ಧತಿಗೆ ಅನುಕೂಲವಿತ್ತು. ಆದರೆ ಮಂಗಳೂರ ಜಿಲ್ಹೆಯಲ್ಲಿ ಜನರ ಸಮಾಜರಚನೆಯು ಕನ್ನಡ ನಾಡಿನ ಇತರ ಭಾಗಗಳ ಸಮಾಜರಚನೆಗಿಂತ ವಿಶೇಷ ಬೇರೆ ರೀತಿಯದಿಲ್ಲ. ಹೀಗಿರುವಾಗ, ಕರ್ನಾಟಕದ ಬೇರೆ ಯಾವುದೇ ಭಾಗದಲ್ಲಿಲ್ಲದ ಈ ಪದ್ಧತಿಯು ಇಲ್ಲಿ ಮಾತ್ರ ಹೇಗೆ ಬಂತೆಂಬುದು ಸಂದಿಗ್ಧ ಸಮಸ್ಯೆ. ಇದಕ್ಕೆ ಕಾರಣಗಳೇನೂ ಸಿಗದಿದ್ದುದರಿಂದ "ರಾಜಾ ಕಾಲಸ್ಯ ಕಾರಣಂ'' ಎಂಬ ಉಕ್ತಿಯನ್ನು ಆಧರಿಸಿ ಒಬ್ಬ ರಾಜನಿಂದಲೇ ಈ ಪದ್ಧತಿಯು ಅಮಲಿನಲ್ಲಿ ಬಂತೆಂಬುದನ್ನು ತೋರಿಸುವ, ಮೇಲೆ ಹೇಳಿದ ದಂತಕಥೆಯು ಪ್ರಚಾರಪಟ್ಟಿರಬೇಕು.



ಈ ಅಳಿಯ ಸಂತಾನ ಪದ್ಧತಿಯು ಹೇಗೆ ಹಾಗೂ ಯಾವಾಗ ಹುಟ್ಟಿತು, ಬೆಳೆಯಿತು, ಸಮಾಜವನ್ನು ಆಕ್ರಮಿಸಿತು, ಇದೆಲ್ಲಾ ಇತಿಹಾಸದ ಮಡಿಲಲ್ಲಿದ್ದ ಈ ವರೆಗೂ ಸಂಶೋಧಕರ ಬೆಳಕಿನಡಿಯಲ್ಲಿ ಬಾರದ ಗೋಪ್ಯ. ಆದರೆ, ಅದು ಇತಿಹಾಸಕಾಲದ ಆದಿಯಿಂದಲೂ ಅವ್ಯಾಹತವಾಗಿ ನಡೆದುಬಂದಿದೆಯೆನ್ನಬಹುದು. ಈ ಪದ್ಧತಿಯು ಮಂಗಳೂರ ಜಿಲ್ಹೆಯ ತುಳು ಮಾತು ರೂಢಿಯಲ್ಲಿರುವ ದಕ್ಷಿಣ ಭಾಗದಲ್ಲಿ ಮಾತ್ರವೇ ಅಲ್ಲ, ಹದಿನಾರಾಣೆ ಕನ್ನಡ ನಾಡಾದ ಜಿಲ್ಹೆಯ ಉತ್ತರ ಭಾಗದಲ್ಲಿಯೂ ಬ್ರಾಹ್ಮಣೇತರರಲ್ಲಿ ಪ್ರಮುಖ ಜಾತಿಗಳಾದ ಬಂಟ ಅಥವಾ ನಾಡವ, ಬಿಲ್ಲವ ಅಥವಾ ಹಳೆಪೈಕ

ಇವರಲ್ಲಿಯೂ ಬುನಾದಿಯಿಂದಲೂ ಆ ಭಾಗದ ನಿವಾಸಿಗಳಾದ ಬಹುತೇಕ ಹೆಚ್ಚಿನ ಬ್ರಾಹ್ಮಣೇತರ ಜಾತಿಗಳಲ್ಲೂ ಆಚರಣೆಯಲ್ಲಿದೆ. ಬ್ರಾಹ್ಮಣರಾರೂ ಅಳಿಯ ಸಂತಾನವನ್ನು ಆಚರಿಸುವುದಿಲ್ಲ. ಅದರಂತೆಯೇ ಗೋವೆ ಕಡೆಯಿಂದ ಬಂದ ಕೊಂಕಣಿ ನುಡಿಯ ಜನರೂ ಸಹ್ಯಾದ್ರಿಯ ಮೇಲಿನಿಂದ ಬಂದು ನೆಲಸಿದ ಗೌಡ ಇತ್ಯಾದಿ ಜಾತಿಯವರೂ ಅದನ್ನು ಆಚರಿಸುವುದಿಲ್ಲ. ಜೈನರಲ್ಲಿ ಇಂದ್ರರೆಂದು ಕರೆಯಲ್ಪಡುವ ಅರ್ಚಕವರ್ಗದವರು ಮತ್ತು ಇತರ ಕೆಲವು ವಿಶಿಷ್ಟ ಮನೆತನದವರು ಹೊರತಾಗಿ ಉಳಿದವರೆಲ್ಲರೂ ಅಳಿಯ ಸಂತಾನ ಕ್ರಮವನ್ನೇ ಆಚರಿಸುತ್ತಾರೆ.

ಅಳಿಯ ಸಂತಾನ ಕಟ್ಟಿನ ಬುನಾದಿ ಕಲ್ಲೆಂದರೆ ವಂಶಪರಂಪರೆಯು ಅಜ್ಜನಿಂದ ತಂದೆ, ತಂದೆಯಿಂದ ಮಗ, ಈ ರೀತಿ ಇಳಿಯದೆ ಸೋದರ ಅಜ್ಜನಿಂದ ಸೋದರ ಮಾವ, ಸೋದರ ಮಾವನಿಂದ ಸೋದರಳಿಯ, ಈ ಕ್ರಮದಲ್ಲಿ ಸಾಗುವುದು. ಅಳಿಯ ಸಂತಾನದಲ್ಲಿ ಒಬ್ಬನ ಕುಟುಂಬವೆಂದರೆ ಅವನ ಅಕ್ಕತಂಗಿಯರು, ಹಾಗೂ ಅವರ ಮಕ್ಕಳು. ಕುಟುಂಬದ ಹಿರಿಯರೆಂದರೆ ತಾಯಿ ಹಾಗೂ ತಾಯಿಯ ಸೋದರ, ಸೋದರಿಯರು. ಒಬ್ಬನ ಹೆಂಡತಿ ಮಕ್ಕಳು ಅವನ ಕುಟುಂಬದವರಾಗುವುದಿಲ್ಲ. ಅವರು, ತಮ್ಮ ಸೋದರ ಮಾವನ ಕುಟುಂಬದವರಾಗುತ್ತಾರೆ. ಹಾಗಾಗಿ ನಿಸರ್ಗನಿಯಮಕ್ಕೆ ಸಹಜವಾದ ಅಪತ್ಯ-ಪ್ರೇಮಕ್ಕೆ ವಿರುದ್ಧವೂ ತನ್ನ ಮಕ್ಕಳು ತನ್ನ ಕುಟುಂಬದವರಲ್ಲವೆಂಬ ಅಸ್ವಾಭಾವಿಕವೂ ಚಮತ್ಕಾರಿಕವೂ ಆದ ಪರಿಸ್ಥಿತಿಯನ್ನು ಅಳಿಯ ಸಂತಾನದ ಜನರು ಅನುಭವಿಸಬೇಕಾಗುತ್ತದೆ.

ಮಲೆಯಾಳ ಪ್ರದೇಶದಲ್ಲಿ ಮೊನ್ನಿನ ವರೆಗೂ ಹೆಂಡತಿಯು ತನ್ನ ಕುಟುಂಬದ ಮನೆಯಲ್ಲೇ ಮಕ್ಕಳೊಂದಿಗೆ ಇರುತ್ತಿದ್ದು ಗಂಡನೇ ಅಲ್ಲಿ ಆಗಾಗ ಹೋಗಿ ಬರುವ ಪದ್ಧತಿ ಇತ್ತು. ಅದೂ ಅಲ್ಲದೆ, ಅಲ್ಲಿ ಅಂತರ್ಜಾತೀಯ ವಿವಾಹಗಳು ಪೂರ್ವಕಾಲದಿಂದಲೂ ನಡೆಯುತ್ತಿದ್ದುದರಿಂದ ಹಾಗೂ ತಂದೆಯು ತನ್ನ ಜಾತಿಯನ್ನು ಕಳೆಕೊಳ್ಳದೆ, ಮಕ್ಕಳು ತಾಯಿಯ ಜಾತಿಗೆ ಸೇರುತ್ತಿದ್ದುದರಿಂದ, ಈ ಪರಿಸ್ಥಿತಿಯು ಅಲ್ಲಿನ ಸಮಾಜ ವ್ಯವಸ್ಥೆಗೆ ಅನುಕೂಲವಾಗಿಯೇ ಇತ್ತು. ಆದರೆ, ಮಂಗಳೂರ ಜಿಲ್ಲೆಯಲ್ಲಿ ಅಂತಹ ಪದ್ಧತಿ ಇಲ್ಲ. ಇಲ್ಲಿ ನಾಡಿನ ಇತರ ಭಾಗಗಳಲ್ಲಿರುವಂತೆ ಹೆಂಡತಿಯು ಗಂಡನೊಡನೆ ಅವನ ಮನೆಯಲ್ಲೇ ಇದ್ದು, ಮಕ್ಕಳು ಅಲ್ಲೇ ಹುಟ್ಟಿ, ತಮ್ಮ ಬಾಲ್ಯ ಜೀವನವನ್ನು ಅಲ್ಲೇ ಕಳೆಯುತ್ತಾರೆ. ಭೂತಾಳ ಪಾಂಡ್ಯನ ಕಟ್ಟುಕಟ್ಟಳೆಯಲ್ಲಿ ಸಹ ದಾಂಪತ್ಯ ಜೀವನ ಹಾಗೂ ಪಾತಿವ್ರತ್ಯ ಧರ್ಮದ ವಿರುದ್ಧ ಏನೂ ಉಲ್ಲೇಖವಿಲ್ಲ. ಇಷ್ಟೇ ಅಲ್ಲ, ಒಬ್ಬನ ಮರಣದ ಸೂತಕವನ್ನು ಅವನ ಹೆಂಡತಿ ಮಕ್ಕಳು ಪಾಲಿಸಬೇಕೆಂದೂ ಕುಟುಂಬದವರು ಜನ್ಮ ಸೂತಕವನ್ನು ಮಾತ್ರ ಪಾಲಿಸಬೇಕೆಂದೂ ಅದರಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ.



ಅಳಿಯ ಸಂತಾನದ ಕೌಟುಂಬಿಕ ತತ್ವದಂತೆ ಒಬ್ಬನ ಆಸ್ತಿ, ಬದುಕು ಅವನ ಮರಣದ ನಂತರ ಅವನ ಹೆಂಡತಿ ಮಕ್ಕಳಿಗೆ ಸಿಗುವುದಿಲ್ಲ. ಅದು ಅವನ ಕುಟುಂಬಕ್ಕೇನೇ ಹೋಗುವುದು. ಮೃತನ ಹನ್ನೆರಡನೇ ದಿನಸದ ಅಂತ್ಯವಿಧಿಗಳು ಮುಗಿದೊಡನೆ ಅಳಿಯಂದಿರು ಅವನ ಮನೆಯನ್ನು ಆಕ್ರಮಿಸಿ ಸ್ಥಾವರ, ಜಂಗಮ ಸ್ವತ್ತನ್ನೆಲ್ಲಾ ಸ್ವಾಧೀನಪಡಿಸಿಕೊಂಡು ಮೊದಲೇ ದುಃಖದಲ್ಲಿ ಮುಳುಗಿದ್ದ ಹೆಂಡತಿ ಮಕ್ಕಳನ್ನು ಹೊರಗಟ್ಟುವ ದೃಶ್ಯವು ಹಲವರ ಅನುಭವದಲ್ಲಿದೆ.

ಹೆಂಡತಿ ಮಕ್ಕಳು ಬೇರೆ ಕುಟುಂಬದವರಾಗುವುದರಿಂದ ಅವರನ್ನು ಪೋಷಿಸುವ ಹೊಣೆಯು ಅಳಿಯಸಂತಾನ ಪದ್ಧತಿಯಲ್ಲಿ ಗಂಡನ ಮೇಲೆ ಇಲ್ಲ. ಅದು ಅವರ ಕುಟುಂಬದ ಯಜಮಾನನ ಮೇಲೆಯೇ ಬೀಳುವುದು. ಆರ್ಥಿಕ ಮುಗ್ಗಟ್ಟಿನಿಂದ ಉತ್ಪನ್ನವು ಕಡಿಮೆಯಾಗಿ ಆ ಕಾರಣದಿಂದ ಲಗ್ನಮಾಡಿಕೊಳ್ಳಲು ಹಿಂಜರಿಯುವವರಿಗೆ ಅಳಿಯ ಸಂತಾನದ ಈ ಕ್ರಮವು ಬಹಳ ಉತ್ತಮವೆಂದು ತೋರಬಹುದು.

ಅಳಿಯ ಸಂತಾನದ ವಿವಾಹ ಪದ್ಧತಿಯಲ್ಲಿ ಹಲವು ವೈಶಿಷ್ಟ್ಯಗಳಿವೆ. ಅವರ ಲಗ್ನ ಸಮಾರಂಭದಲ್ಲಿ ಧಾರೆಎರೆಯುವ ಕ್ರಮವಿಲ್ಲ. ಧಾರೆಯ ನೀರು ಹೊಯ್ಯುವುದು ವಂಶದ ದೃಷ್ಟಿಯಿಂದ ವಧೂವರರನ್ನು ಒಂದುಗೂಡಿಸುವುದರ ಸಂಕೇತವಾದುದರಿಂದಲೂ ಅಳಿಯ ಸಂತಾನ ಕಟ್ಟಿನಲ್ಲಿ ಗಂಡ-ಹೆಂಡಿರು ಬೇರೆ ಕುಟುಂಬದವರಾಗಿಯೇ ಉಳಿಯುವುದರಿಂದಲೂ ಧಾರೆ ಎರೆಯುವ ಪದ್ಧತಿಯು ಅಳಿಯ ಸಂತಾನದವರಲ್ಲಿ ಆಚರಣೆಯಲ್ಲಿಲ್ಲ. ಅದರ ಬದಲಿಗೆ "ಧಾರೆ ಏರುವುದು" ಎಂಬ ಪದ್ಧತಿಯು ರೂಢಿಯಲ್ಲಿದೆ. ಧಾರೆ ಏರುವುದೆಂದರೆ ವಧುವಿನ ಹಾಗೂ ವರನ ಬಲ ಕೈಗಳನ್ನು ಒಂದರ ಮೇಲೆ ಒಂದು ಇಟ್ಟು ಅದರ ಮೇಲೆ ಧಾರೆಯ ನೀರು ತುಂಬಿದ ಮಂಗಲ ಪಾತ್ರೆಯನ್ನು ಇಡುವುದು ಹಾಗೂ ಅದನ್ನು ಮೇಲಕ್ಕೆ ಏರಿಸುವುದು.

ಧಾರೆ ಏರುವ ಕ್ರಮವು ಪ್ರಥಮ ವಿವಾಹದಲ್ಲಿ ಮಾತ್ರ ಆಚರಿಸಲ್ಪಡುತ್ತದೆ. ವಿವಾಹ ವಿಚ್ಛೇದದ ನಂತರ ಆಗುವ ದ್ವಿತೀಯ ಇಲ್ಲವೇ ತೃತೀಯ ವಿವಾಹಗಳಲ್ಲಿ ಧಾರೆ ಏರುವ ಕ್ರಮವಿಲ್ಲ. ಅಂತಹ ಮದುವೆಗಳಿಗೆ "ಕೈಹಿಡಿಯುವುದು" (ತುಳು ಭಾಷೆಯಲ್ಲಿ 'ಕೈಪತ್ತಾವುನಿ') ಅನ್ನುತ್ತಾರೆ. ಇಂತಹ ಮದುವೆಗಳು ನ್ಯಾಯವಾದ ಮದುವೆಗಳೆಂದು ಎಣಿಸಲ್ಪಟ್ಟರೂ ಸಮಾಜದಲ್ಲಿ ಅವುಗಳಿಗೆ ಧಾರೆ ಏರುವ ವಿಧಿಯಿಂದ ಜರಗಿದ ಲಗ್ನಗಳಿಗಿರುವಷ್ಟು ಗೌರವದ ಸ್ಥಾನವಿಲ್ಲ.

ಯಾರ್ಯಾರೊಳಗೆ ಮದುವೆಯಾಗಬಾರದೆಂಬ ವಿಷಯದಲ್ಲಿ ಇತರ ಹಿಂದೂ ಸಮಾಜಗಳಲ್ಲಿರುವ ನಿರ್ಬಂಧಗಳು ಅಳಿಯ ಸಂತಾನದವರಲ್ಲೂ ಇವೆ. ಕನ್ನಡ ನಾಡಿನ ಕೆಲವು ಸಮಾಜಗಳಲ್ಲಿ ರೂಢಿಯಲ್ಲಿರುವ ಸೋದರ ಮಾವ, ಸೊಸೆಯರೊಳಗಣ ವಿವಾಹವು ಅವರಲ್ಲಿ ನಿಷಿದ್ಧವಿದೆ. ಆದರೆ ಸೋದರ ಮಾವನ ಮಗಳೊಡನೆ ವಿವಾಹವು ಹೆಚ್ಚಾಗಿ ಬಳಕೆಯಲ್ಲಿದೆ. ಗೋತ್ರಗಳಂತೆ ಅವರಲ್ಲಿ "ಬಲಿ" (ಕನ್ನಡ: ಬಳಿ—ವಂಶ) ಎಂಬ ವಿಭಾಗವಿದೆ. ಸಗೋತ್ರ ವಿವಾಹವು ನಿಷಿದ್ಧವಿದ್ದಂತೆ ಅವರಲ್ಲಿ ಒಂದೇ ಬಲಿಯೊಳಗಿನ ಸ್ತ್ರೀ-ಪುರುಷರೊಳಗೆ ವಿವಾಹವೂ ನಡೆಯುವುದಿಲ್ಲ.



ವಿವಾಹವಿಚ್ಛೇದದ ಸಂಬಂಧದಲ್ಲಿ ಅಳಿಯ ಸಂತಾನದ ಜನರು ಜಗತ್ತಿನ ಯಾವದೇ ಪ್ರಗತಿಶೀಲ ಅನ್ನಿಸಿಕೊಳ್ಳುವ ಸಮಾಜಕ್ಕಿಂತಲೂ ಮುಂದುವರಿದಿದ್ದಾರೆನ್ನಬಹುದು. ಸ್ತ್ರೀಪುರುಷ ಸಮಾನತೆಯನ್ನು ಸಾರುವ ಪಾಶ್ಚಿಮಾತ್ಯ

ರಾಷ್ಟ್ರಗಳಲ್ಲಿ ಕೂಡಾ ಘಟಸ್ಫೋಟವು ದೊರಕ ಬೇಕಾದರೆ ಕಾಯದೆಯ ಪ್ರಕಾರ ಯೋಗ್ಯ ಕಾರಣ ಗಳನ್ನು ಕೋರ್ಟನಲ್ಲಿ ಸಿದ್ಧಮಾಡಬೇಕಾಗುತ್ತದೆ ಹಾಗೂ ವಿವಾಹ ವಿಚ್ಛೇದವು ಕೋರ್ಟುಗಳ ಮುಖಾಂತರ ಮಾತ್ರವೇ ಸಾಧ್ಯ. ಆದರೆ ಅಳಿಯ ಸಂತಾನ ಕಟ್ಟನಲ್ಲಿ ಘಟಸ್ಫೋಟವು ಸಂಪೂರ್ಣವಾಗಿ ನಿರ್ಬಂಧರಹಿತ. ಗಂಡನು ಹೆಂಡತಿಯನ್ನು ಅಥವಾ ಹೆಂಡತಿಯು ಗಂಡ ನನ್ನು ತನ್ನ ಲಹರಿಯಂತೆ ಬೇಕಾದಾಗ ಬಿಡ ಬಹುದು. ಅದಕ್ಕಾಗಿ ಕೋರ್ಟಗೆ ಹೋಗುವ ಅವಶ್ಯಕತೆಯಿಲ್ಲ. ಯಾವುದೇ ಕಾರಣಗಳನ್ನು ತೋರಿಸಬೇಕಾದುದಿಲ್ಲ. ಯಾವುದಾದರೂ ವಿಧಿ ನಡೆಯಬೇಕೆಂದಿಲ್ಲ; ಏನಾದರೂ ವೆಚ್ಚ ಕೂಡ ಇಲ್ಲ. ಘಟಸ್ಫೋಟವು ಅತಿ ಸುಲಭವಿರುವ ಮುಸಲ್ಮಾನರಲ್ಲಿ ಅದು ಕಾಯದೆಶೀರವಾಗಬೇಕಾ ದರೆ ಗಂಡನು ನಾಲ್ವರು ಪಂಚರ ಮುಂದೆ ಮೂರು ಸಾರೆ "ತಲಾಕ, ತಲಾಕ, ತಲಾಕ" ಎಂದು ಉಚ್ಚರಿಸಬೇಕಾಗುತ್ತದೆ. ಇಲ್ಲಿ ಆ ನಿರ್ಬಂಧ ಕೂಡಾ ಇಲ್ಲ. ಹಾಗೂ ಸ್ತ್ರೀ ಪುರುಷ ರಲ್ಲಿ ಯಾವುದೇ ಭೇದವಿಲ್ಲ. ಮಕ್ಕಳನ್ನು ಪೋಷಿ ಸುವ ಹೊಣೆಯು ಗಂಡನ ಮೇಲೆ ಇಲ್ಲದ್ದರಿಂದ, ಇತರ ಸಮಾಜಗಳಲ್ಲಿ ಘಟಸ್ಫೋಟದ ಸಂಬಂಧ ದಲ್ಲಿ ಯಾವಾಗಲೂ ಏಳುವ ಮಕ್ಕಳ ರಕ್ಷಣೆ ಪೋಷಣೆಗಳ ತೊಡಕಿನ ಪ್ರಶ್ನೆಯೇ ಇಲ್ಲಿ ಉದ್ಭ ವಿಸಲಿಕ್ಕೆ ಆಸ್ಪದವಿಲ್ಲ.

ಅಳಿಯ ಸಂತಾನಕಟ್ಟನವರಲ್ಲಿ ವಿವಾಹದ ಸಂಸ್ಥೆಗೆ ಇರುವ ಸ್ಥಾನಮಾನ್ಯತೆಗಳು ಇತರ ಸಮಾಜಗಳಲ್ಲಿದ್ದಷ್ಟೇ ಪ್ರಮಾಣದಲ್ಲಿದ್ದರೂ ಬ್ರಿಟಿಷ ಕಾಯಿದೆಯ ದೃಷ್ಟಿಕೋನದಿಂದ ನಮ್ಮ ಸಮಾಜ ಸಂಸ್ಥೆಗಳ ಕಡೆಗೆ ನೋಡುತ್ತಿದ್ದ ಇಂಗ್ಲೀ ಷರ ಆಳ್ವಿಕೆಯ ಆರಂಭಕಾಲದ ನ್ಯಾಯಾಧೀಶರ ಕಣ್ಣಿಗೆ ಹೆಂಡತಿ ಮಕ್ಕಳು ಗಂಡನ ಕುಟುಂಬ ದಲ್ಲಿ ಸೇರದ, ಹಾಗೂ ಗಂಡ ಹೆಂಡಿರಿಗೆ ಅಥವಾ ಮಕ್ಕಳಿಗೆ ಯಾವುದೇ ಹಕ್ಕು ಬಾಧ್ಯತೆ ಕೊಡದ ಹಾಗೂ ಇಷ್ಟವಿದ್ದಾಗ ವಿಚ್ಛೇದಗೊಳಿಸಬಹು ದಾದ, ದಾಂಪತ್ಯ ಸಂಬಂಧವು ಕಾಯದೇಶೀರ ವಿವಾಹವಾಗಬಹುದೆಂಬ ಕಲ್ಪನೆಯು ಕೂಡ ಸ್ವೀಕೃತವಾಗಲಿಲ್ಲ. ೧೮೮೩ ನೇ ಇಸವಿಯಲ್ಲಿ ಮದ್ರಾಸ ಹೈಕೋರ್ಟನವರು ಅಳಿಯ ಸಂತಾನ ಪದ್ಧತಿಯಲ್ಲಿನ ವಿವಾಹವು ಕಾಯದೆಯ ದೃಷ್ಟಿ ಯಲ್ಲಿ ವಿವಾಹವಲ್ಲವೆಂದೂ ಅದು ಬರೇ ಅನಧಿ ಕೃತ ಸ್ತ್ರೀ ಪುರುಷಸಂಯೋಗವೆಂದೂ "ಕೊರಗ ವಿರುದ್ಧ ಮಹಾರಾಣಿ" ( ಆಲ್ ಇಂಡಿಯಾ ರಿಪೋರ್ಟರ ೬, ಮದ್ರಾಸ, ಪಾನು ೩೭೪ ) ಈ ನಿರ್ಣಯದಲ್ಲಿ ಅಪ್ಪಣೆ ಕೊಡಿಸಿದರು. ಹಿಂದು ಕಾಯದೆಯ ಸಂಗತಿಯಲ್ಲಿ ನಡೆದಂತೆಯೇ ಇಲ್ಲಿಯೂ ಕಾಯದೆಗೂ ಸಮಾಜಕ್ಕೂ ಇರುವ ನೈಸರ್ಗಿಕ ಸಂಬಂಧದ ತಿರುಳನ್ನು ತಿಳಿಯದ ಬ್ರಿಟಿಷ ಜಡ್ಜರು ಕೊಟ್ಟಿರುವ ಅನರ್ಥಕಾರಿ ನಿರ್ಣಯಗಳಲ್ಲಿ ಇದೂ ಒಂದೆನ್ನಬಹುದು.

ಅಳಿಯ ಸಂತಾನ ಸಮಾಜದವರಿಗೆ ಈ ನಿರ್ಣಯದ ಮೂಲಕ ಆದ ಅನ್ಯಾಯವು ೧೯೪೯ ನೇ ಇಸವಿಯಲ್ಲಿ ಮದ್ರಾಸ ಶಾಸನಸಭೆಯಲ್ಲಿ ಪಾಸಾದ ಅಳಿಯ ಸಂತಾನ ಮಸೂದೆಯು ಜಾರಿಗೆ ಬರುವ ತನಕ ನಿವಾರಣೆಯಾಗಲಿಲ್ಲ. ಆ ಮಸೂದೆಯಿಂದ ಅಳಿಯ ಸಂತಾನ ಸಮಾಜ ದವರ "ಧಾರೆ ಎರುವುದು", "ಕೈಹಿಡಿಯು ವುದು" ಈ ಮದುವೆಗಳಿಗೆ ಕಾಯದೇಶೀರ ಮಂಜೂರಾತಿಯು ದೊರಕಿತು. ಈ ಮಸೂದೆ ಯಲ್ಲಿ ಅಂದಿನ ವರೆಗೆ ನಿರ್ಬಂಧರಹಿತವಾಗಿದ್ದ ವಿವಾಹವಿಚ್ಛೇದಕ್ಕೂ ಕಾಯದೆಯ ಗಿಲಾವನ್ನು ಕೊಡುವ ಉದ್ದೇಶದಿಂದ ಅದನ್ನು ಕೋರ್ಟುಗಳ ಮೂಲಕವೇ ಪಡೆಯಬೇಕೆಂಬ ನಿರ್ಬಂಧವನ್ನು ಹಾಕಲಾಯಿತು. ಆ ಮಸೂದೆಯ ನಂತರ, ಅಳಿಯ ಸಂತಾನ ಮದುವೆಯನ್ನು ರದ್ದುಗೊಳಿಸ ಬೇಕೆಂದಿದ್ದ ಸ್ತ್ರೀ ಅಥವಾ ಪುರುಷನು ಆ ವಿಷಯ ದಲ್ಲಿ ಸಂಬಂಧಪಟ್ಟ ದಿವಾಣೀ ಕೋರ್ಟಗೆ ಅರ್ಜಿ ಮಾಡಿಕೊಳ್ಳಬೇಕು. ಆ ದ ರೆ, ಅಂದಿನಂತೆ ಈಗಲೂ ಕೂಡಾ ವಿವಾಹವಿಚ್ಛೇದಕ್ಕೆ ಪ್ರತ್ಯೇಕ ಕಾರಣಗಳ ಅಗತ್ಯವಿಲ್ಲ. ಮದುವೆಯಾಗಿರುವ ಕಾರಣವೊಂದೇ ಸಾಕು! ಈ ಅರ್ಜಿಯ ನೋಟೀಸು ಪ್ರತಿವಾದಿಗೆ ಕಳಿಸಲಾಗುವುದು. ಅದು ಜಾರಿಯಾದ ಆರು ತಿಂಗಳ ನಂತರ ಹಾಗೂ ಒಂದು ವರ್ಷದ ಒಳಗೆ ವಾದಿಯು ಪುನಃ ಒಂದು ಅರ್ಜಿ ಮಾಡಬೇಕಾಗುತ್ತದೆ. ಅದು ಬಂದೊಡನೆ ಕೋರ್ಟನವರು ವಾದಿ, ಪ್ರತಿ ವಾದಿಗಳೊಳಗೆ ಮದುವೆ ಆಗಿತ್ತೊ ಎಂಬುದರ ಕುರಿತಷ್ಟೇ ವಿಚಾರಣೆ ಮಾಡಿ, ಅದು ಸಿದ್ಧವಾದರೆ ವಿವಾಹ ವಿಚ್ಛೇದದ ಹುಕುಮನ್ನು ಕೊಡುವರು.

ಘಟಸ್ಫೋಟ ಬೇಕೆಂಬ ವಿಷಯದಲ್ಲಿ ಗಂಡ ಹೆಂಡತಿಯರೊಳಗೆ ಒಮ್ಮತವಿದ್ದರೆ ಕೋರ್ಟನ್ನು ಆಶ್ರಯಿಸಬೇಕಾದ ಅವಶ್ಯಕತೆ ಇಲ್ಲ. ಘಟ ಸ್ಫೋಟದ ದಸ್ತಾವೇಜನ್ನು ಇಬ್ಬರೂ ಕೂಡಿ ರಿಜಿಸ್ತ್ರಿ ಆಫೀಸಿನಲ್ಲಿ ಖರೀದಿ ಪತ್ರದಂತೆ ನೊಂದಾ ಯಿಸಿದರೆ ಸಾಕು, ಅದು ಕಾಯಿದೇಶೀರವಾಗು ವುದು.

ಜಗತ್ತಿನ ಯಾವತ್ತೂ ಘಟಸ್ಫೋಟ ಪದ್ಧತಿ ಗಳಲ್ಲಿ ಇದು ಅತ್ಯಂತ ಸುಲಭ ಹಾಗೂ ಸರಳ ವಾದುದೆನ್ನಬಹುದು. ಮತ್ತು ಇಡೀ ನಾಗರಿಕ ಜಗತ್ತು ಇಂದಲ್ಲದಿದ್ದರೂ ಮುಂದೆ ಈ ಕ್ರಮ ವನ್ನು ಸ್ವೀಕರಿಸುವುದೆಂದು ಊಹಿಸಬಹು ದಾಗಿದೆ.

ಈ ನಿರ್ಬಂಧರಹಿತ ವಿವಾಹ ವಿಚ್ಛೇದದ ಅನುಕೂಲತೆಯಿಂದ ಅಳಿಯ ಸಂತಾನದ ಸಮಾಜ ದಲ್ಲಿ ವಿವಾಹ ಬಂಧನವು ಅತ್ಯಂತ ಶಿಥಿಲವಾದ ದ್ದಿರಬೇಕೆಂದು ಇತರರು ಊಹಿಸಬಹುದು. ಆದರೆ ವಸ್ತುಸ್ಥಿತಿಯು ಹಾಗಿಲ್ಲ. ಘಟಸ್ಫೋಟವು ಇತರ ಸಮಾಜಗಳಲ್ಲಿರುವುದಕ್ಕಿಂತ ಅಳಿಯ ಸಂತಾನ ಕಟ್ಟನವರಲ್ಲಿ ಅಧಿಕ ಪ್ರಮಾಣದಲ್ಲಿಲ್ಲ. ವಿವಾಹಬಂಧನದ ಸ್ಥಿರತೆಯು ಕೇವಲ ಕಾಯ ದೆಯ ಮೇಲೆ ಅವಲಂಬಿಸಿಲ್ಲ. ಅದು ಆಯಾ ಸಮಾಜದ, ವಿಶೇಷವಾಗಿ ಸ್ತ್ರೀಯರ ಸಂಸ್ಕೃತಿಯ ಮಟ್ಟದ ಮೇಲೆ ಆಧರಿಸಿರುತ್ತದೆ. ಘಟಸ್ಫೋಟದ ಸವಲತ್ತನ್ನು ಕೊಟ್ಟೊಡನೆ ವಿವಾಹ ವಿಚ್ಛೇದಗಳ ಸಂಖ್ಯೆಯು ಬೆಳೆಯುತ್ತಾ ಹೋಗಿ ದಾಂಪತ್ಯ ಜೀವನವು ಕುಸಿದು ಬೀಳುವುದೆಂಬ ಘಟಸ್ಫೋಟ ವಿರೋಧಿಗಳ ಭೀತಿಗೆ ಅಳಿಯ ಸಂತಾನ ಸಮಾಜ

★

ಗಳಲ್ಲಿ ತಕ್ಕ ಉತ್ತರವು ಸಿಗುತ್ತದೆ. ಕೇವಲ ಕಾಯದೆಗಳಿಂದಲೇ ಸಮಾಜ ಸುಧಾರಣೆಯು ಶಕ್ಯವಿಲ್ಲವೆಂಬುದೂ ಇದರಿಂದ ಸಿದ್ಧವಾಗುತ್ತದೆ. ಒಂದು ಕಾಯದೆಯನ್ನು ಸ್ವೀಕರಿಸಲು ಸಮಾಜ ಪರಿಸ್ಥಿತಿಯು ಪಕ್ವವಾಗಿರದ ಪರಿಸ್ಥಿತಿಯಲ್ಲಿ ಆ ಸಮಾಜದ ಮೇಲೆ ಹೊರಿಸಿದ ಕಾಯದೆಯು ಬಾಲ್ಯವಿವಾಹ ಪ್ರತಿಬಂಧಕ ಕಾಯದೆಯಂತೆ ಮೃತಪ್ರಾಯವಾಗಿಯೇ ಉಳಿಯುವುದು.



ಓರ್ವ ಸ್ತ್ರೀ, ಆಕೆಯ ಗಂಡು ಹಾಗೂ ಹೆಣ್ಣು ಮಕ್ಕಳು, ಹೆಣ್ಣು ಮಕ್ಕಳ ಮಕ್ಕಳು, ಅದೇ ಪ್ರಕಾರದ ಅವರ ವಂಶಜರು ಕೂಡಿ ಒಂದು ಅಳಿಯ ಸಂತಾನ ಕುಟುಂಬವಾಗುವುದು. ಓರ್ವ ಸ್ತ್ರೀಯ ವಂಶಜರ ಪ್ರತ್ಯೇಕ ವಿಭಾಗಕ್ಕೆ "ಕವರು" ಎಂದು ಹೆಸರು. ಅಳಿಯ ಸಂತಾನದಲ್ಲಿ ಕುಟುಂಬದ ಆಸ್ತಿಯು ಯಾವಾಗಲೂ ಅವಿಭಕ್ತವಾಗಿಯೇ ಇರುತ್ತದೆ. ಹಿಂದು ಕಾಯಿದೆಯಲ್ಲಿದ್ದಂತೆ ಇದರಲ್ಲಿ ಹಿಸೆ ಕೇಳುವ ಹಕ್ಕು ಯಾರೊಬ್ಬ ಸದಸ್ಯನಿಗೂ ಇಲ್ಲ.

ಅಳಿಯ ಸಂತಾನದಲ್ಲಿ ಕುಟುಂಬದಲ್ಲಿ ಎಲ್ಲರಿಗಿಂತಲೂ ಹಿರಿಯನಿದ್ದವನು ಯಜಮಾನನಾಗುತ್ತಾನೆ. ಮಲೆಯಾಳ ಪ್ರದೇಶದಲ್ಲಿ ಸ್ತ್ರೀಯರಿಗೆ ಯಜಮಾನಿಕೆಯ ಹಕ್ಕು ಇಲ್ಲ. ವಯಸ್ಸಿನಲ್ಲಿ ಹಿರಿಯನಾದ ಪುರುಷನು ಮಾತ್ರನೇ ಯಜಮಾನನಾಗುವನು. ಆದರೆ ಇಲ್ಲಿ ಸ್ತ್ರೀ ಪುರುಷರೊಳಗೆ ಯಾವುದೇ ಭೇದವನ್ನು ಕಲ್ಪಿಸಿಲ್ಲ. ವಯಸ್ಸಿನಲ್ಲಿ ಹಿರಿಯನಿದ್ದ ವ್ಯಕ್ತಿಯು ಸ್ತ್ರೀ ಇರಲಿ, ಪುರುಷನಿರಲಿ, ಅವನು ಅಥವಾ ಅವಳು ಕುಟುಂಬದ ಯಜಮಾನರಾಗುವರು. ಸಮಾಜ ಸುಧಾರಕರ ಕನಸಾಗಿರುವ ಹಾಗೂ ಹಿಂದು ಕಾಯದೆಯಲ್ಲಿ ಈ ವರೆಗೆ ಸಾಧಿಸದಿರುವ ಸ್ತ್ರೀಪುರುಷ ಸಮಾನತೆಯನ್ನು ಅಳಿಯ ಸಂತಾನವು ಇತಿಹಾಸ ಕಾಲದ ಆದಿಯಲ್ಲೇ ಸಾಧಿಸಿದೆಯೆನ್ನಬಹುದು.

ಸಾಧಾರಣವಾಗಿ ಮಿತಾಕ್ಷರ ಪದ್ಧತಿಯಲ್ಲಿ ಕುಟುಂಬದ ಯಜಮಾನನಿಗಿರುವ ಅಧಿಕಾರಗಳೇ ಅಳಿಯ ಸಂತಾನ ಕುಟುಂಬದ ಯಜಮಾನನಿಗೆ ಇರುತ್ತವೆನ್ನಬಹುದು. ಕುಟುಂಬದ ಯಾವತ್ತೂ ಆಸ್ತಿಯು ಅವನ ಸ್ವಾಧೀನವೇ ಇರುತ್ತದೆ. ಇತರ ಸದಸ್ಯರಿಗೆ ಈ ಕಾಯದೆಯಲ್ಲಿ "ಅಶನಾರ್ಥದ" ಅಂದರೆ ಊಟ, ಉಡಿಗೆಯ ಹಕ್ಕು ಮಾತ್ರ ಇದೆ. ಅದನ್ನು ನಿರ್ವಹಿಸಿದ ಬಳಿಕ ಉಳಿದ ಉತ್ಪನ್ನಕ್ಕೆ ಯಜಮಾನನೇ ಪೂರ್ಣ ಮಾಲಕನು.

ಯಜಮಾನನಿಗೆ ಕುಟುಂಬದ ಉತ್ತಮ ಉಪಯೋಗಕ್ಕಲ್ಲದೆ ಬೇರೆ ಕಾರಣಗಳಿಗಾಗಿ ಕುಟುಂಬದ ಆಸ್ತಿಯನ್ನು ಸಾಲಕ್ಕೆ ಹೊಣೆ ಮಾಡುವ ಅಧಿಕಾರವಿಲ್ಲ. ಮಿತಾಕ್ಷರದಲ್ಲಿ ಅಂತಹ ಸಾಲವು ಅವನ ಹಿಸೆಯ ಮೇಲೆ ಬಂಧನಕಾರಕವಾಗುವುದು. ಆದರೆ, ಅಳಿಯ ಸಂತಾನದಲ್ಲಿ ಯಜಮಾನನಿಗೆ ಕೂಡಾ ಪ್ರತ್ಯೇಕ ಹಿಸೆ ಇಲ್ಲದ್ದರಿಂದ ಅಂತಹ ಸಾಲವು ಕುಟುಂಬದ ಆಸ್ತಿಯ ಯಾವುದೇ ಭಾಗಕ್ಕೆ ಹತ್ತಲಾರದು.

ಯಜಮಾನನು ಕುಟುಂಬದ ಆಸ್ತಿಯ ಆಡಳಿತೆಯನ್ನು ಸರಿಯಾಗಿ ನೋಡದೆ ಕುಟುಂಬಕ್ಕೆ ನಷ್ಟವಾದರೆ ಅಥವಾ ನಷ್ಟವಾಗುವ ಸಂಭವವಿದ್ದರೆ ಕೋರ್ಟಿನಲ್ಲಿ ದಾವೆ ಮಾಡಿಯೇ ಅವನ ಯಜಮಾನತ್ವವನ್ನು ರದ್ದುಗೊಳಿಸಬೇಕಲ್ಲದೆ ಬೇರೆ ಯಾವುದೇ ರೀತಿಯಲ್ಲಿ ಅವನನ್ನು ಕಿತ್ತು ಹಾಕುವ ಹಕ್ಕು ಇತರ ಸದಸ್ಯರಿಗೆ ಇಲ್ಲ.

ಅಳಿಯ ಸಂತಾನ ಕುಟುಂಬವು ಅವಿಭಕ್ತವೇ ಇರುವುದರಿಂದ, ದತ್ತಕ ತಕ್ಕೊಳ್ಳುವ ಸಂದರ್ಭಗಳು ತೀರಾ ಕಡಿಮೆ. ಒಂದು ಕುಟುಂಬದಲ್ಲಿ ಗಂಡಸರು ಹಾಗೂ ಹಡೆಯುವ ವಯಸ್ಸು ಮೀರಿದ ಸ್ತ್ರೀಯರು ಮಾತ್ರ ಜೀವಂತವಿರುವ ಪರಿಸ್ಥಿತಿಯಲ್ಲಿ ದತ್ತಕದ ಪ್ರಶ್ನೆ ಉಪಸ್ಥಿತವಾಗುವುದು. ಆಗಲೂ ಎಲ್ಲಾ ಸದಸ್ಯರ ಸಮ್ಮತಿ ಇದ್ದರೆ ಮಾತ್ರವೇ ಯಜಮಾನನಿಗೆ ದತ್ತಕ ತಕ್ಕೊಳ್ಳುವ ಅಧಿಕಾರವಿದೆ. ಅಳಿಯ ಸಂತಾನದಲ್ಲಿ ಪುರುಷರನ್ನು ದತ್ತಕ ತಕ್ಕೊಳ್ಳುವ ಪರಿಪಾಠವಿಲ್ಲ. ಇದು ಆ ಪದ್ಧತಿಗೆ ಸಹಜವಾಗಿಯೇ ಇದೆ. ಯಾಕೆಂದರೆ ಗಂಡಸನ್ನು ದತ್ತಕ ತಗೊಂಡರೆ ಅವನ ಮಕ್ಕಳು ಅವನ ಕುಟುಂಬಕ್ಕೆ ಸೇರುವುದಿಲ್ಲವಾದ್ದರಿಂದ ಅವನನ್ನು ದತ್ತಕ ತಕ್ಕೊಳ್ಳುವುದು ನಿಷ್ಪ್ರಯೋಜಕವಾಗುವುದು. ದತ್ತಕ ತಕ್ಕೊಳ್ಳುವುದಾದರೆ ಒಬ್ಬ ಸ್ತ್ರೀಯನ್ನು ಅಥವಾ ಕುಟುಂಬದ ಮಾನಮರ್ಯಾದೆಗಳನ್ನು ಸ್ವೀಕರಿಸಲು ಓರ್ವ ಪುರುಷನ ಅವಶ್ಯಕತೆ ಇದ್ದರೆ ಓರ್ವ ಸ್ತ್ರೀ ಹಾಗೂ ಪುರುಷನನ್ನು ಕುಟುಂಬದ ಸದಸ್ಯರಾಗಿ ದತ್ತಕ ತಕ್ಕೊಳ್ಳುವ ಪದ್ಧತಿ ಇದೆ. ಭೂತಾಳಪಾಂಡ್ಯನ ಕಟ್ಟುಕಟ್ಟಳೆಯಂತೆ "ಒಂದು ಕುಟುಂಬವು ನಿಸ್ಸಂತತಿಯಾಗಿ ಅಳಿದರೆ ನಾಲ್ಕು, ಎಂಟು ಇಲ್ಲವೆ ಹನ್ನೆರಡು ಮನೆತನಗಳ ಹಿರಿಯರು ಕೂಡಿ ಅದೇ ಬಲಿಗೆ ಸೇರಿದ ಒಬ್ಬ ಹುಡುಗ ಮತ್ತು ಹುಡುಗಿಯನ್ನು ಆ ನಷ್ಟವಾದ ಕುಟುಂಬದ ಪ್ರತಿನಿಧಿಗಳೆಂದು ಸೋದರ ಸೋದರಿಯರಾಗಿ ಆರಿಸಬೇಕು. ಆದರೆ ಯಾವ ಸಂದರ್ಭದಲ್ಲಿಯೂ ಹೆಂಡತಿ ಮಕ್ಕಳು ಕುಟುಂಬದ ಪ್ರತಿನಿಧಿಗಳಾಗುವುದಿಲ್ಲ."



ಅಳಿಯ ಸಂತಾನ ಕ್ರಮವು ಕೆಲವು ಉದಾತ್ತ ತತ್ವಗಳನ್ನೊಳಗೊಂಡಿದ್ದರೂ ಅದು ಅಸ್ವಾಭಾವಿಕ ಹಾಗೂ ಸಮಾಜ ಜೀವನಕ್ಕೆ ವಿಸಂಗತವಾದುದೆಂಬುದು ಒಪ್ಪತಕ್ಕ ಮಾತು. ಯಾಕೆಂದರೆ ಅಪತ್ಯಪ್ರೇಮವು ಕುಟುಂಬವನ್ನು ಒಂದು ವಿಧದಲ್ಲಿ ವ್ಯಾಖ್ಯೆಗೊಳಿಸಿದರೆ ಈ ಕಾಯದೆಯು ಅದನ್ನು ಇನ್ನೊಂದು ವಿಧದಲ್ಲಿ ವ್ಯಾಖ್ಯೆಗೊಳಿಸುತ್ತದೆ. ಮನುಷ್ಯನ ಸ್ವಾಭಾವಿಕ ಒಲವು ಹೆಂಡತಿ ಮಕ್ಕಳ ಕಡೆಗೆ ಹರಿಯುತ್ತಿರುವಾಗ ಅದನ್ನು ಕಾಯದೆಯಿಂದ ಹಠಾತ್ತಾಗಿ ಇನ್ನೊಂದು ಕಡೆಗೆ ಹರಿಸುವುದು ಕೌಟುಂಬಿಕ ಜೀವನದಲ್ಲಿ ಅಶಾಂತಿ, ಅಸಮಾಧಾನಗಳಿಗೆ ಎಡೆಗೊಡುವುದು.

ಯಜಮಾನನು ಕುಟುಂಬದ ಸದಸ್ಯರ ಹಿತವನ್ನು ದುರ್ಲಕ್ಷಿಸಿ ತನ್ನ ಹೆಂಡತಿ ಮಕ್ಕಳಿಗೆ ಲಾಭ ಮಾಡಿಕೊಡಲು ಪ್ರಯತ್ನಿಸುವುದು ಅಳಿಯ ಸಂತಾನ ಕುಟುಂಬಗಳಲ್ಲಿ ನಿತ್ಯದ ಅನುಭವ. ಅದರಿಂದ ಯಜಮಾನ ಹಾಗೂ ಇತರ ಸದಸ್ಯರೊಳಗೆ ವೈಮನಸ್ಸು, ಘರ್ಷಣೆ, ಹಾಗೂ ದಾವೆಗಳು ಆಗಾಗ ಉಪಸ್ಥಿತವಾಗುತ್ತಿದ್ದುವು. ೧೯೪೯ ನೇ ಇಸವಿಯ ಅಳಿಯ ಸಂತಾನ ಮಸೂದೆಯಿಂದ ಈ ಅನಿಷ್ಟ ಪರಿಣಾಮಗಳು ಕೆಲವು ಮಟ್ಟಿಗೆ ದೂರವಾಗಿವೆ. ಈ ಮಸೂದೆಯ ಪ್ರಕಾರ, ಒಬ್ಬನ ವೈಯಕ್ತಿಕ ಬದುಕು ಅವನ ಮರಣದ ನಂತರ ಅವನ ತಾಯಿಗೆ ಮತ್ತು ಹೆಂಡತಿ ಮಕ್ಕಳಿಗೆ ಹಿಸೆಯಲ್ಲಿ ಹೋಗುತ್ತದೆ; ಹಾಗೂ ಹೆಂಡತಿ ಮಕ್ಕಳ ಪೋಷಣೆಯ ಹೊಣೆಯು ಅವರ ಕುಟುಂಬದ ಮೇಲಿರುವಂತೆಯೇ ಗಂಡನ ಮೇಲೂ ಹೊರಿಸಲ್ಪಟ್ಟಿದೆ. ತಾಯಿ ಮೃತಳಾದ ಬಳಿಕ ಈ ಮಸೂದೆಯ ಪ್ರಕಾರ ತಂದೆಯೇ ಮಕ್ಕಳ ರಕ್ಷಕನಾಗುತ್ತಾನೆ.

ಈ ಮಸೂದೆಯಲ್ಲಿ ಒಂದು ಕವರಿನ ಬಹುಸಂಖ್ಯಾಕ ಸದಸ್ಯರು ಅನುಭೋಗದ ಮಟ್ಟಿಗೆ ಕುಟುಂಬದ ಆಸ್ತಿಯ ಹಿಸೆ ಕೇಳಲು ಹಕ್ಕುದಾರರಾಗುತ್ತಾರೆ. ಆದರೆ ವೈಯಕ್ತಿಕ ಹಿಸೆಯ ಸವಲತ್ತನ್ನು ಕೊಟ್ಟಿರುವುದಿಲ್ಲ.

ಯಜಮಾನನು ಕುಟುಂಬದ ಆದಾಯ ವೆಚ್ಚದ ಸರಿಯಾದ ಲೆಕ್ಕವನ್ನಿಡಬೇಕೆಂದೂ ಅದನ್ನು ಕೇಳಿದಾಗ ಇತರ ಸದಸ್ಯರಿಗೆ ತೋರಿಸಬೇಕೆಂದೂ ಈ ಮಸೂದೆಯಲ್ಲಿ ಹೇಳಲಾಗಿದೆ.

ಆದರೆ ಈ ಮಸೂದೆಯಿಂದ ಅಳಿಯ ಸಂತಾನದವರಲ್ಲಿ ಮನಸ್ಸಿನ ಒಲವಿಗೂ ಕಟ್ಟುಕಟ್ಟಳೆಯ ಆದೇಶಕ್ಕೂ ಇರುವ ಘರ್ಷಣೆಯು ಪೂರ್ಣವಾಗಿ ನಿವಾರಣೆಯಾಗಲಾರದು, ಹಾಗೂ ಆ ಸಂಬಂಧದ ದಾವೆಗಳೂ ಕಡಿಮೆಯಾಗುವುದಿಲ್ಲ. ಅಳಿಯ ಸಂತಾನ ಕ್ರಮದ ಉಚ್ಚ ಧ್ಯೇಯಗಳನ್ನು ಊರ್ಜಿತವಿರಿಸಿ ಮಾನವಸ್ವಭಾವಕ್ಕೆ ಸಹಜವಾದ ಮಕ್ಕಳ ಸಂತಾನ ಪದ್ಧತಿಗೆ ಅದನ್ನು ಹೊಂದಿಸಿಕೊಳ್ಳುವುದೇ ಪ್ರಗತಿಯ ದಾರಿ.

---

### ವಿವಾಹ

ತಾನೊಲಿದವನೆ ತನಗೆ ಗಂಡನಾಗಲಿ ಎಂದು
ದೇವನನು ಬೇಡುವರು; ನನ್ನಾಸೆ ಬೇರೆ:
ನನಗೆ ದೊರಕಿದ ಗಂಡನನ್ನೆ ನಾನೊಲಿವಂತೆ
ಕರುಣಿಸೆಂದೇ ಬೇಡುವೆನು ಮನವಾರೆ.

—ರೋಜ್ ಪ್ಯಾಸ್ಟರ ಸ್ಟೋಕ್ಸ್.

# ಕಾದಂಬರಿಯಲ್ಲಿ ಹೊಸ ಒಲವುಗಳು

## ಕನ್ನಡ ಮತ್ತು ಪಾಶ್ಚಾತ್ಯ ಕಾದಂಬರಿಗಳ ತುಲನೆ

ಕನ್ನಡದಲ್ಲಿ ಕಾದಂಬರಿಗಳು ಹೇರಳವಾಗಿ ಹುಟ್ಟಿಕೊಳ್ಳುತ್ತಿವೆ. ಇದು ಸ್ವಾಗತಾರ್ಹವಾದರೂ ಅವುಗಳಲ್ಲಿ ಎಷ್ಟು ಮಟ್ಟಿಗೆ ನಿಜವಾದ ಯೋಗ್ಯತೆಯಿದೆಯೆಂದು ಪರೀಕ್ಷಿಸುವ ಕಾಲ ಬಂದಿದೆ. ಒಟ್ಟಿನ ಮೇಲೆ ನಮ್ಮ ಕಾದಂಬರೀ ಪ್ರಪಂಚವು ಪ್ರತಿಭಾದಾರಿದ್ರ್ಯದ ನಿಟ್ಟಿಗೆ ಬಂದು ನಿಂತಿದೆಯೆಂಬ ಅಪ್ರಿಯ ಸತ್ಯವನ್ನು ನಾವು ಒಪ್ಪದಿದ್ದರೆ ಪ್ರಗತಿಯಾಗುವುದು ಸಾಧ್ಯವಿಲ್ಲ.

ಲೇಖಕರು : ಪ್ರೊ. ಹರಿದಾಸಭಟ್ಟ, ಎಂ. ಎ.

ಸ್ವತಂತ್ರ ಭಾರತದಲ್ಲಿಯೂ ಅಸ್ವತಂತ್ರವಾಗಿ ಉಳಿದಿರುವ ನಮ್ಮ ಕನ್ನಡ ನಾಡನ್ನು ಯಾವುದೇ ಒಂದು ಚಿಕ್ಕ ಪಾಶ್ಚಾತ್ಯ ದೇಶದೊಡನೆ ಹೋಲಿಸುವಾಗ ಎಂಥ ಖೇದವುಂಟಾಗಬಹುದೋ ಅದೇ ತೆರನಾದ ದುಃಖವು ಕನ್ನಡ ಕಾದಂಬರಿಗಳನ್ನೂ ಪಾಶ್ಚಾತ್ಯ ಕಾದಂಬರಿಗಳನ್ನೂ ತುಲನೆ ಮಾಡುವಾಗ ಆಗದೆ ಇರುವುದಿಲ್ಲ. ಇದಕ್ಕೆ ಮುಖ್ಯ ಕಾರಣ ನಮ್ಮ ಸಾಹಿತ್ಯದ ಬಡತನ, ನಮ್ಮ ಕಾದಂಬರೀಲೋಕದ ಬರಡುತನ. ಇಷ್ಟೆಂದ ಕೂಡಲೇ ನಮ್ಮಲ್ಲಿ ರಸಭರಿತ ಕೃತಿಗಳೂ ಪಾಶ್ಚಾತ್ಯರಲ್ಲಿ ನೀರಸ ಕೃತಿಗಳೂ ಇಲ್ಲವೇ ಇಲ್ಲವೆಂದರ್ಥವಲ್ಲ. ಆದರೆ ಅಲ್ಲಿ ವರ್ಷದಲ್ಲಿ ನೂರಾರು ಕಾದಂಬರಿಗಳು ಸೃಷ್ಟಿಯಾಗುವಾಗ ನಡುವೆ ಸಪ್ಪೆ ರಚನೆಗಳೆಷ್ಟೇ ಬಂದರೂ ಒಳ್ಳೆಯವಕ್ಕೆ ಕೊರತೆ ಇರುವುದಿಲ್ಲ. ಕನ್ನಡ ಸಾಹಿತ್ಯದಲ್ಲಿ ಕಾದಂಬರಿಗಳ ಯುಗವು ಇದೇ ಈಗ ಮೂವತ್ತು ವರ್ಷಗಳಿಂದ ಆರಂಭವಾಯಿತು. ಆಂಗ್ಲರ ವಾಲ್ಟರ್ ಸ್ಕಾಟ್ ಮತ್ತು ಸೆಕ್ಸ್ಟನ್ ಬ್ಲೇಕ್ ಇವರಿಂದ ಸ್ಫೂರ್ತಿ ಪಡೆದ ಬಂಗಾಲಿ, ಮರಾಠಿ ಸಾಹಿತ್ಯಗಳ ಪ್ರತಿಚ್ಛಾಯೆಯಾಗಿ ವೆಂಕಟಾಚಾರ್ಯ, ಗಳಗನಾಥರ ಕಾದಂಬರಿಗಳು ಕನ್ನಡಿಗರ ಮನಸ್ಸನ್ನು ಸೂರೆಗೊಂಡವು.

### ಸಮಕಾಲೀನ ಪ್ರಭಾವ

೧೯೩೦ ರಿಂದ ೧೯೪೦ ರ ವರೆಗೆ ಕಾದಂಬರಿಗಳ ರಚನೆಯ ವೇಗ ಮಂದವಾಗಿತ್ತು. ಮುಂದಿನ ಹತ್ತು ವರ್ಷಗಳಲ್ಲಿ ಅದರ ಗತಿ ತೀವ್ರವಾಯಿತು. ೧೯೫೦ ರ ಬಳಿಕ ಈ ಎರಡು ವರ್ಷಗಳಲ್ಲಿ ಪ್ರಕಟವಾದ ಕಾದಂಬರಿಗಳ ಸಂಖ್ಯೆಗೆ ಹಿಂದಿನ ಕಾಲದಲ್ಲಿ ಹತ್ತು ವರ್ಷಗಳು ಬೇಕಾಗುತಿದ್ದುವು. ಈ ಸಾಹಿತ್ಯಪ್ರಕಾರವು ಜನಪ್ರಿಯ ಮಾತ್ರವಲ್ಲದೆ ಲೇಖಕಪ್ರಿಯವೂ ಆಗಿರುವುದಕ್ಕೆ ಇಷ್ಟೇ ಪುರಾವೆ ಸಾಕು. ಸಣ್ಣ ಕಥೆ ಹಿಂಜರಿಯಿತು, ಪ್ರಬಂಧ-ವಿಡಂಬನೆ ಎಂದೋ ನೇಪಥ್ಯಕ್ಕೆ ತೆರಳಿದ್ದುವು, ಕಾವ್ಯ ಕವಿತೆ ಅಲ್ಲಿ ಇಲ್ಲಿ ಹುಟ್ಟಿಕೊಳ್ಳುತ್ತಿವೆ. ಕಾದಂಬರಿಗಳು ಮಾತ್ರ ಕನ್ನಡ ನಾಡಿನ ಊರಿಗೆ, ಹಳ್ಳಿಗೆ ಒಂದರಂತೆ ಜನಿಸುತ್ತಿವೆ. ೧೯೬೦ ರ ಸುಮಾರಿಗೆ ನಮ್ಮ ಕಾದಂಬರಿಗಳ ಸಂಖ್ಯೆ ಈಗಿರುವುದಕ್ಕಿಂತ ಇಮ್ಮಡಿಸಿದರೆ ಆಶ್ಚರ್ಯವಿಲ್ಲ. ಆದರೆ ಸರ್ವಸಾಮಾನ್ಯವಾಗಿ ಎಲ್ಲ ಲೇಖಕರೂ ಪ್ರಚಲಿತ ಜಗತ್ತಿನ ಸಮಸ್ಯೆಗಳನ್ನೇ ತಮ್ಮ ಕಾದಂಬರಿಯ ರಚನೆಗೆ ಬಳಸಿಕೊಳ್ಳುತ್ತಿದ್ದಾರೆ. "ರಾಜಯೋಗಿ"ಯಂಥ ಉತ್ಕೃಷ್ಟ ಐತಿಹಾಸಿಕ ಕಾದಂಬರಿ ಈಗ ಅಪೂರ್ವವಾಗಿದೆ. ಇತಿಹಾಸ-ಪುರಾಣಗಳಿಂದ ಬೇಕಾದ ವಸ್ತುವನ್ನಾಯ್ದು ಸಹೃದಯತೆಯಿಂದ ಆ ಕಾಲದ ಜೀವಂತ ವ್ಯಕ್ತಿಗಳನ್ನು ಪುನಾರಚಿಸುವ ಕೌಶಲವು ಬತ್ತಿಹೋಯಿತೋ ಎಂಬ ಹಾಗೆ ನಮ್ಮ ಲೇಖಕರು ಆ ಕಡೆಗೆ ಕಣ್ಣು ಕೂಡ ಹಾಯಿಸುವುದಿಲ್ಲ. ಇದು ಸಾಮಾಜಿಕ ಪರಿವರ್ತನೆಯ ಯುಗ, ಸ್ವತಂತ್ರ ಭಾರತೀಯ ಸಮಾಜವು ತಲೆಯೆತ್ತುವ ಯುಗ. ಪರದಾಸ್ಯದಿಂದಲೂ ಶತಶತಮಾನಗಳ ಚಿತ್ತದಾಸ್ಯದಿಂದಲೂ ನಾವು ಸಹಿಸಿಕೊಂಡು ಬಂದಿರುವ ಸಾಮಾಜಿಕ ಕುರೀತಿ, ಅನೀತಿಗಳನ್ನು, ಕ್ಷುದ್ರಛಿದ್ರಗಳನ್ನು ಬಯಲಿಗೆಳೆದು ಅವುಗಳ ವಿನಾಶದ ದೀಕ್ಷೆ ಪಡೆಯುವ ಪರ್ವಕಾಲ. ತಾನು ಮಂಜೂರು ಮಾಡುವ ಒಂದು ಕಾನೂನು ಪುಡಿಕೆಯಿಂದ ಭಾರತೀಯ ಸಮಾಜವನ್ನು ಒಂದೇ ಸಲಕ್ಕೆ ಉದ್ಧಾರ ಮಾಡಿಬಿಡುವೆನೆಂದು ಭಾರತದ ಸಾರ್ವಭೌಮ ಸರಕಾರವು ಗಾಳಿಗೋಪುರ ಕಟ್ಟಿಕೊಂಡಿರುವ ಸಂಭ್ರಮದ ಸಂಧಿಕಾಲ. ಸಮಾಜಸುಧಾರಣೆಗೆ ಎಂತೆಂಥವರೂ ಬೆವರಿಳಿಸುವ, ಪಣತೊಟ್ಟ ಈ ಕಾಲದಲ್ಲಿ ಸಮಾಜ ಮುಖಂಡನೆಂದು, ಬೌದ್ಧಿಕ ತಿಲಕಪ್ರಾಯನೆಂದೆಣಿಸಿಕೊಂಡ ಲೇಖಕನು ಸುಮ್ಮನಿದ್ದಾನೇ ? ವಿಧವಾವಿವಾಹ, ವೃದ್ಧವಿವಾಹ, ವಿಷಮವಿವಾಹ, ಸ್ವತಂತ್ರ ಪ್ರೇಮ, ಸ್ವೇಚ್ಛಾಪ್ರೇಮ, ಸ್ವೈರ ಪ್ರೇಮ ಇವುಗಳ ಮೇಲೆ ಕತ್ತಿ ಮಸೆಯುತ್ತಿರುವ ವೀರಭದ್ರರೂ ಹರಿಜನ ಪ್ರಶ್ನೆ, ಬಡತನದ ಪ್ರಶ್ನೆ ಮೊದಲಾದ ಗಾಢ ಸಮಸ್ಯೆಗಳಿಗೆ 'ಅಮೃತಾಂಜನ'ವನ್ನು ಲೇಪಿಸಲೆಳಸುವ ಹಕೀಮರೂ ನಮ್ಮ ಲೇಖಕರಲ್ಲಿ ದಿನರಾತ್ರಿ ಹೆಚ್ಚುತ್ತಿದ್ದಾರೆ. ಸಾಮಾಜಿಕ ಅಲ್ಲೋಲ ಕಲ್ಲೋಲದ ಈ ಕಾಲದಲ್ಲಿ ಲೇಖಕರಿಗೂ ಈ ಪ್ರಶ್ನೆಗಳನ್ನು ಕುರಿತು ತಲೆನೋವು ಆಗುವುದು ಸಹಜ. ೧೯೨೦ ರಿಂದ ೧೯೪೫ ರ ವರೆಗಿನ ಪ್ರತಿ ಐರೋಪ್ಯ ದೇಶದ ಸಾಹಿತ್ಯದಲ್ಲೂ ನಿರುದ್ಯೋಗ, ಬಡತನ, ನೈತಿಕ ಅಧಃಪಾತ ಮತ್ತು ಸಾಂಸ್ಕೃತಿಕ ಮೂಲೋತ್ಪಾಟನಗಳ ಮೇಲೆ ಹಲವು ಕಾದಂಬರಿಗಳು ಹುಟ್ಟಿಕೊಂಡವು. ಪ್ರಥಮ ಮಹಾಯುದ್ಧದ ಪೂರ್ವದಲ್ಲಿ ವಿಕ್ಟೋರಿಯನ್ ಕಾಲದ, ಏಕೆ ಎಚ್. ಜಿ. ವೆಲ್ಸನ ಆರಂಭದ ಕಾದಂಬರಿಗಳಲ್ಲಿಯೇ ಆದರೂ ಕಂಡುಬರುತ್ತಿದ್ದ (ಉದಾ: 'ಟೋನೋ ಬಂಗೇ') ಆಶಾವಾದದ ಬದಲು ಎರಡು ಯುದ್ಧಗಳ ನಡುವಣ ಕಾಲದಲ್ಲಿ ನಿರಾಶೆಯ ವಾತಾವರಣವು ಹಬ್ಬಿತು. ಅಲ್ಡಸ್ ಹಕ್ಸ್‌ಲಿಯ 'ಎಂಟಿಕ್ ಹೇ', 'ಪಾಯಿಂಟ್ ಕೌಂಟರ್ ಪಾಯಿಂಟ್' ಗಳಲ್ಲಿ ಬರುವ ವ್ಯಕ್ತಿಗಳು ರಕ್ತಮಾಂಸೋಪೇತರಾದ ಮನುಷ್ಯ ಜೀವಿಗಳಂತೆ ತಿಂದು ತೇಗಿದರೂ ಅವರಿಗೆ ಸಂಸಾರವೆಲ್ಲ ನಿರಾಶಾಮಯ, ಪ್ರಪಂಚವು ದೊಡ್ಡ ಸ್ಮಶಾನ, ಇಲಿಯಟ್ ಚಿತ್ರಿಸಿದಂಥ 'ಬರಡು ಭೂಮಿ' (Waste Land). ಬದುಕೇ ಅರ್ಥಶೂನ್ಯ. ಇಂಥ ನಿರ್ವೀರ್ಯ ವ್ಯಕ್ತಿಗಳಿಂದ ಸಮಾಜೋದ್ಧಾರ ಸಾಧ್ಯವೇ, ಸಾಂಸ್ಕೃತಿಕ

ಉನ್ನತಿ ಶಕ್ಯವೇ ಎಂದು ಪಾಶ್ಚಾತ್ಯ ಲೇಖಕರೂ ತತ್ವಜ್ಞಾನಿಗಳೂ ಶಂಕಿಸುತ್ತಾ ಇದ್ದ ಯುಗವದು. ಅವರ ಶಂಕೆ ಸತ್ಯವಾಯಿತು. ದ್ವಿತೀಯ ನರಮೇಧವು ಆರಂಭವಾಯಿತು. ಬರೆಹಗಾರರು ಮತ್ತೆ ಸಮಕಾಲೀನ ಪ್ರಪಂಚದ ಚಿತ್ರಣಗಳನ್ನು ವಿಪುಲವಾಗಿ ಒದಗಿಸಿದರು. ಈ ಸಾರ್ವತ್ರಿಕ ದ್ವೇಷಾಸೂಯೆ, ಹಿಂಸೆಗಳ ತಳಕ್ಕಿಳಿದು ಮೂಲಭೂತ ಕಾರಣಗಳನ್ನು ಶೋಧಿಸಲನುವಾದರು. ಯುದ್ಧ ಮುಗಿದರೂ ಯುದ್ಧದ ಕಾರಣ, ಪ್ರಚಾರ, ವಿನಾಶದ ಕಥೆ ಇನ್ನೂ ಮುಗಿಯಲಿಲ್ಲ.

ಹೀಗೆ ಸಮಕಾಲೀನ ಸಮಸ್ಯೆಗಳು ಕನ್ನಡ ಕಾದಂಬರಿಗಳಲ್ಲಿಯೂ ಪ್ರತಿಬಿಂಬಿಸಿವೆ. ಜಾಗತಿಕ ಯುದ್ಧದ ಅಪ್ರತ್ಯಕ್ಷ ಕಷ್ಟನಷ್ಟಗಳನ್ನು ಅನುಭವಿಸಿದ ನಮ್ಮೀ ನಾಡಿನಲ್ಲಿ ಪ್ರತ್ಯಕ್ಷ ಯುದ್ಧದ ಕಥೆ ಸಿಗಲಾರದು. 'ಮುಗಿದ ಯುದ್ಧ' 'ಜಾರುವ ದಾರಿ'ಗಳಲ್ಲಿ ಬಂದಿರುವ ಪ್ರತಿಫಲಿತ ವರ್ಣನೆಗಳಿಂದಲೇ ನಾವು ತೃಪ್ತಿಪಡಬೇಕು. ಪಾಶ್ಚಾತ್ಯ ಜೀವನದಲ್ಲಿ ಈ ಐವತ್ತು ವರ್ಷಗಳ ಕಾಲ ಹೇಗೆ ಯುದ್ಧಪೀಡಿತವಾಗಿತ್ತೋ ಅದೇ ರೀತಿ ಭಾರತವೂ ಸ್ವಾತಂತ್ರ್ಯ ಸಂಗ್ರಾಮಗ್ರಸ್ತವಾಗಿತ್ತಲ್ಲವೆ? ಈ ಸಮರವನ್ನು ವರ್ಣಿಸುವ 'ರಕ್ತತರ್ಪಣ', 'ಔದಾರ್ಯದ ಉರುಳಲ್ಲಿ', 'ರಾಷ್ಟ್ರಪುರುಷ' ಮುಂತಾದ ಕಾದಂಬರಿಗಳು ಹಲವು ನಮ್ಮಲ್ಲೂ ಇವೆ.

## ಕೇವಲ ಸಾಮಾಜಿಕ ಕಾದಂಬರಿ

ಕಾದಂಬರಿಯ ತಂತ್ರದ ದೃಷ್ಟಿಯಿಂದ ಹಳತೆನಿಸಿದರೂ ಕಥೆಯ ದೃಷ್ಟಿಯಿಂದ ಅತ್ಯುತ್ಕೃಷ್ಟವಾದ ಗಳಗನಾಥರ 'ಕರ್ಮಕಥೆ'ಯಂಥ ದಾರುಣ ಚಿತ್ರಗಳು ಇಂದಿನ ಭಗ್ನಭಾರತದಲ್ಲಿ ಎಷ್ಟಿಲ್ಲ? ಪಂಜಾಬಿನ ವಿಭಜನೆಯಿಂದ ಜನಿಸಿದ ಅನಾಹುತ, ಕೋಟ್ಯವಧಿ ಜನಸಮೂಹದ ನಿರಾಶ್ರಿತ ಕ್ರಂದನಗಳಂಥ ದುರಂತ ಸನ್ನಿವೇಶಗಳು ಇನ್ನೂ ನಮ್ಮ ಕಾದಂಬರಿಕಾರರ ಚೈತನ್ಯವನ್ನು ಕೆಣಕಿದ ಹಾಗಿಲ್ಲ. ಕನ್ನಡದ ಲೇಖಕನು ಕೇವಲ ಗೃಹೋಪಜೀವಿಯಾಗಿದ್ದಾನೆ. ಭಾರತವೆಲ್ಲ ತನ್ನ ಮನೆಯೆಂದೂ ಕನ್ನಡಿಗರೆಲ್ಲ ಭಾರತೀಯರೆಂತೋ ಅಂತೆ ಭಾರತೀಯರೂ ಕನ್ನಡಿಗರೆಂದೂ ನಾವೆಲ್ಲ ಸಮಾನ ದುಃಖಿಗಳು, ಸುಖಿಗಳು ಎಂದೂ ಬಗೆದು ಭಾರತದ ವಿಶಾಲ ಪ್ರಶ್ನೆಗಳನ್ನು ಕನ್ನಡದಲ್ಲಿ ಬಿಂಬಿಸುವ ಯತ್ನ ನಡೆಸಬೇಕಾಗಿದೆ. ಬದಲು ನಮ್ಮ ಕಾದಂಬರಿಕಾರರು ನೀಡುತ್ತಿರುವ ಮಧ್ಯಮವರ್ಗದ ಜನರ ಸಾಮಾಜಿಕ, ಆರ್ಥಿಕ ಚಿತ್ರಣದಿಂದ ನಮಗೆ ವಿರಸ ಹುಟ್ಟಲ್ಲವೇ? ಎಂಬುದು ನಾವು ಸಾಮಾನ್ಯ ಓದುಗರನ್ನು ವಿಚಾರಿಸಿದರೆ ತಿಳಿಯುತ್ತದೆ: ಒಂದು ಕಾದಂಬರಿಗೂ ಇನ್ನೊಂದಕ್ಕೂ ವ್ಯತ್ಯಾಸವೇ ತಿಳಿಯದಂತೆ ಸಮಸ್ಯೆಗಳ ಚರ್ವಿತ ಚರ್ವಣ ನಡೆಯುತ್ತಿದೆ– ಆಧುನಿಕ ಸಿನಿಮಾಗಳ ಹಾಗೆ. ಪಾಪ, ನಮ್ಮ ಲೇಖಕರು ಇದಕ್ಕೇನು ಮಾಡಲು ಸಾಧ್ಯವಿದೆ? ಸ್ವತಃ ಮಧ್ಯಮವರ್ಗದವರಾದ ಈ ಜನರು ತಾವು ಕಂಡಷ್ಟನ್ನು ಚಿತ್ರಿಸಿರುವುದು ಅವರ ಸತ್ಯವಾದಿತ್ವದ ಹೆಗ್ಗುರುತಲ್ಲವೆ? ಎಂದು ಇಂಥ ಕಾದಂಬರಿಕಾರರೊಡನೆ ಸಹತಪಿಸುವ ಕಾಲ ಸಂದುಹೋಯಿತು. ಮಧ್ಯಮ ವರ್ಗದ ಜೀವನದ ಮೂಲೆಮೂಲೆಗಳನ್ನೂ ಸಂದಿಗೊಂದಿಗಳನ್ನೂ ಪರಿಶೋಧಿಸಿ ಬಡ ಕಾರಕೂನ, ಬಡ ಶಾಲಾ ಮಾಸ್ತರ, ಅವರ ಮುದಿ ತಾಯಿ, ಹೇರಳ ಲಾಭ ದಕ್ಕಿಸಿದ ವ್ಯಾಪಾರಿ, ಸೋಮಾರಿ ಜಮೀನ್ದಾರ, ಜಗಳಗಂಟ ಮಧ್ಯಸ್ಥ, ಕಾಲೇಜಿಗೆ ಹೋಗಿ ತನ್ನ ಸಹಪಾಠಿಗಳ ಮುಖಗಳಲ್ಲಿಯೂ ಸಿನಿಮಾ ಪಟಲದ ತಾರೆಗಳಲ್ಲಿಯೂ ಆದರ್ಶದ ಕನಸು ಕಾಣುವ, ಕಷ್ಟಬಂದಾಗ ಕಣ್ಣೀರೆರೆಯುವ, ಮುನಿದು ಹೋಗಿ ಮತ್ತೆ ಮನೆಗೆ ಮರಳುವ, ಪ್ರೇಯಸಿಯ ಮೃತ್ಯುವಿನಿಂದ ಜೀವನ ಪರಿವರ್ತನೆಗೆಳಸುವ ನಿಶ್ಶಕ್ತ ತರುಣರು, ನಾಟಕಗಳಲ್ಲಿ ವಿದೂಷಕರಂತೆ (ಅಥವಾ ಲೇಖಕನೇ ಹಿಡಿದು ತಂದು ಕಾದಂಬರಿಗಳ ಮುಖ್ಯ ಪಾತ್ರಗಳ ನಡುವೆ ತಳ್ಳುವ) ನಗಿಸಿ ತೆರಳುವ ಚಿಕ್ಕಪುಟ್ಟ ನಟರು— ಈ ವಿನೋದದ ಕಾಲ ಮುಗಿಯಿತು. ಮಧ್ಯಮ ವರ್ಗದ ಜೀವನವನ್ನೆಲ್ಲ ಜಿಗಳೆಗಳಂತೆ ಹೀರಿ ಹಿಪ್ಪೆ ಮಾಡಿದ ಲೇಖಕರು ಕಬ್ಬಿನ ಜೊಂಡಿಗೆ ಅಂಟಿರುವ ಇರುವೆಗಳಂತೆ ಏಕೆ ಇನ್ನೂ ತಗಲಿಕೊಂಡಿದ್ದಾರೋ ತಿಳಿಯದು. ಬತ್ತಿದ ಬಾವಿಯಲ್ಲಿ ನೀರು ಹುಡುಕುವುದು ಎಂಥ ಸಮರ್ಥರಿಗೂ ಸಾಧ್ಯವೆನಿಸದ ಕೆಲಸ. ಅ ನ ಕೃ ಅವರ 'ತಾಯಿಯ ಕರುಳು', ಕಾರಂತರ 'ಚಿಗುರಿದ ಕನಸು' ಈ ಜಾರುವ ದಾರಿಯಲ್ಲಿ ಮುನ್ನಡೆದು, ಮಧ್ಯಮ ವರ್ಗೀಯ ಸಮಸ್ಯೆಗಳ ಚಿತ್ರಣ ಮಾಡಿಮಾಡಿ ಆಯಾಸಗೊಂಡ ಲೇಖನಿಗೆ ಸಾಕ್ಷಿ ಹೊತ್ತು ನಿಂತಿವೆ.

## ವಸ್ತುವೈವಿಧ್ಯ ಬೇಕು

ನಮ್ಮ ಕಾದಂಬರಿಕಾರರು ತಾವು ಹುಟ್ಟಿ ಬೆಳೆದ ಸನ್ನಿವೇಶವನ್ನು ಮೀರಿ ನಿಂತು ನಾಲ್ಕು ಹೆಜ್ಜೆ ಮುಂದೋ ಹಿಂದೋ, ಮೇಲೋ ಕೆಳಗೋ ನಡೆದು ಇತರ ವರ್ಗಗಳ, ಇತರ ಜಾತಿಗಳ, ಕ್ಷೇತ್ರಗಳ ಚಿತ್ರಣವನ್ನು ಕೈಕೊಳ್ಳುವುದು ಅಗತ್ಯವಾಗಿದೆ; ಮನುಷ್ಯ ಜೀವನದ ಬಹುಮುಖವಾದ ಸಮಸ್ಯೆಗಳನ್ನು ಪ್ರತಿಬಿಂಬಿಸುವುದು ಅಗತ್ಯವಾಗಿದೆ. ಈ ಹಾದಿಯಲ್ಲಿ ನಡೆಯುವ ಹೊಸ ಲೇಖಕರು ಕೆಲವರಾದರೂ ನಮ್ಮ ಕಣ್ಣಿಗೆ ಬೀಳುತ್ತಿರುವುದು ಸಂತೋಷದ ವಿಷಯವೇ. ಗರಡಿಮನೆಯ ಕೆ. ವಿ. ಅಯ್ಯರರ 'ದೆಯ್ಯದ ಮನೆ' ಯಲ್ಲಿರುವ ಸೌಂದರ್ಯವನ್ನು ನಾವು 'ನಾಲ್ಕನೆಯ ಮನೆ'ಯಲ್ಲಿಯೂ ಕಾಣಲಾರೆವು, 'ಕನಸಿನಮನೆ' ಯಲ್ಲಿಯೂ ಕಾಣಲಾರೆವು. 'ದೆಯ್ಯದ ಮನೆ' ಒಂದು ಜೀವಂತ ಕೃತಿ. ಇದ್ದುದನ್ನು ಇದ್ದ ಹಾಗೇ ಹೇಳಬೇಕು, ಕಟ್ಟುಕತೆ ನಮಗೆ ಬೇಡ ಎನ್ನುವ ಈ ಯಥಾರ್ಥವಾದಿ ಯುಗದಲ್ಲಿ 'ರೂಪದರ್ಶಿ'ಯಂಥ ಸುಂದರ ಕೃತಿಗಳು ಬಂದರೆ ಕನ್ನಡದ ಓದುಗರು ಬರೆದವನನ್ನು ಆಶೀರ್ವದಿಸುತ್ತಾರೆ. ಬಸವರಾಜ ಕಟ್ಟೀಮನಿಯವರು ಹಿಂದಿನಿಂದಲೂ ಎದೆಗಾರಿಕೆಗೆ ಹೆಸರು ಪಡೆದವರು. 'ಮಾಡಿ ಮಡಿದವರು', 'ಜ್ವಾಲಾಮುಖಿಯ ಮೇಲೆ', 'ಮೋಹದ ಬಲೆಯಲ್ಲಿ'– ಇವು ಹೊಸ ಹೊಸ ವಸ್ತುಗಳ ಶೋಧದಲ್ಲಿ ಅವರ ಪ್ರಯತ್ನಗಳು. ವರ್ಗಕಲಹವನ್ನೂ ರಾಜಕೀಯ ಘರ್ಷಣೆಗಳನ್ನೂ ಚಿತ್ರಿಸಲು ಕಪಟವಂಚನೆಗಳ ಸ್ಫೋಟನೆಯನ್ನು ಮಾಡಲು ಯೋಗ್ಯವಾದ ಸಶಕ್ತ ಶೈಲಿಯನ್ನವರು ಸಂಪಾದಿಸಿದ್ದಾರೆ. 'ಮೋಹದ ಬಲೆಯಲ್ಲಿ' ಯಲ್ಲಿ ಧರ್ಮ ಸಂಸ್ಥೆಗಳ ಡಾಂಭಿಕತನವನ್ನು ಬಯಲಿಗೆಳೆಯುವುದಕ್ಕಿಂತ ಹೆಚ್ಚಿನ ಯಶಸ್ಸನ್ನು ಮಧ್ಯಮ ವರ್ಗದ ಗದಿಗೆವ್ವ, ಸರಸು ಇವರ ಮನಸ್ಸಿನ ಮಾಯೆಗಳನ್ನು ತೋರಿಸುವುದರಲ್ಲಿ ಪಡೆದಿದ್ದಾರೆ. ಮಧ್ಯಮ ವರ್ಗದ ವ್ಯಕ್ತಿಗಳನ್ನು ಬರೆದಷ್ಟು ಸೊಗಸಾಗಿ ಇತರ ವರ್ಗದ ವ್ಯಕ್ತಿಗಳು ಕಟ್ಟೀಮನಿಯವರ ಅಂಕೆಗೆ ಒಳಪಡುವುದಿಲ್ಲ ಎಂಬುದಕ್ಕೆ ಎಲ್ಲರನ್ನು 'ಮೋಹದ ಬಲೆಯಲ್ಲಿ' ಕೆಡಹುವ ಸ್ವಾಮಿಯೇ ಸಾಕ್ಷಿ. ಅವನೂ ಒಂದು ಮಾಂಸದ ಮುದ್ದೆ, ಅವನಿಗೂ ಮನುಷ್ಯಸಹಜವಾದ ದೌರ್ಬಲ್ಯಗಳಿವೆ ಎಂದು ಹೇಳಿ ಅವನ ಮೇಲೆ ನಮಗೆ ಮರುಕ ಹುಟ್ಟುವಂತೆ ಮಾಡಿ ಸರಸುವಿಗೇ ಖಳನಾಯಿಕೆಯ ಪಟ್ಟ ಕಟ್ಟಿದರೋ ಎಂದು ನಮಗನಿಸುತ್ತದೆ. ಆದರೂ ಕಟ್ಟೀಮನಿಯವರ ಕಾದಂಬರಿ ಹೊಸ ಹೊಸ ವ್ಯಕ್ತಿಗಳನ್ನೂ ವರ್ಗಗಳನ್ನೂ ಕನ್ನಡ ಸಾಹಿತ್ಯಕ್ಕೆ ಒದಗಿಸಿಕೊಟ್ಟಿರುವುದರಿಂದ ನಾವು ಅವರಿಗೆ ಕೃತಜ್ಞರಾಗಿರೋಣ. ಸೇವ ನಮಿರಾಜ ಮಲ್ಲರ 'ರಕ್ತದ ರೂಪಾಯಿ' ವರ್ಗಕಲಹದ ತತ್ತ್ವದಿಂದ ಪ್ರಚೋದಿತವಾದ ಇನ್ನೊಂದು ಕೃತಿ. ಇದು ಮಲ್ಲರ ಪ್ರಥಮ ಕಾದಂಬರಿಯಾದ್ದರಿಂದ ಆರಂಭದ ಕೃತಿಯ ಕೆಲವು ದೋಷಗಳಿಂದ ಕೂಡಿದ್ದರೂ ಹಳ್ಳಿಯ ಬಾಳಿನ ಮರ್ಮವನ್ನೂ ಗಟ್ಟಕ್ಕೆ ಹೋಗುವ ಕೂಲಿಗಳ ಯಾತನೆಯನ್ನೂ ತುಸು ಅತಿ ಎನಿಸುವ ಬೀಭತ್ಸ, ಚಿತ್ರಣಗಳನ್ನಿತ್ತಾದರೂ ಸಮರ್ಪಕವಾಗಿ ತಿಳಿಸುತ್ತದೆ. ಕಾರಂತರು 'ಚೋಮನ ದುಡಿ'ಯ ಅನಂತರ ಬಿಟ್ಟುಕೊಟ್ಟ ಹಾದಿಯಲ್ಲಿ ಇನ್ನೊಮ್ಮೆ ನಡೆದುದು ಹನ್ನೆರಡು ವರ್ಷಗಳ ಮೇಲೆ 'ಕುಡಿಯರ ಕೂಸಿ' ನಲ್ಲಿ ಮಲೆಕುಡಿಯರ ಸಮಾಜವನ್ನು ಕನ್ನಡದಲ್ಲಿ ಮೂರ್ತೀಕರಿಸಿದ 'ಕುಡಿಯರ ಕೂಸು' ಕನ್ನಡಕ್ಕೊಂದು ಅಪೂರ್ವ ಕಾಣಿಕೆ. ಇಷ್ಟು ಸಮರ್ಥವಾಗಿ ಹಳ್ಳಿಯ ಜನರನ್ನು ಚಿತ್ರಿಸುವವರು ಕನ್ನಡದಲ್ಲಿ ಇನ್ನೊಬ್ಬರು ಮಾತ್ರ— ಕೆ. ವಿ. ಪುಟ್ಟಪ್ಪ-ಇದ್ದಾರೆ. ಅವರು ಕಾದಂಬರೀ ಕ್ಷೇತ್ರಕ್ಕೆ ಪುನರಾಗಮಿಸುವುದನ್ನು ಕನ್ನಡಿಗರು ಕುತೂಹಲದಿಂದ ನಿರೀಕ್ಷಿಸುತ್ತಿದ್ದಾರೆ. ಐರೋಪ್ಯ ದೇಶಗಳಲ್ಲಿರುವಂತೆ ಎಂದಿನ ವರೆಗೆ ಶ್ರಮಜೀವಿ ವರ್ಗದಲ್ಲೇ ಹುಟ್ಟಿ ಬಳೆದ ಲೇಖಕರು ನಮ್ಮಲ್ಲಿ ಉದಯವಾಗುವುದಿಲ್ಲವೋ ಆ ತನಕ ಈಗಿನವರನ್ನೇ ನಾವು ಆಶ್ರಯಿಸದೆ ಉಪಾಯವಿಲ್ಲ; ಆಶ್ರಯಿಸೋಣ!

## ಮನೋವಿಶ್ಲೇಷಣೆಯ ಮುಂದಗತಿ

ಮನೋವಿಶ್ಲೇಷಣೆಯೇ ಪ್ರಧಾನವಾಗಿ ಉಳ್ಳ ಕಾದಂಬರಿಗಳೂ ಹೃತ್ಸಾಗರದ ಅಗಣಿತ ತರಂಗಗಳನ್ನು ಕನ್ನಡದ ನುಡಿಕಟ್ಟಿನಲ್ಲಿ ಸೆರೆಹಿಡಿಯಬಲ್ಲ ಲೇಖಕರೂ ನಮ್ಮಲ್ಲಿ ವಿರಳ. ಪ್ರಾದೇಶಿಕ ಪರಿಸರಗಳನ್ನು ಸೃಷ್ಟಿಸುವುದರಲ್ಲಿ ಕಾರಂತರು ನವಬ್ರಹ್ಮರೆನಿಸಿದರೂ, ಆ ಪರಿಸರದಲ್ಲಿರುವ ವ್ಯಕ್ತಿಗಳ ಸುಪ್ತ ಭಾವನೆಗಳನ್ನು ಅಷ್ಟು ನಿಸ್ಸೀಮವಾಗಿ ಪ್ರಕಟಿಸಲಾರರು. 'ಚೋಮನ ದುಡಿ', 'ಮರಳಿ ಮಣ್ಣಿಗೆ' ಈ ಸಾಮಾನ್ಯ ನಿಯಮಕ್ಕೆ ಅಪವಾದಗಳಾದರೂ ಉಳಿದ ಕಾದಂಬರಿಗಳಲ್ಲಿ ವ್ಯಕ್ತಿಗಿಂತಲೂ ಹಿನ್ನೆಲೆಗೆ, 'ಸಿನೆರಿ' ಗೆ ಅವರು ಹೆಚ್ಚು ಪ್ರಾಧಾನ್ಯ ಕೊಟ್ಟಂತೆ ಕಾಣುವುದು. ಬೆಳ್ಳೆ ರಾಮಚಂದ್ರರಾಯರ 'ಚಿರವಿರಹಿ' ಮನೋವಿಶ್ಲೇಷಣೆಗೇ ಮೀಸಲಾದ ಕಾದಂಬರಿ. ಇದರಲ್ಲಿ ವ್ಯಕ್ತಿಗಳ ಪ್ರಾಪಂಚಿಕ ಆಟನೋಟಗಳಿಗಿಂತಲೂ ಅವರ ಮನಸ್ಸಿನ ಮರೆಯಲ್ಲಿ ಅಡಗಿರುವ ಶಕ್ತಿಗಳು ಪ್ರಬಲವಾದವು. ಅವುಗಳ ಪೃಥಕ್ಕರಣದಲ್ಲಿ ಬೆಳ್ಳೆಯವರು ಒಳ್ಳೆಯ ಕೌಶಲವನ್ನು ತೋರಿಸಿದ್ದಾರೆ. ಗೋಕಾಕರು 'ಇಜ್ಜೋಡಿ' ನಲ್ಲಿಯೂ ವಿ. ಎಂ. ಇನಾಮದಾರರು 'ಶಾಪ' ದಲ್ಲಿಯೂ ದ. ಬಾ. ಕುಲಕರ್ಣಿಯವರು 'ಪರಿಹಾರ' ದಲ್ಲಿಯೂ ಇದೇ ಕೆಲಸವನ್ನು ಮಾಡಿ ತಕ್ಕಷ್ಟು ಜಯಶೀಲರಾಗಿದ್ದಾರೆ. ಇಲ್ಲಿಯೂ ಒಂದು ವಿಶಿಷ್ಟ ವರ್ಗದ ಮನಃಪ್ರಪಂಚವೇ ನಮ್ಮ ಲೇಖಕರ ಆಡುಂಬೊಲವಾಗಿರುವುದರಿಂದ ಆಗೀಗ ವಿರಸ ಹುಟ್ಟಿಸುವ ಪ್ರಸಂಗಗಳೂ ಬರುತ್ತವೆ. ಐರೋಪ್ಯ ಕಾದಂಬರಿಗಳು ಈಗ ಪರಿಸರದ ಸೃಷ್ಟಿಗೆ ಹೆಚ್ಚು ಮಹತ್ವವನ್ನು ಕೊಡುವುದಿಲ್ಲ. ಮಧ್ಯಯುರೋಪಿನ ಚಿಕ್ಕಪುಟ್ಟ ದೇಶಗಳಲ್ಲಿ ಸಕಲ ವರ್ಗಗಳ ಜನರನ್ನೂ ಕೆಣಕುವ ಯುದ್ಧ ಮತ್ತು ಯುದ್ಧಜನ್ಯವಾದ ಸನ್ನಿವೇಶಗಳು ಪದೇಪದೇ ಬರುತ್ತಿದ್ದುದರಿಂದ ಅಲ್ಲಿ ಈ ಪ್ರವೃತ್ತಿ ಈಗ ೫೦ ವರ್ಷಗಳಿಂದಲೇ ಇದೆ. ಆಂಗ್ಲ ಸಾಹಿತ್ಯದಲ್ಲಾದರೂ ಪ್ರೀಸ್ಟ್ಲೀ ಬರೆದ 'ಫೆಸ್ಟಿವಲ್ ಎಟ್ ಫಾರ್‌ಬ್ರಿಜ್' ನಂಥ ಡಿಕೆನ್ಸ್ ಮಾದರಿಯ ವರ್ಣನಾತ್ಮಕ ಕಾದಂಬರಿಗಳು ಈಗ ವಿರಳ. ಹಾರ್ಡಿಯಿಂದ ತೊಡಗಿದ ಈ ಪ್ರವಾಹವು ಈಗ ಒಂದು ಮಹಾಪೂರವಾಗಿದೆ. ಮನೋವಿಶ್ಲೇಷಣೆಗೆ ಅತ್ಯನುಕೂಲವಾದ ಶೈಲಿಯನ್ನು ವರದಾನವಾಗಿಯೂ ಸತತ ಅಭ್ಯಾಸದಿಂದಲೂ ಪಡೆದ ಅನೇಕ ಲೇಖಕರು ಕಾವ್ಯೋಪಮವಾದ ಕಾದಂಬರಿಗಳನ್ನು ಬರೆಯುತ್ತಿದ್ದಾರೆ. ರಿಚಾರ್ಡ ಚರ್ಚರ 'ನೈಟಿಂಗೇಲ' ಆರ್ಥರ ಕೊಸ್ಲರನ 'ಡಾರ್ಕ್‌ನೆಸ್ ಎಟ್ ನೂನ್' ಮತ್ತು 'ಎರೈವಲ್ ಎಂಡ ಡಿಪಾರ್ಚರ್', ಸಾಮರ್ಸೆಟ ಮಾಮ್‌ನ 'ಕೇಕ್ಸ್ ಎಂಡ ಏಲ್', 'ಅಫ್ ಹ್ಯೂಮನ್ ಬಾಂಡೇಜ' ಮುಂತಾದವು ಆಂಗ್ಲರ ಮನಃಪ್ರಪಂಚವನ್ನು ಪ್ರತಿಬಿಂಬಿಸುವ ಮರಕತಗಳು. ಆದರೆ ಪಾಶ್ಚಾತ್ಯ ಜಗತ್ತಿನಲ್ಲೇ ಮನೋವಿಶ್ಲೇಷಣೆಯ ಅತ್ಯುಚ್ಚ ಕಲೆಯು ಫ್ರೆಂಚ ಸಾಹಿತ್ಯದಲ್ಲಿ ಪರಿಪಕ್ವವಾದಂತೆ ಬೇರೆಲ್ಲೂ ಕಾಣಲಾರೆವು. ಆಂಗ್ಲ ಸಾಹಿತ್ಯವು ಈ ದಿಶೆಗೆ ತಿರುಗಿದುದೇ (ಡಾಸ್ಟೊವಸ್ಕಿಗಿಂತಲೂ ಹೆಚ್ಚಾಗಿ) ಫ್ರೆಂಚ ಕಾದಂಬರಿಕಾರರ ಪ್ರಭಾವದಿಂದ. ಮಾರ್ಸೆಲ ಪ್ರೂಸ್ಟನ ಸಾವಿರಾರು ಪುಟಗಳುಳ್ಳ ೧೨ ಸಂಪುಟಗಳ ಕಾದಂಬರಿಯಲ್ಲಿ ಬರುವ ವ್ಯಕ್ತಿಗಳ ವರ್ತನೆಯ ಪ್ರತಿಯೊಂದು ವಿಲಾಸವನ್ನೂ ಪುಟ ಮುಗಿದರೂ ಮುಗಿಯದ ವಾಕ್ಯಗಳಿಂದ ವರ್ಣಿಸಿರುವುದನ್ನು ನೋಡಬಹುದು. ಜೇಮ್ಸ್ ಜಾಯ್ಸನ 'ಯೂಲಿಸಿಸ್' ಸ್ಟೀಫನ್ ಡಿಡೇಲಸನ ೨೪ ತಾಸಿನ ಬದುಕನ್ನು ಚಿತ್ರಿಸುವಾಗ ಆ ಬದುಕಿನ ಹಿಂದು ಮುಂದುಗಳನ್ನೂ ಆಗುಹೋಗುಗಳನ್ನೂ ಮನಸ್ಸಿನ ತೆರೆಯಲ್ಲಿ ಹಾಯುವ ಚಿತ್ರಪಟದ ಮಾದರಿಯಲ್ಲಿ ತೋರಿಸುತ್ತದೆ. ಫ್ರಾನ್ಸ್ವಾ ಮೋರಿಯಕ ಎಂಬ ಫ್ರೆಂಚ ಕಾದಂಬರಿಕಾರ 'ಲೇ ಸಾಗುವ್ಹಾ' (ಚಿಕ್ಕ ಪಾಪ) ಎಂಬ ೧೨೦ ಪುಟಗಳ ಕಾದಂಬರಿಯನ್ನು ಕಳೆದ ವರ್ಷ ಹೆಣೆದನು. ಒಂದೇ ಒಂದು ಅನಾವಶ್ಯಕ ಶಬ್ದವನ್ನಾಗಲಿ, ವಾಕ್ಯವನ್ನಾಗಲಿ, ಪ್ರಸಂಗವನ್ನಾಗಲಿ ನಾವು ಈ ಕಾದಂಬರಿಯಲ್ಲಿ ಕಾಣಲಾರೆವು. ಹಳೆಸಂಪ್ರದಾಯದ ಮುದಿತಾಯಿ, ಚಂಚಲಬುದ್ಧಿಯ ನಿತ್ರಾಣಿ ಪತಿ, ದರ್ಜೆಯಲ್ಲಿ ಹಿಂದುಳಿಯುವ ಚಿಕ್ಕ ಮಗ, ಮನೆಯಲ್ಲೇ ಶಿಕ್ಷಣ ಕೊಡುವೆನೆಂದು ಮೊದಲು ಆಸೆ ತೋರಿಸಿ ಬಳಿಕ ತನ್ನ ರಾಜಕೀಯ ಪಂಥ (ಸಾಮ್ಯವಾದ) ವನ್ನಿದಿರೊಡ್ಡಿ ತಪ್ಪಿಸಿಕೊಳ್ಳುವ ಹಳ್ಳಿಯ ಮಾಸ್ತರ— ಇವರ ಮನಸ್ಸಿನ ವಿಕಾರಗಳನ್ನು ವಿಶ್ಲೇಷಿಸುವ ಈ ಕಾದಂಬರಿಯು ದುರಂತದಲ್ಲಿ ಕೊನೆಗೊಂಡಾಗ ಯಾರಿಗೂ ಆಶ್ಚರ್ಯವಾಗುವುದಿಲ್ಲ.

## ಶ್ಲೀಲ–ಅಶ್ಲೀಲ

ಕನ್ನಡದಲ್ಲಿ ಇತ್ತೀಚೆಗೆ ಶ್ಲೀಲಾಶ್ಲೀಲತೆಯ ಪ್ರಶ್ನೆಯನ್ನು ಒಂದು ಭಯಂಕರ ಸಮಸ್ಯೆಯ ರೂಪದಲ್ಲಿ ಚರ್ಚಿಸುವ ಮನೋವೃತ್ತಿ ಕಂಡುಬಂದಿದೆ. ಸಾಹಿತ್ಯದಲ್ಲಿ ಕಾಮಪ್ರಚೋದನೆಯ ಸ್ಥಾನವೇನು ? ಎಂಬುದರ ಬಗ್ಗೆ ಒಬ್ಬ ಗಣ್ಯ ಕಾದಂಬರಿಕಾರರು ತಮ್ಮ ಕಾದಂಬರಿಗಳಲ್ಲಿಯೂ ಆ ಕುರಿತ ಒಂದು ಪ್ರಬಂಧದಲ್ಲಿಯೂ ಟೀಕಾಪೂರ್ಣ ವಿವರಗಳನ್ನು ಕೊಟ್ಟಿದ್ದಾರೆ. ಸಾಹಿತ್ಯದಲ್ಲಿ ಕಾಮಕ್ಕೆ ಸ್ಥಾನಬೇಕು ಎಂಬುದಕ್ಕೆ ದಶದಿಕ್ಕುಗಳಿಂದಲೂ ಸಮರ್ಥನೆಗಳನ್ನು ಒದಗಿಸಿಕೊಂಡಿದ್ದಾರೆ. ವಿಮರ್ಶಕರ ಕೂರಸಿಗಳಿಂದ ಪ್ರಚೋದಿತವಾದ ನಂಜಿನ ಮಾತುಗಳನ್ನು ಅಲ್ಲಿ ಇಲ್ಲಿ ಆಡಿದ್ದಾರೆ. ನೀತಿಯ ಪ್ರಶ್ನೆಯಾಗಲಿ ಶ್ಲೀಲಾಶ್ಲೀಲತೆಯ ಸಮಸ್ಯೆಯಾಗಲಿ— ಮೂಲಭೂತವಾಗಿ ಏನಿದ್ದರೂ— ಪ್ರಾಪಂಚಿಕ ದೃಷ್ಟಿಯಿಂದ ಕಾಲಕಾಲಕ್ಕೆ ಪರಿವರ್ತನೆಗೊಳ್ಳುವುದು ಹಸಜ. ಹಾರ್ಡಿ ಬರೆದ 'ಟೆಸ್', ವೆಲ್ಸ್ ಬರೆದ 'ಏನ್ ವೆರೊನಿಕಾ' ಆಗಿನ ಕಾಲಕ್ಕೆ ಸ್ವೇಚ್ಛಾಕೃತಿಗಳೆಂದೂ ಅಶ್ಲೀಲವೆಂದೂ ಜರೆಯಲ್ಪಟ್ಟದ್ದವು. ಈಗ ಮನುಷ್ಯನ ಅವಶ್ಯಂಭಾವಿಯಾದ ಲೈಂಗಿಕ ಕ್ರಿಯೆಗಳನ್ನು ಮುಚ್ಚುಮರೆಯಿಲ್ಲದೆ ವ್ಯಾವರ್ಣಿಸುವ ಕಾದಂಬರಿಯನ್ನು ನೋಡಿ ಇಂಗ್ಲಂಡಿನಲ್ಲಿ ಯಾರೂ ಮೂಗುಮುರಿಯುವುದಿಲ್ಲ. ಬರಿಯ ಕಾಮಪ್ರಚೋದನೆಗಾಗಿ ಸಿದ್ಧವಾಗುವ ನಗ್ನ ಚಿತ್ರಗಳಂತೆ ಪಾಶ್ಚಾತ್ಯ ನಾಗರಿಕತೆಯಲ್ಲಿ ಒಳಗಿಂದೊಳಗೇ ಪ್ರಚಾರವಾಗುವ ಕೀಳ್ಮಟ್ಟದ ಕಥೆ ಕಾದಂಬರಿಗಳೂ ಇವೆ. ಅವನ್ನು ಯಾರೂ ಲೆಕ್ಕಹಿಡಿಯುವುದಿಲ್ಲ, ವಿಮರ್ಶಕರು ಮುಟ್ಟುವುದಿಲ್ಲ. ಕಾದಂಬರಿ ಹೊಸಬರಿಂದ ಬರಲಿ, ನಿಷ್ಣಾತರದಿರಲಿ, ವಿಮರ್ಶಕರು ಆದರಲ್ಲಿ ಬರುವ ದೃಶ್ಯಗಳು, ಸನ್ನಿವೇಶಗಳು ಕಾದಂಬರಿಯ ಕಥೆಗೆ ಪೋಷಕ

ವಾಗಿರುವುವೇ ಇಲ್ಲವೇ ಎಂಬುದನ್ನು ಪರೀಕ್ಷಿಸುವರೇ ವಿನಾ ಅವುಗಳ ಕಾಮಪ್ರಚೋದಕ ಉಷ್ಣಮಾನವನ್ನಳೆಯಲು ಹೋಗುವುದಿಲ್ಲ. ಕನ್ನಡದಲ್ಲೆ ಆದರೂ 'ಇಜ್ಜೋಡು', 'ಹೆತ್ತ ತಾಯಿ' ಮುಂತಾದ ಕಾದಂಬರಿಗಳಲ್ಲಿ ಸ್ಪಷ್ಟವಾಗಿಯೂ ಸೂಚ್ಯವಾಗಿಯೂ ಬಂದ ಅಶ್ಲೀಲವನ್ನು ವಿಮರ್ಶಕರು ವಿಶೇಷವಾಗಿ ಗಮನಿಸಿದಂತೆ ಕಾಣಲಿಲ್ಲ. ಕೇವಲ 'ಸಂಪ್ರದಾಯವಾದಿ'ಗಳ ಬೆನ್ನು ಮುರಿಯುವುದರ ಸಲುವಾಗಿ ಎಂಬಂತೆ, ನಿಶ್ಶಕ್ತ ಪಾತ್ರಗಳಿಂದ ಅಸ್ವಾಭಾವಿಕ ಪ್ರಸಂಗಗಳಲ್ಲಿ ಕಾಮಲೋಲುಪತೆಯನ್ನು ತೋರಿಸಿದಾಗ ಮಾತ್ರ ವಿಮರ್ಶಕರು 'ಇದು ಅಗತ್ಯವಿತ್ತೆ?' ಎನ್ನುವರಲ್ಲದೆ ಕಾದಂಬರಿಕಾರನ ಮೇಲಣ ದ್ವೇಷದಿಂದಲ್ಲ ಎಂಬುದನ್ನು ನಾವು ಮನಗಾಣುವುದು ಇನ್ನಾದರೂ ಒಳ್ಳಿತು. ಲೈಂಗಿಕ ಪ್ರವೃತ್ತಿಯು ಮನುಷ್ಯನ ಒಂದು ಮುಖ್ಯ ಕ್ರಿಯೆ ಎಂಬುದರಿಂದ ಅದನ್ನು ಕಾದಂಬರಿಯಲ್ಲಿ ಚಿತ್ರಿಸುವಾಗ ಸಂಯಮವು ಇರತಕ್ಕುದಲ್ಲ ಎಂಬ ಮಾತಿಗೆ ಒಂದೇ ಉತ್ತರ: ಲೈಂಗಿಕ ಕ್ರಿಯೆ ಮನುಷ್ಯನ ಹಲವಾರು ದೈಹಿಕ ಕಾರ್ಯಕಲಾಪಗಳ ಪೈಕಿ ಒಂದು. ಇದರಂತೆ ಮನುಷ್ಯನ ಇತರ ದಿನವಹಿ ಕ್ರಿಯೆಗಳನ್ನೂ ಕಾದಂಬರಿಯಲ್ಲಿ ಇಷ್ಟೇ ವರ್ಣರಂಜಿತವಾಗಿ ಚಿತ್ರಿಸುತ್ತ ಹೋದರೆ ಕೆನಡದಲ್ಲಿ ತಯಾರಾಗುವ ಕಾಗದವೆಲ್ಲ ಕರ್ನಾಟಕಕ್ಕೇ ಬರಬೇಕಾದೀತು! ಆರ್ಥಿಕ ರಂಗದಲ್ಲಿ ಹೇಗೋ ಸಾಹಿತ್ಯ ಕ್ಷೇತ್ರದಲ್ಲೂ ಹಾಗೆಯೇ ಅಯ್ಕೆಯ ಪ್ರಶ್ನೆ ಪ್ರಧಾನವಾದ್ದು. ಸಾಹಿತ್ಯವು ಸೌಂದರ್ಯೋಪಾಸನೆಯ ಒಂದು ಸಾಧನ. ಅಲ್ಲಿ ಎಲ್ಲವೂ ಸುಂದರವಾಗಿ ವರ್ಣಿಸಲ್ಪಡಬೇಕು. ಆದ್ದರಿಂದ ಕಾದಂಬರಿಯ ಪೋಷಣೆಗೆ, ವ್ಯಕ್ತಿಪುಷ್ಟಿಗೆ ಎಷ್ಟು ಅಗತ್ಯವೋ ಅಷ್ಟನ್ನು ಹೇಳಿದುದರಿಂದ ದೋಷವೂ ಇಲ್ಲ, ಪಾಪವೂ ಇಲ್ಲ. ಡಿ. ಎಚ್. ಲಾರೆನ್ಸ್‌ನ 'ಲೇಡೀ ಚಾಟರ್ಲೀಸ್ ಲವರ' 'ರೇನ್‌ಬೋ' ಇತ್ಯಾದಿ ಕಾದಂಬರಿಗಳಲ್ಲಿ ಕಂಡುಬರುವ ಕಾಮಕೇಳಿಯ ಅತಿರೇಕ ವರ್ಣನೆಗೆ ಅಲ್ಲಿರುವ ವ್ಯಕ್ತಿಗಳು ಲಾರೆನ್ಸನಂತೆಯೇ ಅಸಾಮಾನ್ಯ (Abnormal) ವ್ಯಕ್ತಿಗಳಾಗಿರುವದೂ ಸಾಮಾನ್ಯರಿಗಿಂತ ಹೆಚ್ಚಿನ ಲಾಲಸೆಯುಳ್ಳವರಾದ್ದೂ ಕಾರಣ. ಜೂಲ್ಸ್ ರೊಮೇನ್ಸ್‌ನ 'ಬೊಡೀಸ್ ರ್‍ಯಾಪ್ಪರ್' ವೈವಾಹಿಕ ಜೀವನದಲ್ಲಿಯೂ ವ್ಯಭಿಚಾರದಿಂದೊದಗುವಷ್ಟೇ ಎತ್ತರದ ಸ್ವರ್ಗವನ್ನು ಮುಟ್ಟಬಹುದೆಂಬುದನ್ನು ಉದ್ದೇಶವಾಗಿರಿಸಿಕೊಂಡು ಬರೆದ ಕಾದಂಬರಿ. ಅಲ್ಲಿಯ ಗಂಡ-ಹೆಂಡಿರ ಕಾಮೋತ್ಸರ್ಗದ ವಿವರಗಳು ಕಾದಂಬರಿಯ ಉದ್ದೇಶಕ್ಕೆ ಪರಮಾವಶ್ಯಕ. ವೈವಾಹಿಕ ಪ್ರೇಮವು ಎಷ್ಟು ನಿರ್ಮಲವೋ ವೈವಾಹಿಕ ಕಾಮವೂ ಅಷ್ಟೇ ನಿರ್ಮಲ. ಅದನ್ನು ರೋಮನ್ಸ್ ವರ್ಣಿಸಿದ ಭಾಷೆಯಾದರೂ ಅಷ್ಟೇ ಪರಿಶುದ್ಧವಾದುದು. ಕಡಮೆ ತರಗತಿಯ ಕಾದಂಬರಿಕಾರನ ಕೈಯಲ್ಲಿ ಇದು ಸಾಧ್ಯವಿಲ್ಲ. ಭಾಷೆಯ ಶುದ್ಧಿಯ ಜತೆಗೆ, ಲೇಖನಿಯ ಪಾವಿತ್ರ್ಯದ ಜತೆಗೆ, ಲೇಖಕನ ಹೃದಯವೂ ನಿರ್ಮಲವಾಗಿದ್ದರೇನೇ ಉತ್ತಮ ಕಲಾಕೃತಿಯು ಸಿದ್ಧಿಸುತ್ತದೆ ಎಂಬುದಕ್ಕೆ 'ಬೋಡೀಸ್ ರ್‍ಯಾಪ್ಪರ್' ಒಂದು ನಿದರ್ಶನ. ಆದರೆ ಈಚೆಗಿನ ಪಾಶ್ಚಾತ್ಯ ಕಾದಂಬರಿಗಳಲ್ಲಿನ ವಿವಾಹಬಾಹಿರವಾದ ಪ್ರಣಯಪ್ರಸಂಗಗಳ ಅತಿರೇಕ ವರ್ಣನೆಯನ್ನು ಅಲ್ಲಿನ ಸುಯೋಗ್ಯ ವಿಮರ್ಶಕರು ಖಂಡಿಸಿದ್ದುಂಟು. ಜೊನ್ ಓಹಾರಾನಂಥ ಲೇಖಕರನೇಕರು ಹುಚ್ಚರ ಆಸ್ಪತ್ರೆಯಿಂದ ಗುಣವಾಗದೆ ತಪ್ಪಿಸಿಕೊಂಡು ಹೊರಬಂದ ಪಾತ್ರಗಳ ಸೃಷ್ಟಿಯಲ್ಲಿ ನಿಸ್ಸೀಮರಾದರೂ ಅವರ ಕೃತಿಗಳು ಅಪ್ರಬುದ್ಧ ಜನರಿಗೆ ಪ್ರಿಯವೆನಿಸಿದರೂ ಪ್ರಚಲಿತ ಸಾಹಿತ್ಯ ಚರ್ಚೆಯಲ್ಲಿ ಅವರ ಹೆಸರನ್ನು ಯಾವ ವಿಮರ್ಶಕನೂ ಎತ್ತುವುದಿಲ್ಲ. ಇದರಿಂದ ಕನ್ನಡದ ಕಾದಂಬರೀಕರ್ತರು ಎಚ್ಚರಗೊಳ್ಳುವುದು ಒಳ್ಳೆಯದು.

## ಪಾಪ ಮತ್ತು ಪಶ್ಚಾತ್ತಾಪ

೧೯ ನೆಯ ಶತಮಾನದ ಔದ್ಯಮಿಕ ಪ್ರಗತಿಯೂ, ಭೌತಿಕ ಉನ್ನತಿಯೂ ಐರೋಪ್ಯ ಜನಾಂಗಗಳಲ್ಲಿ ಒಂದು ಉಲ್ಲಾಸದ ವಾತಾವರಣವನ್ನು ನಿರ್ಮಿಸಿದುವು. ಅಲ್ಲಿನ ಸಂಶೋಧಕರೂ ಬುದ್ಧಿಜೀವಿಗಳೂ ತತ್ವಜ್ಞಾನಿಗಳೂ ಲೇಖಕರೂ ಕೂಡಿ ಆಶಾವಾದದ ಭವ್ಯಗೋಪುರವನ್ನು ಕಟ್ಟುವುದರಲ್ಲಿ ಮಗ್ನರಾದರು. ಆದರೆ ೨೦ ನೆಯ ಶತಮಾನದ ಆರಂಭದಲ್ಲಿಯೇ ಯುರೋಪು ನರಕವಾಗುವ ಸಂದರ್ಭಗಳು ಸೃಷ್ಟಿಯಾದುವು. ಇಡಿ ಯುರೋಪು ಒಂದು ಪಾಪಕೂಪವಾಯಿತು. ಶತಶತಮಾನಗಳಿಂದ ಪಾಪವು ಸಂಗ್ರಹವಾಗುತ್ತಿದ್ದರೂ ಅಲ್ಲಿನ ಲೇಖಕರು ಅದನ್ನು ವಿಶೇಷ ಗಮನಿಸುತ್ತಿರಲಿಲ್ಲ. ಪಾಪದ ಜ್ಞಾನ ಅವರಿಗಿರಲಿಲ್ಲ. ಪಾಪ ಮಾಡಿ ಮರೆಯುವವರೇ ಬಹಳ, ಅದನ್ನರಿತು ಪರಿತಪಿಸುವವರು ಕಡಮೆ. ಡಾಸ್ಟೊವಸ್ಕಿಯ ರಾಸ್ಕಾಲ್‌ನಿಕೊವನ ಚಿತ್ರ ಐರೋಪ್ಯರ ಮುಖದ ಇದಿರಿಟ್ಟ ಕನ್ನಡಿಯಾಯಿತು. ದುಡ್ಡಿಗೋಸ್ಕರ, ವಿವೇಚನೆಯಿಲ್ಲದೆ, ತಲೆಯೊಳಗೆ ಬುದ್ಧಿಯು ಗೈರುಹಾಜರಿದ್ದಾಗ ರಾಸ್ಕಾಲ್‌ನಿಕೊವ ಮುದುಕಿಯನ್ನು ಕೊಲ್ಲುತ್ತಾನೆ. ಕೊಲ್ಲುವ ಉದ್ದೇಶ ಬಹಳ ದಿನಗಳಿಂದ ಇದ್ದರೂ ಡಾಸ್ಟೊವಸ್ಕಿ ಅದಕ್ಕೆ ಹೆಚ್ಚು ಮಹತ್ವ ಕೊಡುವುದಿಲ್ಲ. ಕರ್ಮವು ಹೆಚ್ಚಿನದಲ್ಲ, ಕರ್ಮಫಲ ಮಹತ್ವದ್ದು ಎಂಬುದನ್ನಿಲ್ಲಿ ತಿಳಿಯಬಹುದು. ಕೊಂದ ಒಂದು ಕ್ಷಣದಿಂದ ರಾಸ್ಕಾಲ್‌ನಿಕೊವನ ಪಶ್ಚಾತ್ತಾಪವು ಆರಂಭವಾಗುತ್ತದೆ, ಪಾಪದ ತೀಕ್ಷ್ಣವಾದ ತಿಳಿವು ಮೂಡುತ್ತದೆ, ಅನ್ಯಾಯದ ಹೊಲಬು ಹುಟ್ಟುತ್ತದೆ. ಮತ್ತೆಷ್ಟು ಪರಿತಪಿಸಿದರೂ ಮನುಷ್ಯನು ಜ್ಞಾನಿಯಾಗುವುದಿಲ್ಲ. ರಾಸ್ಕಾಲ್‌ನಿಕೊವನ ಮಾನಸಿಕ ಪ್ರಪಂಚವು ಒಂದು ದೊಡ್ಡ ಹುಚ್ಚರ ಆಸ್ಪತ್ರೆಯಾಗುತ್ತದೆ; ಎರಡು ಜಾಗತಿಕ ಸಮರಗಳನ್ನು ತಂದೊಡ್ಡಿದ ಪಾಶವೀ ಅತ್ಯಾಚಾರದಿಂದ ಮುಕ್ತಿಪಡೆಯಲಾರದ ಐರೋಪ್ಯ ನಾಗರಿಕತೆಗೂ ರಾಸ್ಕಾಲ್‌ನಿಕೊವನ ಅಂತಃಪ್ರಪಂಚಕ್ಕೂ ಯಾವ ವ್ಯತ್ಯಾಸವೂ ಇಲ್ಲ. 'ಬ್ರದರ್ಸ ಕರಮಜೋವ'ದಲ್ಲಿ ಡಾಸ್ಟೊವಸ್ಕಿ ಇನ್ನೊಂದು ಮೆಟ್ಟಲು ಮೇಲಕ್ಕೇರುತ್ತಾನೆ. ಕರಮಜೋವ ಸೋದರರಲ್ಲಿ ಒಬ್ಬನಾದ ಡಿಮಿತ್ರಿ ನಿಜವಾಗಿಯೂ ತಂದೆಯನ್ನು ಕೊಂದಿರುವುದಿಲ್ಲ. ಆದ್ದರಿಂದ ತಂದೆಯ ಕೊಲೆಪಾತಕಕ್ಕೆ ಅತ

ಹೊಣೆಯಲ್ಲ. ಆದರೂ ಕೊಲ್ಲಬೇಕೆಂಬ ಉದ್ದೇಶ ಮಾತ್ರ ಇದ್ದುದರಿಂದ ಅವನ ಹೃದಯ ಪಶ್ಚಾತ್ತಾಪದಿಂದ ಹುಚ್ಚಾಗಿಬಿಡುತ್ತದೆ. ಪಾಪಕರ್ಮ ಮಾತ್ರವಲ್ಲ,ಪಾಪಚಿಂತನೆ ಕೂಡ ಭಯಾನಕ; ಕರ್ಮಕ್ಕೆ ತಕ್ಕ ಫಲ ಬಂದೇಬರುತ್ತದೆ ಎಂಬುದು ಹಿಂದೂ ದರ್ಶನದ ಮತ. ಕ್ರೈಸ್ತ ಧರ್ಮವೂ ಇದನ್ನೇ ಸಾರುತ್ತದೆ. ಆದರೆ ಜನ್ಮಜನ್ಮಾಂತರಗಳಲ್ಲಿ ಪಾಪದ ಫಲವನ್ನು ಅನುಭವಿಸಬೇಕೆಂಬ ಹಿಂದೂ ತತ್ವಕ್ಕೆ ಡಿಮಿತ್ರಿ ಒಂದು ಉದಾಹರಣೆ: ಅತ ಒಂದೇ ಜನ್ಮದಲ್ಲಿ ಹಲವು ಸಲ ಹುಟ್ಟಿ ಸಾಯುತ್ತಾನೆ, ಎಷ್ಟು ಪಶ್ಚಾತ್ತಾಪಪಟ್ಟರೂ ಮುಕ್ತಿ ಇಲ್ಲ. ಪಾಪ ಮಾಡಿದರೆ ಪಶ್ಚಾತ್ತಾಪಪಡುವುದು ಧರ್ಮ, ಮುಕ್ತಿಯು ದುರ್ಲಭವಾದರೆ ಅದೇ ಲಭ್ಯ; ಅಪರಾಧಕ್ಕೆ ದಂಡನೆ ಇರುವುದು ಅನಿವಾರ್ಯ; ವ್ಯಕ್ತಿ, ಸಮಾಜ, ರಾಷ್ಟ್ರ— ಇದನ್ನರಿತು ನಡೆಯಬೇಕು. ಇಲ್ಲವಾದರೆ ಲೋಕವು ಬರಡಾಗುತ್ತದೆ. ಯುರೋಪು ಈಗಾಗಲೇ ಈ ಪಾಪಸಂಗ್ರಹದ ಭಾರದಿಂದ ಕುಸಿದಿದೆ.

## ನಾರುವ ನಗರಗಳು

ತನ್ನ ಪಾಪಕ್ಕೆ ತಾನೇ ಬಲಿಯಾದ ಐರೋಪ್ಯ ಸಂಸ್ಕೃತಿಯನ್ನು ಬಳಸಿಕೊಳ್ಳುವ ಕಾದಂಬರಿಕಾರರು ಅಲ್ಲಿನ ಬೃಹನ್ನಗರಗಳನ್ನು ಸಾಂಕೇತಿಕವಾಗಿ ಉಪಯೋಗಿಸಿಕೊಂಡಿದ್ದಾರೆ. ಜೇಮ್ಸ್ ಜೊಯ್ಸನ 'ಯುಲಿಸಿಸ್'ನಲ್ಲಿರುವ ಡಬ್ಲಿನ್, ಎಲಿಯಾಸ ಕನೆಟ್ಟಿಯ 'ಒಟೋ-ಡ-ಫೆ' ಯಲ್ಲಿ ಬರುವ ವಿಯೆನ್ನಾ, ಸಿಲೋನೆಯ 'ಫಂಟ್‌ಮಾರಾ'ದ ರೋಮ ನಗರಗಳು ಸಾಂಸ್ಕೃತಿಕ ಅಧಃಪತನದ ವಿಕೃತವೇಷಗಳು. ಹಕ್ಸ್‌ಲಿಯ 'ಬ್ರೇವ್ ನ್ಯೂ ವರ್ಲ್ಡ್' ಜಾರ್ಜ ಆರ್ವೆಲನ '೧೯೮೦' ಎಂಬ ಕಾದಂಬರಿಗಳು ಅಸಂಭಾವ್ಯವೆನಿಸಿದರೂ ಸಂಭಾವನೆಯ ಲಕ್ಷಣಗಳು ಇಷ್ಟು ಹೊತ್ತಿಗೇ ಕಂಡುಬಂದ ವಿಚಿತ್ರ ವಿಶ್ವವನ್ನು ಸೃಷ್ಟಿಸಿರುವುವು. 'ಒಡೋ-ಡ-ಫೇ'ಯ ನಾಯಕ ಒಬ್ಬ ಭಾಷಾವಿಜ್ಞಾನಿ, ಸಾವಿರ ಸಾವಿರ ಗ್ರಂಥಗಳ ನಡುವೆ ಅವಿಶ್ರಾಂತವಾಗಿ ಶ್ರಮಿಸುವ ಅಭ್ಯಾಸಿ. ಸ್ವಕಪೋಲ ಕಲ್ಪಿತವಾದ ಪ್ರಪಂಚದಲ್ಲಿ ಅವನ ಅವಾಸ. ಆದರೇನು, ಏನೋ ಒಂದು ಕ್ಷಣಿಕವಾದ, ಮಾನವ ಸಹಜವಾದ ದೌರ್ಬಲ್ಯಕ್ಕೆ ಈಡಾಗಿ ಮನೆಯ ಊಳಿಗದ ಹೆಣ್ಣನ್ನು ವಿವಾಹ ಮಾಡಿಕೊಳ್ಳುತ್ತಾನೆ. ಅವನ ಬವಣೆ ಅಲ್ಲಿಂದ ಆರಂಭವಾಯಿತು. ಹೆಂಡತಿ ಈ ಅಪ್ರಯೋಜಕನನ್ನು ಮನೆಯಿಂದ ಹೊರತಳ್ಳುತ್ತಾಳೆ. ಪ್ರತಿ ನಗರದಲ್ಲಿಯೂ ಮುಖ್ಯ ಅಂಶವಾಗಿರುವ ' ಭೂಗರ್ಭಲೋಕ ' ( Under–world ) ದಲ್ಲಿ ಕೆಲಗಾಲ ಭಾಷಾಪಂಡಿತನು ಜೀವಿಸಬೇಕಾಗಿ ಬರುತ್ತದೆ. ಅಲ್ಲಿಯ ಪರಿಸರದಿಂದಲೂ ಒಡನಾಟದಿಂದಲೂ ಅವನಿಗೆ ಉನ್ಮಾದವು ತಗಲುತ್ತದೆ. ಉನ್ಮಾದದ ಅತಿರೇಕದಲ್ಲಿ ಸ್ವಂತ ಗ್ರಂಥಭಾಂಡಾರಕ್ಕೆ ಉರಿ ಹಚ್ಚಿ ಆ ಜ್ವಾಲೆಯಲ್ಲಿ ಅತ್ಮಾಹುತಿ ಮಾಡಿಕೊಳ್ಳುತ್ತಾನೆ. ಇದು ಜಗತ್ತಿನ ಭಗ್ನ ಸಂಸ್ಕೃತಿಯ ಜ್ವಲಂತ ಚಿತ್ರ. ಈ ಪ್ರಪಂಚದಲ್ಲಿ ಶಾಂತಿ ಇಲ್ಲವೆ ?– ಇದೆ, ಗಾಳಿಗೋಪುರದಲ್ಲಿ, ಕಲ್ಪನಾಲೋಕದಲ್ಲಿ, ಕೃತ್ರಿಮ ಪ್ರಪಂಚವನ್ನು ನಿರ್ಮಿಸಿಕೊಂಡವರಿಗೆ. ಅದು ಚಿರಾಯುವೆ? ಹೌದು, ಎಂದಿನತನಕ ಪ್ರಪಂಚದ ಮೌಢ್ಯ, ತೃಷ್ಣೆ, ಕಾಮಕ್ರೋಧಾದಿ ಅರಿಷಡ್ವರ್ಗಗಳು ಅದನ್ನು ಸ್ಪರ್ಶಿಸುವುದಿಲ್ಲವೋ ಆ ತನಕ. ನಮ್ಮ ಕಲ್ಪನೆಯ ಗಾಳಿಪಟವನ್ನು ಹಾರಿಸಿ, ನಾವೆಷ್ಟು ದೊಡ್ಡ ಆದರ್ಶಗಳನ್ನು ಹಾಕಿಕೊಂಡರೂ ಅವು ಮಾನವನ ಅಂತರ್ಯದಲ್ಲಿ ದೃಢವಾಗಿ ಬೇರುಬಿಟ್ಟಿರುವ ದೌರ್ಜನ್ಯ, ದುಷ್ಪ್ರವೃತ್ತಿ, ಆಸುರೀ ಭಾವಗಳೊಡನೆ ಹೋರಾಡಿ ಗೆಲಲಾರವು ಎಂಬುದು 'ಒಟೊ-ಡ-ಫೇ'ಯ ಸಂದೇಶ. ಹಕ್ಸ್‌ಲಿಯ ' ಎಪ್ ಎಂಡ್ ಎಸೆನ್ಸ್ ' ಕಾಲ ದೇಶಾತೀತವಾಗಿ ವ್ಯಾಪಿಸಿದ ಒಂದು ಕಾದಂಬರಿ. ಇಲ್ಲಿ ಗಾಂಧೀಜಿಯ ಕೊಲೆಯನ್ನು ನಾಗರಿಕತೆಯ ಆತ್ಮಹತ್ಯೆಯ ಸಂಕೇತವಾಗಿ ಹಕ್ಸ್‌ಲೀ ಬಳಸಿಕೊಂಡಿದ್ದಾನೆ. ಕಾದಂಬರಿಯ ತೆರೆ ಮೇಲೇಳುವುದೇ ಒಂದು ಪಾಪಕೃತ್ಯದಿಂದ. ಅಲ್ಲಿಂದ ಸುದೂರ ಭವಿಷ್ಯದಲ್ಲಿ ಮನುಷ್ಯನು ಮರಳಿ ಪಶುಜೀವನವನ್ನು ನಡೆಸುತ್ತಿರುವ ನಿರಾಶಾಮಯವಾದ ವರ್ಣನೆ ಬರುತ್ತದೆ.

## ನಾವು ಎಲ್ಲಿದ್ದೇವೆ ?

ಈ ಬಗೆಯಾಗಿ ಲೋಕದ ನೋವಿನ ಕುರಿತು, ಪ್ರಜೆಗಳ, ಸಮಾಜಜೀವನದ ಅಮರ ವೇದನೆಯ ಕುರಿತು ಗಾಢವಾಗಿ ವಿಚಾರ ಮಾಡುವ ಲೇಖಕರು ನಮ್ಮಲ್ಲಿ ಯಾರಿದ್ದಾರೆ ? ಮನುಷ್ಯ ಸಮಾಜದ ಅಂತರ್ಯದಲ್ಲಿರುವ ಪಾಪದ ಮೊತ್ತವನ್ನು ಅಂತಃಕರಣದಿಂದ ತಿಳಿಯಬೇಕೆಂಬ ಜ್ಞಾನಪಿಪಾಸೆ ಯಾರಲ್ಲಿದೆ ? ಕಾಫ್ಕಾ, ಹಕ್ಸ್‌ಲೀ, ಫಾಕ್‌ನೇರ, ಪ್ರೂಸ್ಟ, ಥಾಮಸ್ ಮಾನ್ ಇವರ ಬೌದ್ಧಿಕ ಉನ್ನತಿಯನ್ನು ಮುಟ್ಟಿದವರಾಗಲಿ, ಮುಟ್ಟಲೆಳಸುವವರಾಗಲಿ ಎಷ್ಟು ಜನ ಇದ್ದಾರು ? ಐರೋಪ್ಯ ಕಾದಂಬರಿಕಾರನು ಒಂಬು ಸ್ವಂತ ದರ್ಶನವನ್ನು ಕಟ್ಟಿಕೊಳ್ಳುತ್ತಾನೆ, ಸ್ವತಃ ತತ್ವಜ್ಞಾನಿ ಇರುತ್ತಾನೆ. ಅಥವಾ ಇನ್ನೊಬ್ಬರ ದರ್ಶನದಿಂದ ಲಾಭ ಪಡೆಯುತ್ತಾನೆ. ಪ್ರೂಸ್ಟ್ ಬರ್ಗಸಾನನಿಂದ ಪಡೆದಂತೆಯೂ ಜೆಮ್ಸ್ ಜಾಯ್ಸನು ಫ್ರಾಯ್ಡ್, ಯುಂಗ ಮೊದಲಾದ ಮನಃಶಾಸ್ತ್ರಿಗಳಿಂದ ಎರವಲು ತಂದಂತೆಯೂ, ಗ್ರಾಹಾಂ ಗ್ರೀನ್ ಕಾಫ್ಕಾನಿಂದ ಸ್ಫೂರ್ತಿವೆತ್ತಂತೆಯೂ ಕನ್ನಡದ ಕಾದಂಬರಿಕಾರರು ಯಾರು ಯಾರಿಂದ ಏನನ್ನು ಪಡೆದಿದ್ದಾರೆ? ನಮ್ಮವರು "ಸಾಮಾನ್ಯ ಸಂಸಾರದ ಸಾಮಾನ್ಯಜೀವನದ ಏರುಪೇರುಗಳನ್ನುಚಿತ್ರಿಸಲು ಯತ್ನಿಸು"ತ್ತಾರೆ. ಸಮಸ್ಯೆಗಳ ಬಗ್ಗೆ ಮುನ್ನುಡಿಯಲ್ಲಿ ವಿಶೇಷ ಕಾತರತೆಯನ್ನು ತೋರಿಸುತ್ತಾರೆ. ಅಲ್ಲಿ ಅವರು ಕಲಿಭೀಮರು, ಅರಿಭಯಂಕರರು! ಸಮಾಜದ ಆರ್ಥಿಕ, ಸಾಮಾಜಿಕ ವೈಷಮ್ಯಗಳ ಮೇಲೆ ಗದಾಪ್ರಹಾರದ ಸಂಭ್ರಮವೋ, ವಜ್ರಾಘಾತದ ವಿಲಾಸವೋ ! ಆದರೆ ಕಾದಂಬರಿ ಆರಂಭವಾಗುವಾಗಲೇ ಅವನ್ನೆಲ್ಲ ಮರೆತುಬಿಟ್ಟು ವಿಚಾರಕ್ಕೆ ಬಲು ದೂರವಾಗಿಯೂ ಸಾಹಿತ್ಯದ ಪ್ರಯೋಜನಕ್ಕೆ ಅನುಪಯುಕ್ತವಾಗಿಯೂ ಇರುವ ಪಂಗುಗಳನ್ನು ಸೃಷ್ಟಿಸಿ ' ಇವನೇ ರಾಮ, ಈಕೆಯೇ ಸೀತೆ ' ಎಂದು ಓದುಗರೂ ವಿಮರ್ಶಕರೂ ಒಪ್ಪಿಕೊಳ್ಳುವಂತೆ ಒತ್ತಾಯಿಸುತ್ತಾರೆ. ಸಣ್ಣಪುಟ್ಟ ಸಮಸ್ಯೆ

ಗಳೇ ನಮ್ಮ ಕತ್ತು ಹಿಚುಕುವಾಗ ಸಮಾಜೋದ್ಧಾರವೆಲ್ಲಿ ಬಂತು, ನಾಗರಿಕತೆ ಹೇಗೆ ಬಂದೀತು? ಜೊಸೆಫ್ ಕಾನ್ರಾಡ್ ಒಂದು ಕಡೆ “ತೀರ ಸಾಮಾನ್ಯವಾಗಿರುವ ಭಾವನೆಗಳನ್ನು ಮೀರಿ ನಿಲ್ಲುವ ತ್ರಾಣ ನಮ್ಮಲ್ಲಿ ಕೆಲವರಿಗೆ ಮಾತ್ರ ಇರುತ್ತದೆ” ಎಂದಿರುವನು. ಇದು ಕನ್ನಡ ಕಾದಂಬರೀಲೋಕದಲ್ಲಿ ಅಕ್ಷರಶಃ ನಿಜ. ಕೂತರೆ ನಿಂತರೆ ಪಾತ್ರಗಳ ಕಣ್ಣಿನಿಂದ ನೀರು ಬರಿಸಲು ಚತುರರೇ ವಿನಾ, ಆ ಕಣ್ಣೀರಿನ ಒಂದೊಂದು ಬಿಂದುವಿನ ಹಿಂದೆ ಸಂದ ವೇದನೆಯನ್ನು ಮೂಕಶೈಲಿಯಲ್ಲಿ ಮಾತ್ರ ಪ್ರಕಟಿಸಿಯೇವು. ‘ಮರಳಿ ಮಣ್ಣಿಗೆ’ ಯಲ್ಲಿ ರಾಮೈತಾಳರ ತೊಡೆಯ ಮೇಲೆ ಮಲಗಿದ ಪಾರೋತಿಯ ಕಡೆಗಾಲದ ಬಣ್ಣನೆಯು ಆಕೆಯ ಆಕಾಂಕ್ಷೆಯ ಪಾರಮ್ಯವನ್ನು ಸೂಚಿಸಿದ ಹಾಗಿನ, ‘ಮುಗಿದ ಯುದ್ಧ’ದ ಕೊನೆಯಲ್ಲಿ ಬರುವ ನೆರೆಮನೆಯ ಭೋಜನದ ಪ್ರಸಂಗ ಮಾಸ್ತರನ ಜೀವನದ ದುರಂತವನ್ನು ಮೊನೆಯಲ್ಲಿ ತಂದಿಟ್ಟಹಾಗಿನ, ಕಲಾತ್ಮಕ ಸನ್ನಿವೇಶಗಳು ಕನ್ನಡ ಕಾದಂಬರೀ ಕ್ಷೇತ್ರದಲ್ಲಿ ವಿರಳೆಣಿಕೆಗೆ ಮಾತ್ರ ಸಿಕ್ಕಾವು. ಮಿಂಚಿ ಮಾಯವಾಗಿ ಹೋಗುವ ಇಂಥ ರಸಭರಿತ ಪ್ರಸಂಗಗಳನ್ನು ಕಾದಂಬರಿಯ ಉದ್ದಗಲಕ್ಕೂ ನಿಲಿಸಬಲ್ಲ ಕುಶಲ ಶಿಲ್ಪಿಯು ನಮ್ಮಲ್ಲಿ ಇನ್ನೂ ಉದಿಸಬೇಕಾಗಿದೆ.

### ಅನುವಾದಗಳ ಸ್ಥಾನ

ಪಾಶ್ಚಾತ್ಯ ಲೋಕದಲ್ಲಿ ಮೌಲಿಕ ಕಾದಂಬರಿಗಳಿಗಿರುವಷ್ಟೇ ಮಹತ್ವವನ್ನು ಅನುವಾದಿತ ಕೃತಿಗಳಿಗೂ ಕೊಡುತ್ತಾರೆ. ೧೯೧೨ ರಲ್ಲಿ ರಶಿಯದ ಮಹಾಗ್ರಂಥ ‘ಬ್ರದರ್ಸ ಕರಮಜೊವ’ದ ಕೊನ್ಸ್ಟನ್ಸ್ ಗಾರ್ನೆಟ ಅನುವಾದವು ಆಂಗ್ಲಲೋಕಕ್ಕೆ ಲಭಿಸಿತು. ಸಿಗ್ಮಂಡ ಫ್ರಾಯ್ಡನ ಸ್ವಪ್ನಶಾಸ್ತ್ರದ ಮತ್ತು ಮನೋವಿಜ್ಞಾನದ ಗ್ರಂಥಗಳು ಆಂಗ್ಲ ಸಾಹಿತ್ಯದ ಮೇಲೆ ಮಾಡಿದ ಪರಿಣಾಮಕ್ಕೆ ಸರಿಮಿಗಿಲೆನಿಸುವ ಪ್ರಭಾವವನ್ನು ‘ಬ್ರದರ್ಸ ಕರಮಜೊವ’ ಮಾಡಿದೆ ಎನ್ನುವಾಗ ಅಲ್ಲಿ ಅನುವಾದಗಳ ಪ್ರಾಶಸ್ತ್ಯವನ್ನು ಅರಿಯಬಹುದಾಗಿದೆ. ಜಾಗೃತಾವಸ್ಥೆಯ ಮೇಲುಹೊದಿಕೆಯನ್ನು ಓಸರಿಸಿ, ಮನುಷ್ಯನ ಅಂತರಾಳದಲ್ಲಿ ಅಡಗಿರುವ ಪ್ರಚ್ಛನ್ನ, ಅಜ್ಞಾತ ಚೇತನವನ್ನು ಎಚ್ಚರಿಸುವ ಕೆಲಸ ಡಾಸ್ಟೊವಸ್ಕಿಯ ಈ ಕಾದಂಬರಿಯಿಂದ ಆಯಿತಂತೆ. ಪರದೇಶದ ಪ್ರತಿಯೊಂದು ಉತ್ಕೃಷ್ಟ ಕಾದಂಬರಿಯೂ ಇಂಗ್ಲೀಷ ಅನುವಾದದಲ್ಲಿ ದೊರೆಯುತ್ತದೆ. ಅದಕ್ಕೆ ಆಂಗ್ಲಾಳದಲ್ಲಿ ಮೌಲಿಕ ರಚನೆಗಳಷ್ಟೇ ಗಿರಾಕಿ ಇರುತ್ತದೆ. ಇದನ್ನು ನೋಡುವಾಗ ಕನ್ನಡ ಕಾದಂಬರೀ ಪ್ರಪಂಚದ ಬಡತನವು ಇಷ್ಟನ್ನು ಸ್ಪಷ್ಟವಾಗುತ್ತದೆ. ಪ್ರಪಂಚದ ನೂರಾರು ಕಾದಂಬರಿಗಳು ಕನ್ನಡ ಅನುವಾದಕ್ಕಾಗಿ ಕಾದು ನಿಂತಿವೆ. ಸಾಹಸಿ ಪ್ರಕಾಶಕರೂ ಸಾಹಸಿ ಲೇಖಕರೂ ಸಹಕರಿಸಿ ಮಾಡುವ ಅನುವಾದಗಳಿಗೆ ಓದುಗರ ಪ್ರೋತ್ಸಾಹವು ದೊರೆಯುವುದವಶ್ಯ.

### ಉಪಸಂಹಾರ

ನಾವು ಇದು ವರೆಗೆ ನಮ್ಮ ಕಾದಂಬರಿಗಳಲ್ಲಿ ಸಾಧಿಸಿದ ಗೊತ್ತುಗುರಿಗಳಿಗಿಂತಲೂ ಹೆಚ್ಚಿನ ಎತ್ತರದ ಶಿಖರಗಳು ಪಾಶ್ಚಾತ್ಯ ಲೋಕದಲ್ಲಿ ಇರುವುವೆಂದೂ ಅವನ್ನು ನಾವು ಈಗಲೇ ಮುಟ್ಟುವುದು ಅಶಕ್ಯವಾದರೂ ಕಾಲಕ್ರಮೇಣ ಮುಟ್ಟಬೇಕೆಂದೂ ಆ ವರೆಗೆ ಸಾಧನೆಯನ್ನು ಬಿಡಲಾಗದೆಂದೂ ಈ ವಿಷಯದಲ್ಲಿ ‘ದೈವಿಕ ಅಸಂತೃಪ್ತಿ’ (Divine Discontent) ಯನ್ನು ತಳೆಯಬೇಕಾಗಿದೆ ಎಂದೂ ಹೇಳಿದಂತಾಯಿತು. ನಮ್ಮ ಕಾದಂಬರಿಕಾರರು ಈ ವರೆಗೆ ಗಳಿಸಿದ ಯಶಸ್ಸಿನ ಗೋಪುರಕ್ಕೂ ಇನ್ನು ಮುಂದೆ ಅನತಿಕಾಲದಲ್ಲೇ ಅದಕ್ಕಿಡುವ ಕಳಸಕ್ಕೂ ಧನ್ಯವಾದಗಳನ್ನೂ ಕೃತಜ್ಞತೆಯನ್ನೂ ಅರ್ಪಿಸುವುದು ನಮಗೆ ಕರ್ತವ್ಯವಾಗಿದೆ.

---

ಪ್ರೇಮವಿಲ್ಲದ ವಿವಾಹವಿದ್ದಲ್ಲಿ ವಿವಾಹವಿಲ್ಲದ ಪ್ರೇಮವೂ ಇದ್ದೇ ತೀರುವುದು.

—ಫ್ರಾಂಕ್ಲಿನ್

---

# ಸುಭದ್ರಾ

೧

ಪಾಂಡವ ಕುಲದ್ಯುಮಣಿ ಗಾಂಡೀವಿ ಪಾರ್ಥ
ಕೌಪೀನವುಟ್ಟು
ಕಾಷಾಯ ವಸನಗಳ ಮೇಲುದವ ತೊಟ್ಟು
ಶಿರದೊಳೊಪ್ಪಿತ್ತು ಜಡೆ ಮುರಿಗೆಕಟ್ಟು
ಹಣೆಗೆ ಗೋಪೀಚಂದನದ ಮುದ್ರೆಗಳನಿಟ್ಟು
ಸಂನ್ಯಾಸಿಯಾಗಿ ಸಂಚರಿಸುತಿರಲು ಪುಣ್ಯ ತೀರ್ಥ
ದ್ವಾರಕೆಯ ನೆರೆಯ ರೈವತಕ ಗಿರಿಯಲ್ಲಿ
ರಾಜಕುಲಕ್ರೀಡಾವಿಹಾರ ವನದೊಳಗೆ
ಪದ್ಮಾಸನಸ್ಥನಾಗಿ
ವೈರಾಗ್ಯಯೋಗಧ್ಯಾನಸ್ಥನಾಗಿ
ಈ ರಾಜಯೋಗಿ
ತುಂಬಿದ ಕಮಂಡಲುವ ತನ್ನ ಬದಿಗಿರಿಸಿ
ನಿಂತ ತ್ರಿದಂಡದಲಿ ಮೊಳಕೈಯನಿರಿಸಿ
ಕುಳಿತಿದ್ದನಶ್ವತ್ಥ ಮರದ ಕೆಳಗೆ
ಕಣ್ಣುಗಳ ಮುಚ್ಚಿ.
ಮುಗಿಲಂಚಿನಲ್ಲಿ ಕಾಂಚನ ಮೇಘಗಳ ಮರೆಗೆ
ಉದಯ ರವಿಯುಡಗಿ ಹೊಳೆದಂತೆ ಧರೆಗೆ
ರಾಜಯೋಗಿಯ ಮನದ ದಲದಲವ ಬಿಚ್ಚಿ
ಉಕ್ಕೇರುತಿತ್ತು ಕ್ಷತ್ರಿಯರ ಪುರುಷಾರ್ಥ
ಸಂನ್ಯಾಸಿ? ಪಾರ್ಥ!

೨

ಧವಲ ಶಿಲೆಯರಮನೆಯೊಳಂತಃಪುರದಿ ಕುಳಿತು
ಗಂಭೀರ ಮುದ್ರೆ ತಳೆದು
ಶ್ರೀಕೃಷ್ಣ ಸತ್ಯಭಾಮೆಯರು ಚದುರಂಗವಾಡಿರಲು
ಅಶ್ವತ್ಥಮರದಡಿಯ ಪಾರ್ಥಸಂನ್ಯಾಸ
ರೈವತಕ ಗಿರಿಯ ಯತಿವೇಷ ವಿನ್ಯಾಸ
ಮನದೆದುರು ಮೂಡುತಿರಲು
ಭಗವಂತ ಗಹಗಹಿಸಿ ನಗೆಯಾಡುತಿರಲು
ಮುತ್ತು ಸುರಿದಂತೆ;
ನಕ್ಷತ್ರಗಳ ದಿವ್ಯ ಧಾರೆಯೆರೆದಂತೆ
ಬೆಳ್ಳಕ್ಕಿಗಳ ಸಾಲು ರೆಕ್ಕೆ ತೆರೆದಂತೆ
ಕಡಲ ನೀಲ ತರಂಗ ಕಡೆದ ಬೆಳ್ನೊರೆಯಂತೆ
ಸಾಮವೇದ ಸಮುದ್ರ ಲಹರಿ ಮೊರೆದಂತೆ
ನಾದಲೀಲಾಲೋಲನಾನಂದವೆರೆದಂತೆ
ನಗೆ ಬೆಳಕಿನಂತೆ ದಿಗ್ದೆಸೆಗೂಡುತಿರಲು
ಸತ್ಯಭಾಮಾದೇವಿ
ಕೇಳಿದಳು ದಿಙ್ಮೂಢ ವಿಸ್ಮಯದ ನುಡಿಯಲ್ಲಿ :
“ನಗೆಯ ಕಾರಣವೇನು, ಪ್ರಾಣನಾಥ?”
ನುಡಿದನು ಜಗನ್ನಾಥ:
“ರೈವತಕ ಗಿರಿಯೊಳಶ್ವತ್ಥಮರದಡಿಯಲ್ಲಿ
ನಡೆದಿಹುದು ಕಣ್ಣುಮುಚ್ಚಾಟ!”

— ಸು. ರಂ. ಎಕ್ಕುಂಡಿ



ನಮ್ಮ ಪೋಷಕರಿಗೂ, ಗ್ರಾಹಕರಿಗೂ
ಮತ್ತು ಪಾಲುದಾರರಿಗೂ

ದೀಪಾವಳಿಯು
ಸುಖ ಸಮೃದ್ಧಿಯನ್ನೀಯಲಿ !



ಪ್ರಾಮಾಣಿಕ ಹಾಗೂ ಮನಃಪೂರ್ವಕ
ಸೇವೆಯೇ ನಮ್ಮ ಗುರಿ !

# ದಿ ಬ್ಯಾಂಕ ಆಫ್ ಕರ್ನಾಟಕ ಲಿ.,

ಎಲ್. ಡಿ. ನಾಡಗೀರ, ಮ್ಯಾನೇಜಿಂಗ ಡಾಯರೆಕ್ಟರ

| | | |
|---|---|---|
| ಅಧಿಕೃತ ಬಂಡವಲು | . | ರೂ. ೧೦,೦೦,೦೦೦ |
| ತೆತ್ತ ಬಂಡವಲು | . | ರೂ. ೫,೧೫,೪೦೦ |
| ವಸೂಲಾದ ಬಂಡವಲು | . | ರೂ. ೫,೦೨,೯೫೦ |

ನೂರಕ್ಕೆ ವರ್ಷಕ್ಕೆ ೪ ಬಡ್ಡಿಯ ದರದಂತೆ ೩ ವರ್ಷಗಳ ಅವಧಿಯ

**" ಕುಬೇರ " ಕ್ಯಾಶ ಸರ್ಟಿಫಿಕೇಟುಗಳು**

ರೂಪಾಯಿ ೧೦, ೫೦ ೧೦೦ ಮತ್ತು
೧೦೦೦ ರೂಪಾಯಿಗಳಲ್ಲಿ ದೊರೆಯುವವು.



ಪ್ರತಿ ತಿಂಗಳು ಕಂತಿನ ರೂಪದಿಂದ ವಸೂಲು ಮಾಡುವ
ಮೂರು ವರ್ಷದ ಅವಧಿಗೆ ಮುಗಿಯುವ

'' ಕ್ಯುಮ್ಯುಲೇಟಿವ್ಹ ಡಿಪಾಜಿಟ್ '' ಗಳನ್ನು
ಸ್ವೀಕರಿಸಲಾಗುವದು.

ಹೆಡ್ ಆಫೀಸ

ಹುಬ್ಬಳ್ಳಿ

● ಶಾಖೆಗಳು

ಬೆಳಗಾವ
ಜಮುಖಂಡಿ
ಬನಹಟ್ಟಿ
ಕುಂದಗೋಳ
ಸವಣೂರ

ಹೋಮ್ ಸೇವ್ಹಿಂಗ್ಸ್ ಸೇಫ್ ಡಿಪಾಜಿಟ್‌ಗಳನ್ನು ಸ್ವೀಕರಿಸುವದು
ಈ ವರ್ಷದ ವಿಶೇಷ ಯೋಜನೆಯು.

ವಿವರಗಳಿಗಾಗಿ ಬ್ಯಾಂಕಿನಲ್ಲಿ ವಿಚಾರಿಸಿರಿ.

**ನಿಮ್ಮ ಬ್ಯಾಂಕ ಆಫ್ ಕರ್ನಾಟಕದಲ್ಲಿ ನೀವು ಖಾತೆದಾರರಿರುವಿರಾ ?**

ಇಲ್ಲವಾದಲ್ಲಿ ಇಂದೇ ನಿಮ್ಮ ಖಾತೆಯನ್ನು ದಯವಿಟ್ಟು ಸುರುವು ಮಾಡಿರಿ !




ಅಚುಂಬಿತ ತಾರೆ

ನಿಮ್ಮಿ

# ನಿಮ್ಮಿಯೊಡನೆ ನಾಲ್ಕು ನಿಮಿಷ

ಮದುವೆ ನೋಡಬಂದವಳನ್ನೇ ಹಿಡಿದು ಮದುವಣಗಿತ್ತಿ ಮಾಡಿದಂತೆ ಚಲಚ್ಚಿತ್ರ ತೆಗೆಯುವದನ್ನು ನೋಡಬಂದಿದ್ದ ನವಾಬ ಬಾನುವನ್ನು ಹಿಡಿದು ರಾಜಕಪೂರ "ಬರ್ಸಾತ" ದಲ್ಲಿ ಕುಣಿಸಿದ. ನವಾಬ ಬಾನು "ನಿಮ್ಮಿ" ಯಾಗಿ ರಾತ್ರಿ ಬೆಳಗಾಗುವುದರೊಳಗೆ ತಾರಾಲೋಕದ ಉಜ್ವಲ ಜ್ಯೋತಿಯಾಗಿ ಬಿಟ್ಟಳು. ೧೯೪೮ ರಲ್ಲಿ ಹೀಗೆ ಚಿತ್ರವೊಂದಕ್ಕೆ ರೂ. ೭,೦೦೦ ದಿಂದ ಪ್ರಾರಂಭವಾದ ಅವಳ ಇತಿಹಾಸ ಇಂದು ಚಿತ್ರಕ್ಕೆ ರೂ. ೧,೦೦,೦೦೦ ಕ್ಕೂ ಮಿಕ್ಕಿದ ಆದಾಯದ ಹಂತಕ್ಕೆ ಮುಟ್ಟಿದೆ.

ಲೇಖಕರು: ಶ್ರೀ. ಕುತ್ತುಪಾಡಿ ಗೋಪಾಲಕೃಷ್ಣ ಹೆಗಡೆ

---

"ಹೌದು. ಬರೇ ನಾಲ್ಕು ನಿಮಿಷ"– ನಾನೆಂದೆ. ದೀಪಾವಳಿಯ ಉಡುಗೊರೆಯೆಂದು ನಿಮ್ಮ ನಚ್ಚುಮೆಚ್ಚಿನ ನಿಮ್ಮಿಯನ್ನು ಕಂಡು ಅವಳದೊಂದು ಜೀವನಚಿತ್ರ ನಿಮಗೆ ಕಾಣಿಕೆ ಕೊಡಬೇಕೆಂದಿದ್ದೆ. ಮಾತ್ರ ಅದು ನೆರವೇರಬೇಕಾದರೆ ನಾನು ನಾಲ್ಕು ಲೋಕಗಳನ್ನು ಸಂಚರಿಸಬೇಕಾಯಿತು.

"ನಾನು ಸಮ್ರಾಟನಾಗಿರುತ್ತಿದ್ದರೆ ನಿನಗೆ ಬಾನಲ್ಲಿದ್ದ ನಕ್ಷತ್ರಗಳನ್ನು ತಂದು ಮುಡಿಸುತ್ತಿದ್ದೆ"– ಎಂದಿದ್ದನಂತೆ ಯಾರೋ ಹುಚ್ಚು ಪ್ರೇಮಿಯೊಬ್ಬ. ಅದೇ ರೀತಿಯಲ್ಲಿ "ನಾನೊಬ್ಬ ಮಾರವಾಡಿ ಶೇಠಜೀ ಆಗಿಬಿಟ್ಟಿದ್ದರೆ ಚಲಚ್ಚಿತ್ರ ತಾರೆಗಳನ್ನೆಲ್ಲಾ ಕ್ರಯಕ್ಕೆ ಕೊಂಡುಕೊಳ್ಳುತಿದ್ದೆ" ಎಂಬ ಆವೇಶ ನನ್ನಲ್ಲಿ ಮೂಡಿತು. ಚಲನಚಿತ್ರದ ಮಿಂಚು ಹುಳಗಳೆಲ್ಲ ಇಂದು ಆಗಸವನ್ನೇರಿವೆ! ಜೀವಂತ ತಾರೆಗಳ ಪೂಜೆಯಿಂದಾಗಿ ಜೀವನ ನಿರ್ವಿಣ್ಣವಾಗಿ ಬಿಟ್ಟಿದೆ! ಇಲ್ಲವಾದರೆ ನಿನ್ನೆ ಮೊನ್ನೆ ಹರಕುಮುರುಕು ಬಾಂದ್ರಾದಲ್ಲಿನ ಮೂಲೆ ಮನೆಯೊಂದರಲ್ಲಿ ಎದ್ದು ಬಿದ್ದು ಇದ್ದ ನಿಮ್ಮಿ ಇಂದು ಥಳಕು, ಹೊಳಪುಗಳಿಂದ ಮೆರೆಯುವುದೆಂದರೆ! ರೂಪರಂಗದ ಕೆಲವೇ ನಟಯರಲ್ಲಿ ತಾನೂ ಒಬ್ಬಳು ಎಂಬಂತೆ ಭವಿಷ್ಯ ಬಗೆದು ಮಿನುಗುತ್ತಾಳೆ. ಈಗಂತೂ ನಿರ್ಮಾತೃ ಮೆಹಬೂಬರ ವರ್ಣರಂಜಿತ ಚಿತ್ರ "ಆನ್" ದೆಸೆಯಿಂದ ಇಂಗ್ಲೆಂಡಿಗೂ ಹಾರಿ, ಹಿಂದಿರುಗಿ "ಲಂಡನ್ ರಿಟರ್ನ್ಡ್" (London Returned) ಎಂಬ ಬಿರುದನ್ನು ಗಳಿಸಿಕೊಂಡಿದ್ದಾಳೆ. ಅಂದಿನಿಂದ ಅವಳ ತಾರಾವೇತನ ಇಮ್ಮಡಿ ಮೂರ್ಮಡಿಯಾಗಿಬಿಟ್ಟಿದೆ. ನಿರ್ಮಾತೃಗಳು ಅವಳ ಮನೆ ಬಾಗಿಲು ಕಾಯಬೇಕಾಗಿದೆ. ಅಂದ ಮೇಲೆ ನಾನೊಬ್ಬ ಬಡ ಪತ್ರಿಕೋದ್ಯೋಗಿ ಅವಳ ದರ್ಶನ ಪಡೆಯಲು ಅನೇಕ ಬಾರಿ ಓಡಾಡಿದರೆ ಅದರಲ್ಲೇನು ಮಹಾ?

ಇವಳಿಗೀಗ ಬಿಡುವಿಲ್ಲ. ಒಂದು ಕ್ಷಣವಾದರೂ ತನ್ನ ನಿತ್ಯ ಕಾರ್ಯಗಳನ್ನು ಮರೆತು ಹಕ್ಕಿಯಂತೆ ಹಾರಾಡಬಲ್ಲ ಸ್ವಾತಂತ್ರ್ಯವಿಲ್ಲ! ತಾರೆಯರ ಜೀವನವೇ ಅಂತಿದೆ. ತಾರುಣ್ಯ, ಚೆಲುವು, ಚಪಲತೆ, ವಿಲಾಸ ಇವೆಲ್ಲ ಸಾಬೂನಿನ ಗುಳ್ಳೆಯಂತೆ. ಅದೆಷ್ಟು ಕೀರ್ತಿಯ ಶಿಖರವನ್ನೇರಿದರೂ ಕೊನೆಗೆ ದಾರಿ ಕಾಣದೆ ಧುಮುಕಬೇಕಾಗುತ್ತದೆ. ಅಂತಹ ಸಮಯ ಅವರನ್ನು ಕೇಳುವವರಿಲ್ಲ. ಜೇನುಮುಗಿದ ಮೇಲೆ ತುಂಬಿಗಳು ಮೂಸುವುದಿಲ್ಲ.

ಇದೀಗ ಆರು ಚಿತ್ರಗಳಲ್ಲಿ ನಟಸುವ ಸೌಭಾಗ್ಯ ಕಲ್ಪಿಸಿಕೊಂಡ ನಿಮ್ಮಿಗೆ ಪುರುಸೊತ್ತೇ ಇಲ್ಲ. ಅದುವೆ ನಾನಂದೆ, "ಹೌದು. ಬರೇ ನಾಲ್ಕು ನಿಮಿಷದ ಭೆಟ್ಟಿ ನನಗೆ ಸಿಕ್ಕರಾಯಿತು." ಈ ವಾಗ್ದಾನವನ್ನು ಕೊಟ್ಟು ಅವಳನ್ನು ಮಾತಿಗೆಳೆಯಬೇಕಾಯಿತು. ಅವಳು ಸೋತು ಸುಣ್ಣಾಗಿದ್ದಳು. ಸಂಧ್ಯಾಕಾಲದ ಬಳಿಕ ನಾನು ಆಕೆಯನ್ನು ಕಂಡಾಗ ಅವಳಲ್ಲಿ ಉತ್ಸಾಹವಿಲ್ಲ, ಚೈತನ್ಯವಿಲ್ಲ, ಮುಖಕ್ಕೆ ಬಳಿದ ಬಣ್ಣ ಇನ್ನೂ ಇದೆ. ಆದರೆ ಅವಳೆಷ್ಟು ಸುಂದರಿ! ಆಕರ್ಷಕ ಮುಖ! ಹರಿಣಾಕ್ಷಗಳು! ಎಂತಹ ಬಟ್ಟೆ ಉಟ್ಟರೂ ತೊಟ್ಟರೂ ನಿಸ್ಸೀಮ ಸುಂದರಿಯಾಗಿ ಕಾಣುತ್ತಾಳೆ ನಿಮ್ಮಿ. ಅವಳು ದಷ್ಟಪುಷ್ಟವಾಗಿಲ್ಲ. ಕರುಣಾಜನಕ, ಕರುಳು ಕತ್ತರಿಸುವ ನಟನೆಯನ್ನು ಕೊಟ್ಟು ಪ್ರೇಕ್ಷಕರನ್ನು ಮರುಗಿಸಿದರೂ ಮನೆಯಲ್ಲಿ ಮಾತ್ರ ಅವಳು ಹಸನ್ಮುಖಿ. ಅವಳ ಅಂಗಾಂಗಗಳೆಲ್ಲ ಕೌಮಾರ್ಯ, ಚಪಲತೆ, ತುಂಟತನ, ಮತ್ತು ಸಹಜ ವಿಲಾಸಗಳಿಂದ ಚಲಿಸುತ್ತವೆ. ಒಂದೇ ಮಾತಿನಲ್ಲಿ, ಹುಚ್ಚು ಹುಡುಗಿ!

ಆರು ಚಿತ್ರಗಳಲ್ಲಿ ಏಕಕಾಲದಲ್ಲಿ ನಟಸುವುದು ಸಾಮಾನ್ಯವಲ್ಲ. ಅದೂ ನಾಯಿಕೆಯ ಪಾತ್ರವನ್ನು! ಶ್ರೇಷ್ಠ ದಿಗ್ದರ್ಶಕ ನಿತಿನ್ ಬೋಸರ "ದರ್ದ್ ಎ ದಿಲ್" ದಲ್ಲಿ ನಿಮ್ಮಿಯಿದ್ದಾಳೆ. ದಿಗ್ದರ್ಶಕ, ನಿರ್ಮಾತೃ ರಮಾನಂದ ಸಾಗರ ಇವರ "ಮೆಹಮಾನ್" ವಾಕ್ಪಟದಲ್ಲೂ ನಿಮ್ಮಿ ಅಭಿನಯಿಸುತ್ತಾಳೆ. ಆಶಾ ಬಿಸ್ವಾಸರ "ಹಮ್ ದರ್ದ್" ಚಿತ್ರದಲ್ಲೂ ನಟಸುತ್ತಾಳೆ. ಹಸರತ್ ಲಖನವಿಯವರು ದಿಗ್ದರ್ಶಿಸುವ "ಆಫ್ ಶಾರ್" ಅಥವಾ ಧಬಧಬೆ (Waterfalls) ಎಂಬ ತಯಾರಿಕೆಯಲ್ಲೂ ನಿಮ್ಮಿಯ ನಟನೆಯಿದೆ. ನಿರ್ಮಾತೃ ದಿಗ್ದರ್ಶಕ ಕೆ. ಅಮರನಾಥರ "ಅಲಕ್ ಲೈಲಾ" ದಲ್ಲೂ ಅಭಿನಯ ಕೊಡುತ್ತಾಳೆ. ಮುಗಿಯಿತೇ? ಇಲ್ಲ, ಇಲ್ಲ. ಇನ್ನೂ ಒಂದಿದೆ. ಅವಳದೇ ಚಿತ್ರ. "ಡಂಕಾ" ಎಂದು ಅದರ ಹೆಸರು. ಈ ಚಿತ್ರದ ನಿರ್ಮಾಪಕಿಯೇ ನಿಮ್ಮಿ. ಜೆ. ಪಿ. ಅದವಾನಿ ಇದನ್ನು ದಿಗ್ದರ್ಶಿಸುತ್ತಾರೆ. ಇಷ್ಟೇ ಅಲ್ಲ. ಇನ್ನೂ ನಾಲ್ಕಾರು ಹೊಸ ಕರಾರುಗಳು ಬಿದ್ದುಕೊಂಡಿವೆ. ಅವುಗಳಿಗೆಲ್ಲ ಅವಳು ಸಹಿ ಹಾಕುವುದೇ ತಡ. ಇಲ್ಲ, ಸುಮ್ಮನೆ, ಸಿಕ್ಕಾಪಟ್ಟೆ, ಕಂಡಕಂಡವರೊಡನೆ, ಹೇಳಿ ಬೇಡಿದವರೊಡನೆ ಕರಾರು ಮಾಡಿಕೊಳ್ಳುವುದಾದರೆ ಅವಳಿಗಿಂದು ನೂರಾರು ಚಿತ್ರಗಳಿವೆ. ಹಾಗೆಲ್ಲ ಅವಳು ಎಲ್ಲವನ್ನೂ ಸ್ವೀಕರಿಸುವುದಿಲ್ಲ. ತನಗಿಷ್ಟ ಬಂದ ನುರಿತ ನಟ, ದಿಗ್ದರ್ಶಕ, ನಿರ್ಮಾತೃ ಮುಂತಾದವರೊಡನೆ ಮಾತ್ರ ಸ್ನೇಹ ಬೆಳೆಸುತ್ತಾಳೆ, ಕರಾರು ಗೀಚುತ್ತಾಳೆ. ಒಂದೊಂದು ಕರಾರು ಸಿಕ್ಕುಬಿಟ್ಟರೆ ಉಂಡು-ತಿಂದು ಒಂದು ಲಕ್ಷಕ್ಕಿಂತಲೂ ಹೆಚ್ಚಿನ "ವರಮಾನ"! ರೂಪರಂಗದ ಇನ್ನಿತರ ಅನೇಕ ಪ್ರಾಮುಖ್ಯ ಅಂದರೆ ಅತ್ಯಗತ್ಯ ಜೀವಿಗಳು ಇಷ್ಟಕ್ಕಾಗಿ ತಮ್ಮ ಜೀವಮಾನವನ್ನೇ ಸವೆಯಿಸಬೇಕಾಗುತ್ತದೆ. ಆದರೆ ನಿಮ್ಮಿಯಂಥ 'ಮುಖಪತ್ರ ಹುಡುಗಿ' (Cover page girl) ಯರಿಗೆ ಅದೊಂದು ಚಿತ್ರದ ಕೆಲಸ!

ಪ್ರಖ್ಯಾತ ದಿಗ್ದರ್ಶಕ ಮೆಹಬೂಬ ೧೯೪೮ರಲ್ಲಿ "ಅಂದಾಜ್" ಚಿತ್ರ ಛಾಯಾಗ್ರಹಣ ನಡೆಸುತಿದ್ದರು. ಯುವ ಜನಾಂಗದ ಸಿನಿಮಾ ನಾಯಕ ರಾಜಕಪೂರನುಳ್ಳ ಒಂದು ಚಿತ್ರ ತಯಾರಾಗುತಿತ್ತು. ಚಿತ್ರಾಲಯದಲ್ಲಿ ನಿಮ್ಮಿಯಿದ್ದಳು. ಆದರೆ ನಟ ನಿಮ್ಮಿಯಲ್ಲ, ಅಥವಾ ಅವಳೊಬ್ಬ ಅಭಿನೇತ್ರಿಯಾಗಬೇಕೆಂಬ ಹೆಬ್ಬಯಕೆಯಿಂದ ಅತ್ತ ತೆರಳಿದುದೂ ಅಲ್ಲ. ಗೆಳೆಯನನ್ನೋ — ಗೆಳತಿಯನ್ನೋ ಕಟ್ಟಿಕೊಂಡು ಚಿತ್ರಗ್ರಹಣ ಕಾಣುವ ಲವಲವಿಕೆಯಿಂದ ಹೋಗಿದ್ದಳಾಕೆ. ನೋಡುತ್ತ ಸುಮ್ಮನೆ ಕುಳಿತಿದ್ದಳಾಕೆ. ಆದರೆ ರಾಜಕಪೂರ

ನನ್ನು ಈ ಕುಳ್ಳ ಹುಡುಗಿಯ ತುಂಟವರ್ತನ ಆಕರ್ಷಿಸಿತು. ಅವಳ ನಡೆ, ನುಡಿ, ನಯ, ವಿನಯ, ಮಾಟ ಮೋಡಿಗಳೆಲ್ಲ ಮೋಜೆನಿಸಿತು. ಆಗಲೇ ರಾಜ "ಬರ್ಸಾತ್" ಚಿತ್ರದ ತಯಾರಿಯಲ್ಲಿದ್ದ. ಅವನ ಅದೃಷ್ಟ ವಿಶಾಲವಾಗಿತ್ತು. ಅಪ್ಪನೊಂದಿಗೆ "ದೀವಾರ" ನಾಟಕದಲ್ಲಿ ಮನೆಯಾಳಿನ ಪಾತ್ರಮಾಡಿ ಕುಣಿಯುತಿದ್ದ ರಾಜ ನಟ, ನಿರ್ಮಾತೃ, ದಿಗ್ದರ್ಶಕನಾಗಿದ್ದ. ರಾಜಕಪೂರನಿಗೆ ಬೇರಿನ್ನಾರೂ ಮನೋರಮೆ ಸಿಗುತಿದ್ದಿಲ್ಲವೆಂದಲ್ಲ. ನಿರಾಯಾಸದಿಂದ, ಅಲ್ಪವೇ ಖರ್ಚಿನಿಂದ ಆತನಿಗೊಬ್ಬ ಹುಡುಗಿ ಬೇಕಾಗಿದ್ದಳು. ಹದಿನಾರರ ಹರೆಯದಲ್ಲಿದ್ದ ಈ ಪುಟ್ಟಮ್ಮಣ್ಣಿಯನ್ನು ಕಂಡು ರಾಜ ಮೆಹಬೂಬರೊಡನೆ ಪಿಸುಗುಟ್ಟಿದ. ಮರುಕ್ಷಣದಲ್ಲಿ ಅಲ್ಲೇ ಅವಳ ಭಾವಚಿತ್ರವನ್ನು ತೆಗೆಯಲಾಯಿತು. ಛಾಯಾಗ್ರಹಣಕ್ಕೆ ಬೇಕಾದ ಮುಖಚರ್ಯೆ ಅವಳಲ್ಲಿ ಇದೆಯೆಂದಾಯಿತು. ರಾಜ ಅವಳಿಗೆ ಆ ಸಂಗತಿಯನ್ನು ತಿಳಿಸಿದಾಗ ಏನುತ್ತರ ಕೊಡಬೇಕೆಂದು ನಿಮ್ಮಿಗೆ ತಿಳಿಯಲಿಲ್ಲ. ಅವಳು ಮಂಕಾದಳು. ರಾಜನ ಆಗ್ರಹ ನಿಜವಾದರೂ ನಿಮ್ಮಿಗಿದೊಂದು ದೊಡ್ಡ ಸಂಶಯ. ನನ್ನನ್ನು ನಟಿಯಾಗಿ ಮಾಡುವರೇ? ಇದೇನು ಸ್ವಪ್ನವೇ?

ತರುಣ ಕಪೂರ ಅವಳನ್ನು "ಬರ್ಸಾತ್"ನಲ್ಲಿ ಕುಣಿಸಿಯೇ ಬಿಟ್ಟ. ೧೯೪೯ರಲ್ಲಿ ಈ ಚಿತ್ರ ಪ್ರದರ್ಶನಕ್ಕೆ ಬಂದಾಗ ನಿಮ್ಮಿ — ನಿಮ್ಮಿಯೆಂಬುದು ಮನೆಮಾತಾಯಿತು. ಮೊತ್ತಮೊದಲಿನ ಚಿತ್ರದಲ್ಲೇ, ರಾತ್ರಿ ಬೆಳಗಾಗುವುದರೊಳಗಾಗಿ, ನಿಮ್ಮಿ ಭಾರತೀಯ ರೂಪರಂಗದಲ್ಲೊಂದು ಕೋಲಾಹಲವನ್ನೆಬ್ಬಿಸಿದಳು! ಅವಳ ಹೆಸರು ಜಗಜ್ಜನಿತವಾಯಿತು. ಚಿತ್ರವೂ ಅತ್ಯುತ್ತಮವೆನಿಸಿ ಯಶಸ್ವಿಯಾಯಿತು. ಕರಾರಿಲ್ಲದೆ, ಅನುಭವವಿಲ್ಲದೆ, ಸಂದರ್ಭವಿಲ್ಲದೆ, ಸಿಕ್ಕಿದ ನಿಮ್ಮಿಗೆ ವೇತನವೆಷ್ಟು? ಅದಕ್ಕೆ ನಿರ್ಣಯವಿದ್ದಿಲ್ಲ. "ಬರ್ಸಾತ್"ನ ಪ್ರದರ್ಶನದಂದು ರಾಜ ಅವಳಿಗೆ ರೂ. ೭೦೦೦ "ಚೆಕ್ಕು" ಬರೆದು ಕೊಟ್ಟ. ಅದಕ್ಕವಳ ಮರುಮಾತಿಲ್ಲ. ಸಂತೋಷದಿಂದ ಅದನ್ನು ಸ್ವೀಕರಿಸಿ, ಮರುದಿನವೇ ಒಂದು ಮೋಟಾರು ಕಾರನ್ನು ಕೊಂಡಳವಳು. ಅಂದಿನಿಂದ ನಿಮ್ಮಿಯ ಭಾಗ್ಯಚಕ್ರ ತಿರುಗಲಾರಂಭಿಸಿತು. ನಿರ್ಮಾಪಕರೆಲ್ಲ ಅವಳಿಗೊಂದು ಭವಿತವ್ಯವಿದೆಯೆಂದು ಅವಳನ್ನು ಮುತ್ತಲು ಪ್ರಾರಂಭಿಸಿದರು.

ನಿಮ್ಮಿ ಮಧುರವಾಗಿ ಹಾಡಬಲ್ಲಳು. 'ಕೇರಂ' ಆಟವನ್ನು ಚಾಣಾಕ್ಷತೆಯಿಂದ ಆಡಬಲ್ಲಳು. ನೇಪಥ್ಯ ಅಥವಾ ಹಿಂಬದಿಯ ಸಂಗೀತದಿಂದ ಅವಳಿಗೆ ಬಲು ಬೇಸರ. ಆಲ್ಹಾದಕರವಾಗಿ ಹಾಡಬಲ್ಲ ತಾರೆಯರಿಂದ ದಿಗ್ದರ್ಶಕರು ಸಂಗೀತವನ್ನು ಕೊಳ್ಳುವುದಿಲ್ಲವೆಂದು ಅವಳು ಸಂತಪಿಸುತ್ತಾಳೆ. ಇನ್ನು ಮುಂದಿನ ಚಿತ್ರಗಳಲ್ಲಿ ತನ್ನ ಹಾಡುಗಳನ್ನೆಲ್ಲ ತಾನೇ ಹಾಡುವ ಶರ್ತ-ಕರಾರನ್ನು ಅವಳು ಮಾಡಲಿದ್ದಾಳೆ. ಎಲ್ಲಾ ಚಿತ್ರಗಳಲ್ಲೂ ಲತಾ ಮಂಗೇಶಕರಳಂತಹ 'ಭೂತಗೀತ'ಗಾರರು ಹಾಡಿದರೆ ಹಾಡು ಹಾಸ್ಯಾಸ್ಪದವೆನಿಸದೇ?

ಸಂಗೀತದಲ್ಲಿ ಅವಳು ಪ್ರವೀಣೆಯಲ್ಲದಿದ್ದರೂ ಸುರಸವಾಗಿ ಹಾಡುವ ಕಂಠ, ಯೋಗ್ಯತೆ ಅವಳಲ್ಲಿದೆ. ಅವಳ ತಾಯಿ ವಹಿದಾನ ಕೋಗಿಲೆಯಂತೆ ಹಾಡುತಿದ್ದಳು. "ಅಲಿಬಾಬಾ ಮತ್ತು ನಾಲ್ವತ್ತು ಕಳ್ಳರು" ಎಂಬ ಚಿತ್ರದಲ್ಲಿ ಮೂರ್ಜಿಯಾನಳ ಪಾತ್ರವಹಿಸಿ ವಿಖ್ಯಾತರಾಗಿದ್ದ ಅವಳು ನಿಮ್ಮಿಯ ಬಾಲ್ಯದಲ್ಲೇ ತೀರಿಕೊಂಡಿದ್ದಳು.

ಇವಳಿಗೆ ಪತ್ರಿಕೋದ್ಯೋಗಿಗಳೆಂದರೆ ಒಂದು ತರದ ಬೆದರಿಕೆ! ಅಲ್ಲಸಲ್ಲದ ಅನರ್ಥ ಪ್ರಶ್ನೆಗಳು — ನೀನು ಉಣ್ಣುವ-ತಿನ್ನುವ ಆಹಾರವೇನು? ನಿನ್ನ ನಚ್ಚು ಮೆಚ್ಚಿನ ವಸ್ತು ವಿಷಯ ಯಾವುದು? ತೊಡುವ ಬಟ್ಟೆ—ಬರೆ ಯಾವುದು? ಮನವೊಲಿಯುವ ಬಣ್ಣ-ಪುಷ್ಪ-ಗಂಧ ಯಾವುದು? ನಿನ್ನ ಭಾವೀ ಪ್ರಿಯತಮನ ಬಗ್ಗೆ ನಿನ್ನ ಅಭಿಪ್ರಾಯ — ಆಶಯಗಳೇನು? ನಿನ್ನ ಹುಚ್ಚು-ಹವ್ಯಾಸಗಳೇನು?" - ಇತ್ಯಾದಿ. ಇತ್ಯಾದಿ. ಇಂತಹ ಪ್ರಶ್ನೆಗಳನ್ನೆಲ್ಲ ಕೇಳಿದಾಗ ಅವಳಿಗೆ ಬಹಳ ಆಶ್ಚರ್ಯವಾಗುತ್ತದೆ. "ನಿನ್ನ ಹುಚ್ಚು ಹವ್ಯಾಸ (Hobby)ವೇನು? ಎಂದು ಕೇಳಿದರೆ ಅದಕ್ಕೆ "ನಿದ್ದೆ"ಯೆನ್ನುತ್ತಾಳೆ ನಿಮ್ಮಿ. ಪಾಪ, ಆಕೆಗೆ ಬೇಕಾದುದು ವಿರಾಮ; ವಿಶ್ರಾಂತಿ; ಸುಖಮಯವಾದ ಸುದೀರ್ಘ ನಿದ್ದೆ. ಅದು ಅವಳ ಅತಿರೇಕ ಕೆಲಸದಿಂದಾಗಿ ಸಿಗುತ್ತಿಲ್ಲ. ಅದಕ್ಕಾಗಿ ಅವಳು ಕಾತರಿಸುತ್ತಾಳೆ. ಅನೇಕ ತಾರೆಯರಿಗೆ ನೂತನ ವಿನೂತನ ಹುಚ್ಚು ಹವ್ಯಾಸಗಳಿವೆ. ಆದರೆ ನಮ್ಮ ಬಾಲೆಗಿನ್ನೂ ಅವುಗಳ ಮಹತ್ವ ತಿಳಿದು ಬಂದಿಲ್ಲ. ಅಂಚೆ ಚೀಟುಗಳನ್ನೂ ಚಿತ್ರಗಳನ್ನೂ ನಾಣ್ಯಗಳನ್ನೂ ಚಾರಿತ್ರಿಕ ವಸ್ತುಗಳನ್ನೂ ತಾರೆಯರ, ಧುರೀಣರ ಹಸ್ತಾಕ್ಷರ ಮುಂತಾದವುಗಳನ್ನೂ ಕೂಡಿಡುವುದೆಂದರೆ ಅವಳಿಗೆ ನಗು ಬರುತ್ತದೆ.

ಅವಳಿಗಿನ್ನೂ ಪ್ರಪಂಚಜ್ಞಾನವಿಲ್ಲ! ಭಾವನಾಜೀವಿಯಾಗಿ ವಿಹರಿಸಲು ಅವಕಾಶವಿಲ್ಲ. "ನೀನು ಮೆಚ್ಚುವ ನಟನಾರು?—ನಟಿಯಾರು?" ಎಂದು ಕೇಳಿದರೆ "ಸರ್ವಸಾಧಾರಣ ಎಲ್ಲರನ್ನೂ ಮೆಚ್ಚುತ್ತೇನೆ" ಎನ್ನುತ್ತಾಳೆ. ವಿನಾ ಅವಳ ಮನವೊಲಿಯುವ ನಾಯಕನಾಗಲೀ ದಿಗ್ದರ್ಶಕನಾಗಲಿ, ಪ್ರಿಯತಮನಾಗಲಿ ಅವಳಿಗಿನ್ನೂ ಸಿಕ್ಕಿಲ್ಲ. ಸಿಕ್ಕಿಲ್ಲವೆಂದರೆ ಅದರ ಗೋಜಿಗೇ ಅವಳು ಇನ್ನೂ ಹೋಗಿಲ್ಲ! ಮನೆ, ಮದುವೆ, ಸಂಸಾರ, ಪ್ರೇಮ, ಪ್ರಣಯ ಎಂಬೆಲ್ಲ ವಿಷಯಗಳನ್ನು ಆಲೋಚಿಸಲು ಅವಳಿಗೆ ಬಿಡುವಿಲ್ಲ. ಆದರೂ ನಿರ್ಲಜ್ಜೆಯಿಂದ ನಿನ್ನ ವರ ಹೇಗಿರಬೇಕೆಂದು ಯಾರೋ ಕೇಳಿದುದಕ್ಕೆ "ಅವನು ಗೋದಿಯಂತೆ ಸುವರ್ಣದವನಾಗಿರಬೇಕು. ಅವನ ಕೂದಲು ಗುಂಗುರು ಆಗಿರಬೇಕು. ಕಂದುಕಣ್ಣುಗಳಿರಬೇಕು. ದಪ್ಪನಾಗಿರಬಾರದು. ಅವನು ಶ್ರೀಮಂತನಾಗಿರಬಾರದು. ಅಥವಾ ಬಡ ಅಥವಾ ಮಧ್ಯಮ ವರ್ಗದ ಋಣಜೀವಿಯೂ ಆಗಿರಬಾರದು"— ಎಂದೆಲ್ಲ ಹೇಳಿರುತ್ತಾಳೆ.

"ನಿನಗೆ ಇಷ್ಟೊಂದು ಚಿತ್ರಗಳಲ್ಲಿ ಏಕಕಾಲದಲ್ಲಿ ನಿರಾಯಾಸದಿಂದ ನಟಿಸಲು ಬರುವುದೆ?"—ನಾನು ನಗುತ್ತ ಕೇಳಿದೆ.

"ನನಗೆ ಕೆಲವೊಮ್ಮೆ ಚಿತ್ರಾಲಯದಲ್ಲೇ ನಿದ್ದೆ ಬರುತ್ತದೆ! ರೂಪರಂಗದ ಅಭಿನಯವೆಂದರೆ ಆಟ—ತಮಾಷೆಯಲ್ಲ. ಅಲ್ಲಿ ಎಂತಹನೂ ಸೋತುಹೋಗುತ್ತಾನೆ. ಆದರೇನು ಮಾಡು

ವದು? ಈಗಿದ್ದ ಕರಾರುಗಳು ಮುಗಿದ ಬಳಿಕ ಆದಷ್ಟು ಕಡಿಮೆ-ಒಂದೋ-ಎರಡೋ ಚಿತ್ರಗಳಲ್ಲಿ ಮಾತ್ರ ನಟಿಸಬೇಕೆಂದು ಇಚ್ಛಿಸಿರುತ್ತೇನೆಂದಳು.

ನಿಮ್ಮಿಯ ಐರೋಪ್ಯ ಅಂದರೆ ಲಂಡನ ಪ್ರವಾಸ ಬಲು ಜಯಪ್ರದವಾಯಿತು. ಅಲ್ಲಿನ ಆಂಗ್ಲ ಪತ್ರಿಕೆಗಳೆಲ್ಲ ಅವಳನ್ನು ಬಹಳ ಹೊಗಳಿದವು. ಬೇರಾವ ತಾರೆಗೂ ಇಂತಹ ವೈಭವಯುತ ಸ್ವಾಗತ—ಸನ್ಮಾನ ಸಿಕ್ಕಿರಲಿಲ್ಲ. ಸ್ವಾರಸ್ಯವೆಂದರೆ "ನನ್ನನ್ನು ಈತನಕ ಯಾರೂ ಚುಂಬಿಸಿಲ್ಲ"ವೆಂದು ವಿಕ್ರಮ ಸ್ಥಾಪಿಸಿದಳಾಕೆ! "ಕರ್ಮವೀರ"ದ "ಲಾಂಗೂಲಾಚಾರ್ಯರು" ಸಂಶಯಪಟ್ಟಂತೆ ಅದೊಂದು ನಿಮಂತ್ರಣವೂ ಆಗಿರಬಹುದು. ಯಾರಾದರೂ "ರೋಮಿಯೋ"ಗಳಿದ್ದರೆ ಮುಂದೆ ಬರಲಿ—ಎಂದು! ಅಥವಾ ಪಾಶ್ಚಾತ್ಯ ಚಿತ್ರಗಳನ್ನು, ಅವರ ನಡೆ-ನುಡಿ-ಆಚಾರ ವಿಚಾರ ಇವನ್ನೆಲ್ಲ ಕಂಡು ನಮ್ಮ ಚಿತ್ರಗಳಲ್ಲಿ ಆಲಿಂಗನ-ಚುಂಬನಗಳಿಗೆ ಅವಕಾಶವಿಲ್ಲವಲ್ಲಾ ಎಂದೊಂದು ಹೃದಯವಿಕಾರವಾಗಿರಲೂ ಬಹುದು. ಇನ್ನೊಮ್ಮೆ ಇಂಗ್ಲೆಂಡಿಗೆ ಹಾರಿ ಅಲ್ಲಿನ ಗೆಳೆಯರನ್ನುಕಾಣಲುಬಯಸುತ್ತಾಳೆ ಮಾತ್ರವಲ್ಲ, ತಾನು ಹಾಲಿವುಡ್ಡಿಗೂ ಹೋಗಿ ಅಮೇರಿಕೆಯಲ್ಲಿ ಪ್ರತಿಷ್ಠೆ ಸ್ಥಾಪಿಸಬೇಕೆಂದು ಅವಳು ಆಶಿಸುತ್ತಾಳೆ. ತಾನು ಕೈಕೊಂಡ ಚಿತ್ರಗಳ ಕೆಲಸ ಮುಗಿದ ಮೇಲೆ ಅವಳೊಮ್ಮೆ ದೀರ್ಘ ರಜೆಯನ್ನು ಪಡೆದು ಯುರೋಪ, ಅಮೇರಿಕಾವನ್ನೆಲ್ಲ ಸುತ್ತಿ ಭಾರತಕೆ ನವನವೀನ ನಟಿ ನಿಮ್ಮಿಯಾಗಿ ಬರಲಿದ್ದಾಳೆ.

ನಿಮ್ಮಿಯ ನಿಜ ಹೆಸರು, ನವಾಬ ಬಾನು ಎಂದು. ಅಬ್ದುಲ್ ಹಕೀಮ ಎಂಬವರು ತಂದೆ. ಉತ್ತರಪ್ರದೇಶದಲ್ಲಿ ಹುಟ್ಟಿ, ಮಿರತಿನಲ್ಲಿ ಬೆಳೆದು, ಆಗ್ರಾದಲ್ಲಿ ಶಿಕ್ಷಣ ಪಡೆದು ನಿಮ್ಮಿ ಕುಟುಂಬ ಸಮೇತ ಮುಂಬಯಿಗೆ ಬಂದಳು. ಹಿಂದೀ, ಉರ್ದೂ ಭಾಷೆಗಳಲ್ಲಿ ಗಿಳಿಯಂತೆ ಮಾತನಾಡಬಲ್ಲಳಾದರೂ ಇಂಗ್ಲೀಷಿನಲ್ಲಿ ನಿರ್ಭೀತಿಯಿಂದ ಸರಸರ ನುಡಿಯಲು ಅಂಜುತ್ತಾಳೆ. ಆದರೆ ಅದನ್ನು ಬಲ್ಲಳು. ಉರ್ದೂ ಸಾಹಿತ್ಯದಲ್ಲಿ ಆಕೆಗೆ ಪ್ರೇಮ ಬಹಳ. ಇಂಗ್ಲಿಷ ಚಿತ್ರಗಳನ್ನು ತುಂಬಾ ಮೆಚ್ಚುತ್ತಾಳೆ. ಹಿಂದೆ ಭಾರತದಲ್ಲಿದ್ದ ಕೋಕಿಲಕಂಠದ ನೂರ್ಜಹಾನಳ ಸಂಗೀತವೆಂದರೆ ಪ್ರಾಣ.

"ನಿನಗೆಷ್ಟು ಕಾಗದಗಳು ಪ್ರೇಕ್ಷಕರಿಂದ ಬರುತ್ತವೆ?" ನಾನು ಕೇಳಿದೆ. "ಅನೇಕ ಬರುತ್ತವೆ. ಆದರೆ ಅವೆಲ್ಲ ನನ್ನ ಕೈಸೇರುವುದಿಲ್ಲ. ಅಸಭ್ಯ, ಅವಾಚ್ಯ ಶಬ್ದಸಂಗತಿಗಳ ಪತ್ರಗಳೂ ಬರುತ್ತವೆ. ಹೊಗಳಿ-ತೆಗಳಿ ಬರುತ್ತವೆ. ಉತ್ತಮ ಪತ್ರಗಳಿಗೆ ಉತ್ತರ ಖಂಡಿತ ಬರೆಯುತ್ತೇನೆ. ಎಲ್ಲರಿಗೂ ಬರೆಯಲು ಸಾಧ್ಯವಿದೆಯೇ?"

ಆಕೆಗಿನ್ನು ಊಟವಾಗಬೇಕಾಗಿದೆ. ನಾಲ್ಕಾರು ಮನೆಯಾಳುಗಳು ಇಣಿಇಣಿಕಿ ನೋಡುತ್ತಿದ್ದಾರೆ. ಅನಂತರ ಪುನಃ ಎಲ್ಲೋ ಇಂದು ಹೋಗಲಿದೆ. ಅವಳದೊಂದು ಭಾವಚಿತ್ರವನ್ನು ಕೊಳ್ಳೋಣವೆಂದರೆ ರಾತ್ರಿಯ ಹೊತ್ತು. ನನ್ನ ಕಿಸೆ ಕ್ಯಾಮೆರಾದಿಂದ ಸಾಧ್ಯವಿಲ್ಲ. "ನೀನೇ ಒಂದು ಚಿತ್ರವನ್ನು ಕೊಡು" ಎಂದು ಬಿನ್ನವಿಸಿದೆ. ತರಿಸಿ ಹಸ್ತಾಕ್ಷರಗಳಿಂದ ಶುಭಾಶಯಗಳನ್ನು ಬರೆದುಕೊಟ್ಟಳು.

ನರ್ಗೀಸ್, ಸುರೈಯ್ಯಾ, ಬಿನಾ ರಾಯ ಮುಂತಾದವರ ಮಹಲ ಬಳಿಯಲ್ಲೇ ನಿಮ್ಮಿ ನಾಲ್ಕಾರು ಕೋಣೆಗಳ ಮಹಡಿಯ ಭಾಗವೊಂದನ್ನು ಬಾಡಿಗೆಗೆ ಪಡೆದಿದ್ದಾಳೆ. ಆದರೆ ಅವಳು ಅಲ್ಲಿರುವುದು ಬಹಳ ಕಡಿಮೆ. ಯಾವ ಗಳಿಗೆಯಲ್ಲಿ ಅವಳ ಈಗಿನ ಬಂಗಲೆ "ಇಂಡಸ್ ಕೋರ್ಟ"ಗೆ ತೆರಳಿದರೂ ನಿಮ್ಮಿಯಿಲ್ಲ; ಹೊರಗೆ (out) ಎಂದು ಅವಳ ನಾಮಪಟ್ಟ ನುಡಿಯುತ್ತದೆ. ಅಷ್ಟೇ ಅಲ್ಲ, ಅವಳಿಗಿನ್ನೂ ಟೆಲಿಫೋನ್ ಸಿಕ್ಕಿಲ್ಲ ಹೊಸ ಮನೆಗೆ. ಇದೊಂದು ದೊಡ್ಡ ಅವಾಂತರ. ಹೀಗಾಗಿ ಈ ಹುಡುಗಿಯನ್ನು ಕಾಣಲು ನೂರಾರು ಬಾರಿ, ಮನೆಗೆ, ಸ್ಟುಡಿಯೋಕ್ಕೆ, ಅಡ್ಡಾಡಿ ತಿರುಗಬೇಕಾಯಿತು. ಇದಕ್ಕಾಗಿ ಅವಳಿಗೆ ಬಲು ಬೇಸರ.

ಕೊನೆಯದಾಗಿ ನಾನೊಂದು ಪ್ರಶ್ನೆ ಕೇಳಿದೆ.

"ತಂಗೀ, ನನಗೂ ಒಬ್ಬ ನಟನಾಗಬೇಕೆಂಬ ಬಯಕೆಯಿದೆ; ಆಗದೇ? ನಿನ್ನಭಿಪ್ರಾಯವೇನು?"

"ಆಗದೇನು? ಆಗುವುದಿದ್ದರೆ, ಪ್ರಯತ್ನಪಟ್ಟರೆ ನಿಮಗೂ ಸಾಧ್ಯ" ಎಂದಳಾಕೆ. ಇರಲಿ. ಈ ಮಹಾ ಮುಂಬೈಯಲ್ಲಿ ನನ್ನಂತಹನ ಬಾಳಿಗೆ ಶಾಶ್ವತ ಆಸರೆ ಇಲ್ಲ. ಎಲ್ಲಾದರೂ ಈಗಿದ್ದ ಕೆಲಸಕ್ಕೆ ಸೊನ್ನೆಬಿದ್ದರೆ, ಬೇರಾವ ಕೆಲಸ ಸಿಗದಾಗ ಸಿನಿಮಾ ನಟನಾಗಿ ಸ್ವರ್ಗವೇರಬಹುದಲ್ಲಾ! ಎಂದು ನಿಟ್ಟುಸಿರು ಬಿಡುತ್ತ ಮನೆಗೋಡಿದೆ.

# ಆಧುನಿಕ ಮಹಿಳೆಯ ಗೊತ್ತುಗುರಿ

ಭಾರತೀಯ ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನ ಕಾಲಮಾನಕ್ಕನುಸಾರವಾಗಿ ಏರಿಳಿತಗಳನ್ನು ಕಂಡಿದೆ. ಆದರೆ ಇಂದಿನ ಭಾರತದಲ್ಲಿ ಹಿಂದೆಂದಿಗಿಂತಲೂ ಹೆಚ್ಚಾಗಿ ಈ ಪ್ರಶ್ನೆ ಚರ್ಚಿಸಲ್ಪಡುತ್ತಿದೆ. ಸುಶಿಕ್ಷಿತ ಮಹಿಳೆಯರ ಸಂಖ್ಯೆ ಹೆಚ್ಚಿದಂತೆ ಮಹಿಳೆಯರು ಸ್ವತಂತ್ರವಾದ ಗೊತ್ತುಗುರಿಗಳನ್ನು ರೂಪಿಸಿಕೊಳ್ಳುತ್ತಿದ್ದಾರೆ. ಅತಿರೇಕವಾದಿಗಳ ಮಾತು ಬಿಟ್ಟರೆ ಸಾಮಾನ್ಯ ವಿವೇಕಿ ಸುಶಿಕ್ಷಿತ ಸ್ತ್ರೀಯ ಗೊತ್ತುಗುರಿಗಳೇನೆಂದು ಲೇಖಿಕೆ ಇಲ್ಲಿ ತಿಳಿಸಿದ್ದಾರೆ.

ಲೇಖಿಕೆ: ಶ್ರೀಮತಿ ಸರೋಜಿನಿ ಮಹಿಷಿ, ಎಂ. ಎ.

ಇಂದಿನ ಮಹಿಳೆ ಹಿಂದಿನಂತಿಲ್ಲ ನಿಜ; ಅವಳನ್ನು ಸುತ್ತುವರಿದ ಪರಿಸರದಲ್ಲಿಯೂ ವ್ಯತ್ಯಾಸವಾಗಿದೆ. ವ್ಯತ್ಯಾಸ ಸಜೀವತೆಯ ಲಕ್ಷಣ; ಹರಿಯುವ ನೀರಿನಲ್ಲಿ ನೈರ್ಮಲ್ಯವಿರದೆ ನಿಂತ ನೀರಿನಲ್ಲಿದ್ದೀತೆ? ಪರಿಸರದಲ್ಲಿಯ ವ್ಯತ್ಯಾಸಕ್ಕನುಗುಣವಾಗಿ, ಮಾನವನ ರೀತಿ ನಡತೆ,"ಗೊತ್ತು ಗುರಿಗಳಲ್ಲಿಯೂ ವ್ಯತ್ಯಾಸವಾಗುತ್ತಲಿದೆ; ಪರಸ್ಪರ ಪೂರಕಶಕ್ತಿಗಳಾದ ಸ್ತ್ರೀಪುರುಷರೀರ್ವರ ಜೀವನದಲ್ಲೂ ಅಷ್ಟೇ!

ಕೊಳೆಯನ್ನು ಹೊರಚೆಲ್ಲಿ ಒಳ್ಳೆಯದನ್ನು ಇಟ್ಟುಕೊಳ್ಳುವದು ಮಾನವನ ಸ್ವಭಾವ; ಸಮಾಜದ ಸ್ವಭಾವವೂ ಅದು ಅಹುದು. ಈ ಒಳ್ಳೆಯುದು ಪ್ರಗತಿಯ ದಾರಿಗಾಗಿಯೇ ಎಂದು ಬಲವಾದ ನಂಬಿಕೆ ಬೇರೆ. ಅಂದಿನಿಂದ ಇಂದಿನವರೆಗೆ ಕಲ್ಪಿಸಿದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ವ್ಯತ್ಯಾಸಗಳೆಲ್ಲ ಒಳ್ಳೆಯದಕ್ಕಾಗಿಯೇ. ಆದರೆ ಒಂದು ಕಾಲದಲ್ಲಿ ಒಳ್ಳೆಯದಕ್ಕಾಗಿದ್ದ ವ್ಯತ್ಯಾಸ, ಬರುವ ಕಾಲದಲ್ಲಿ ಹಾಗೆಂದು ಕಂಡುಬರಲಿಕ್ಕಿಲ್ಲ. 'ಸ್ತ್ರೀಗೆ ಶಿಕ್ಷಣವನ್ನು ಕೊಡಕೂಡದು', ಎಂಬ ತತ್ವ ಅಂದು ಒಳ್ಳೆಯದಕ್ಕಾಗಿತ್ತು; ಆದರೆ ಇಂದು ಬದಲಾಗುವ ಪರಿಸ್ಥಿತಿಯಲ್ಲಿ ಅದು ಪ್ರಗತಿಗಾಮಿಯಲ್ಲ, ಎಂದು ಸಿದ್ಧವಾಗಿದೆ.

ಮನುಷ್ಯನು ತನ್ನನ್ನು ತಾನು ನಿಯಮಗಳಿಂದ ಬಂಧಿಸಿಕೊಳ್ಳುವದು ಸುಖ-ಶಾಂತಿಗಳ ಕಲ್ಪನೆಯಿಂದಲೇ. ಸಾಮಾಜಿಕ ನಿಯಮಗಳಾದರೂ ಸಮಾಜದ ಸರ್ವತೋಮುಖ ಉನ್ನತಿಯ ದೃಷ್ಟಿಯಿಂದಲೇ ರಚಿತವಾದವುಗಳು. ಯಾವ ಧರ್ಮವೇ ಇರಲಿ, ಯಾವ ಮತಪ್ರವರ್ತಕರೇ ಇರಲಿ, ಅವರ ಉದ್ದೇಶ ಒಬ್ಬಿಬ್ಬರ ಕಲ್ಯಾಣಸಾಧನೆಯಲ್ಲ,-- ಸಮಾಜದ ಕಲ್ಯಾಣ, ದೇಶದ ಕಲ್ಯಾಣ, ಪ್ರಾಣಿಗಳೆಲ್ಲರ ಹಿತಸಾಧನೆ! ಗುರಿಯನ್ನು ಮುಟ್ಟುವ ಮಾರ್ಗ ಬೇರೆಯಾಗಿದ್ದರೂ ಗುರಿ ಮಾತ್ರ ಒಂದು. ಬಹು ಪುರಾತನ ಕಾಲದಲ್ಲಿ ಮನುಮಹರ್ಷಿಯು 'ಸ್ಮೃತಿ'ಯನ್ನು ರಚಿಸಿದ್ದು ಸಾಮಾಜಿಕ ಕಲ್ಯಾಣ ಸಾಧನೆಯ ದೃಷ್ಟಿಯಿಂದಲೇ: 'ಸ್ತ್ರೀಯನ್ನು ಗೌರವಿಸಿದಲ್ಲಿ ದೇವತೆಗಳೂ ಸಂತುಷ್ಟರಾಗುತ್ತಾರೆ' ಎಂದು ಧಾರ್ಮಿಕ ನಂಬಿಕೆಯ ಮೂಲಕ ಸ್ತ್ರೀಗೆ ಪ್ರಾಶಸ್ತ್ಯವನ್ನು ಕಲ್ಪಿಸಿಕೊಟ್ಟದ್ದು, ಸಾಮಾಜಿಕ ಜೀವನ ತೂಕ ತಪ್ಪದಂತೆ ಸಾಗಿಹೋಗಲಿ ಎಂಬ ಭಾವನೆಯಿಂದ; ಪ್ರೇಮ ಸೌಂದರ್ಯಗಳ ನಿಧಿಯೂ ಪ್ರೇರೇಪಕ ಶಕ್ತಿಯೂ ಆದ ಸ್ತ್ರೀಯನ್ನು ಕಾಲಕಾಲಕ್ಕೂ ಒಬ್ಬೊಬ್ಬರು ಹೊಣೆಯನ್ನು ಹೊತ್ತು ರಕ್ಷಿಸಬೇಕು ಎಂಬ ಅಂದಿನ ಭಾವನೆ ಇಂದು ಅವಳ ದಾಸ್ಯದ ಅರ್ಥದಲ್ಲಿ ಪರಿವರ್ತಿತವಾಯಿತು. ಪರಿವರ್ತಿತವಾಗಿರುವ ಮನುಸ್ಮೃತಿಯ ಅರ್ಥವೇ ಇಂದಿಗೂ ನಡೆದು ಹೋಗಲಿ ಎಂದರೆ, ಚೈತನ್ಯವುಳ್ಳ ಇಂದಿನ ಸ್ತ್ರೀ ಅದನ್ನು ಒಪ್ಪಲಾರಳು. ಅಭಿಮಾನ ಅವಳಲ್ಲಿದ್ದುದಾದರೆ ಈ ಪ್ರತಿಭಟನೆ ಅನಿವಾರ್ಯ, ಜೊತೆಗೆ ಅವಳ ಅಂದಿನ ಗೊತ್ತುಗುರಿಗಳಲ್ಲಿಯ ವ್ಯತ್ಯಾಸವೂ ಅಷ್ಟೇ.

ವನವಾಸಕ್ಕೆ ಹೋಗುವ ರಾಮನನ್ನು ಬಿಟ್ಟಿರಲಾರದೆ, ಅವನ ಕಷ್ಟಗಳಲ್ಲಿಯೂ ಪಾಲುಗಾರಳಾಗುವ ಅಶೆಯಿಂದ ಸೀತೆ ರಾಮನನ್ನು ಹಿಂಬಾಲಿಸಿದಳು. ಆದರೆ ಅದೇ ಊರ್ಮಿಳೆ ತನ್ನ ಮೂಲಕ ಪತಿಗೆ ಕಷ್ಟವಾಗಬಾರದೆಂದು, ವಿರಹದುಃಖ ವೆಷ್ಟಿದ್ದರೂ ಅದನ್ನು ಸಹಿಸಿಕೊಂಡಿದ್ದಳು. ಇಬ್ಬರ ಉದ್ದೇಶವೂ ಒಂದೇ: ಆದರೆ ಅವರವರ ಭಾವನೆಗನುಸರಿಸಿ, ಕೈಕೊಂಡ ಉಪಾಯಗಳು ಮಾತ್ರ ಭಿನ್ನವಾಗಿವೆ.

ರಾಮನು ವನವಾಸಕ್ಕೆ ಹೊರಡುವ ಮುನ್ನ ಕೌಸಲ್ಯೆಗೆ ವಂದಿಸಲು ಅವಳು ಅಗ್ನಿಗೆ ಮಂತ್ರಪೂರ್ವಕ ಆಹುತಿಯನ್ನರ್ಪಿಸುತ್ತಿದ್ದಳಂತೆ! ರಾಮನು ನಮಸ್ಕರಿಸಿದಾಗ ಸ್ವಸ್ತಿವಚನಪೂರ್ವಕ ಆಶೀರ್ವಾದ ಮಾಡಿದವಳೂ ಅವಳೇ! ಶ್ರೀರಾಮನು ವನಕ್ಕೆ ಹೊರಟರೆ, ಅವನ ಅರ್ಧಾಂಗಿಯೂ ಸಹ-ಧರ್ಮಚಾರಿಣಿಯೂ ಆದ ಸೀತಾದೇವಿ ರಾಜ್ಯಭಾರ ಮಾಡಬಹುದೆಂದು, ರಾಮನು ಹೊರಡುವ ಮೊದಲು, ವಸಿಷ್ಠರು ಸೂಚಿಸಿದರಂತೆ! ಸಮಾಜದಲ್ಲಿ ಸ್ತ್ರೀಯ ಆತ್ಮವನ್ನು ಒಪ್ಪಿಕೊಂಡು ಸಹ-ಧರ್ಮಾಚರಣದ ಅಧಿಕಾರವನ್ನು ಕೊಟ್ಟ ಇವರುಗಳ ಗೊತ್ತುಗುರಿಯೇನು? ತನ್ನ ಅವಮಾನವನ್ನು ನೋಡಿಯೂ ಸಹಿಸಿಕೊಂಡಿದ್ದ ಪತಿಗಳನ್ನು ಕಂಡು "ಗಂಡರೋ ನೀವ್ ಷಂಢರೋ", ಎಂದು ಅರ್ಭಟಿಸಿದ ದ್ರೌಪದಿ ಯಾವ ಕಾಲಕ್ಕೆ ಸೇರಿದವಳು?

ಮಧ್ಯಯುಗದಲ್ಲಿ ಮಹಮ್ಮದೀಯರ ಆಕ್ರಮಣದ ಮೂಲಕವೋ, ಬೌದ್ಧ, ಜೈನ ಮತಗಳ ಪ್ರಸಾರದ ಮೂಲಕವೋ ಸ್ತ್ರೀಯು ಪುರುಷನ ಸಿದ್ಧಿಯ ಮಾರ್ಗದಲ್ಲಿ ಎಡರಾಗಿ ಕಂಡಿರಬಹುದು; ಭಾರತದ ಜನಜೀವನದಲ್ಲಿ ಪ್ರಮುಖ ಭಾಗವನ್ನಾಕ್ರಮಿಸಿದ ಧಾರ್ಮಿಕ ಕ್ರಿಯೆಗಳಲ್ಲಿ ಭಾಗವಹಿಸಲು ಅಧ್ಯಯನವಿಲ್ಲದ ಮೂಲಕ ಅವಳು ಅಸಮರ್ಥಳಾಗಿರಬಹುದು; ಅಂದಿನ ಅವಳನ್ನು ಸಿಂಗರಿಸಿ 'ದೇವಿ'ಯೆಂದು ಕರೆದು ಮನೆಯ ಮೂಲೆಯಲ್ಲಿ ಬಚ್ಚಿಡುವಲ್ಲಿಯೇ ಪುರುಷನಿಗೆ ಹೆಮ್ಮೆಯೆನಿಸಿರಬಹುದು; ಸ್ತ್ರೀಯೂ ಪುರುಷನ ವ್ಯಕ್ತಿತ್ವದಲ್ಲಿ ತನ್ನದನ್ನು ಲೀನಗೊಳಿಸಿ, ಅವನ ಹಿರಿಯ ಸಂಪತ್ತಾಗಿರುವದೇ ತನ್ನ ಗುರಿಯೆಂದು ತಿಳಿದಿರಬಹುದು; ಆದರೆ ಇಂದು ವಾತಾವರಣದಲ್ಲಿ ಹಬ್ಬಿದ ನವಚೈತನ್ಯದ ಮೂಲಕ, ಜೀವನದ ಆಚಾರ ವಿಚಾರಗಳು ಬೇರೆಯಾಗಿವೆ.

ಅಂದು ಸ್ತ್ರೀ ಹಾಗೆ ಮಾಡಿದ್ದಾದರೂ ಸಾಮೂಹಿಕ ಸುಖಜೀವನಕ್ಕಾಗಿ; ಮನದಲ್ಲಿ, ಮನೆಯಲ್ಲಿ ಶಾಂತಿಗಾಗಿ; ಸಹಕಾರ, ಶಾಂತಿ, ಸಮಾಧಾನಗಳಿಗಾಗಿ ಯಾವುದನ್ನೂ ತ್ಯಾಗಮಾಡಬಲ್ಲ ಅವಳ ತ್ಯಾಗದ ಅರಿವು ಸಮಾಜಕ್ಕಾಗಲಿಲ್ಲ ಎಂಬುದು ಅವಳ ದುರ್ದೈವ. ಆ ನಷ್ಟವನ್ನನುಭವಿಸಿದ ಅವಳೇ ಇಂದು ತನ್ನ ಮಕ್ಕಳ ಜೀವನದ ಗೊತ್ತುಗುರಿಗಳಿಗಾಗಿ ಬೇರೆ ಮಾರ್ಗವನ್ನು ಹುಡುಕುವದರಲ್ಲಿದ್ದಾಳೆ. ಅಂದು ಏಳು ಮಕ್ಕಳ ತಾಯಿ ಸಮಾಜಕ್ಕೆ ಒಂದು ಕಲಂಕವಾದಳು; ತ್ಯಾಗ ಸಹಿಷ್ಣುತೆಗಳಿದ್ದೂ ಈ ಸ್ಥಿತಿಯನ್ನು ಮುಟ್ಟಿದ ಮಹಿಳೆ, ಬೇರೆ ಮಾರ್ಗವನ್ನು ಕಂಡುಹಿಡಿಯುವದು ಅವಳ ಸಜೀವತೆಯ ಲಕ್ಷಣವನ್ನು ಸಾರುತ್ತದೆ. ''ನಾವು ಕಲಿಯದೆ ಹೋದರೂ ಸರಿ,

ನಮ್ಮ ಮಕ್ಕಳಾದರೂ ಕಲಿತು ಸುಖಿಗಳಾಗಲಿ," ಎಂದು ಅನೇಕ ತಾಯಂದಿರು ಇಂದು ಉದ್ಗಾರ ತೆಗೆಯುತ್ತಾರೆ. 'ವಿದ್ಯೆ' ಎಲ್ಲರಿಗೂ ಬೇಕು ನಿಜ, ಆದರೆ ಅವರ ಅರ್ಥ 'ವಿದ್ಯೆ' ವಿದ್ಯೆಗಾಗಿ ಅಲ್ಲ, ಹಣಕ್ಕಾಗಿ! ಅದೇ ಅವರ ಮುಖ್ಯ ಉದ್ದೇಶ. ತಾನು ಪಟ್ಟ ಕಷ್ಟವನ್ನು ತನ್ನವರು ಪಡದಂತೆ ವಿಚಾರಿಯು ನೋಡಿಕೊಳ್ಳುತ್ತಾನೆ; ಹಾಗೆಯೇ ಅವರೂ; ಆರ್ಥಿಕ ಕ್ಷೇತ್ರದಲ್ಲಿ ಎಷ್ಟೊಂದು ಪರಾವಲಂಬಿಗಳಾಗಿ ಅವರು ಬದುಕಿರಬಹುದು! ಎಂಬುದು ಇದರಿಂದ ಸಿದ್ಧವಾಗುವದು.

ಆರ್ಥಿಕ ಸ್ವಾತಂತ್ರ್ಯಕ್ಕೆ ಪ್ರಾಧಾನ್ಯ ದೊರೆತಾಗ, ತನ್ನ ತ್ಯಾಗದ ಅರಿವು ಸಮಾಜಕ್ಕಾಗದಿದ್ದಾಗ, ಸ್ತ್ರೀಯು ತನ್ನ ಗೊತ್ತುಗುರಿಯಲ್ಲಿ, ಅದನ್ನು ಸಾಧಿಸುವ ಮಾರ್ಗದಲ್ಲಿ ವ್ಯತ್ಯಾಸ ಕಲ್ಪಿಸಲೆಳಸಿದ್ದರಲ್ಲಿ ಆಶ್ಚರ್ಯವಿಲ್ಲ. ಎದುರಿಸಬೇಕಾದ ಪರಿಸ್ಥಿತಿಯೇ ಅವಳನ್ನು ಆ ಕಾರ್ಯಕ್ಕೆ ಪ್ರೇರೇಪಿಸುತ್ತದೆ. ಒಂದು ಸಣ್ಣ ಉದಾಹರಣೆಯನ್ನೇ ನೋಡಬಹುದು. ಪುರುಷನು ಮೊದಲನೆಯ ಹೆಂಡತಿ ಪದವೀಧರೆಯಿಲ್ಲವೆಂದು ಪದವಿಯುಳ್ಳವಳನ್ನು ವರಿಸಿದರೆ ಮೊದಲನೆಯವಳು ತನ್ನ ಮಕ್ಕಳನ್ನು ಪದವೀಧರೆಯರನ್ನಾಗಿ ಮಾಡುವ ಪಣವನ್ನೇ ತೊಟ್ಟುಬಿಡುತ್ತಾಳೆ! ಇಂದಿನ ಕಾಲದಲ್ಲೂ ಇಂಗ್ಲೀಷ ಕಲಿಯದಿದ್ದರೆ ಮದುವೆಯ ಮಾರ್ಕೆಟ್ಟಿನಲ್ಲಿ ಕಾಲಿಡುವದೇ ಸಾಧ್ಯವಿಲ್ಲೆಂದು ಅನೇಕ ಪಾಲಕರು ತಮ್ಮ ಹೆಣ್ಮಕ್ಕಳನ್ನು ಇಂಗ್ಲೀಷ ಶಾಲೆಯಲ್ಲಿ ಓದಿಸುವದುಂಟು. ಇಷ್ಟೊಂದು ಅಧೀನಳಾಗುಳಿದ ಅವಳ ವ್ಯಕ್ತಿತ್ವದ ವಿಕಾಸಕ್ಕೆ ಅವಕಾಶವೆಲ್ಲಿ?

'ಆಧುನಿಕ ಮಹಿಳೆ', ಎಂದು ಕರೆಯಿಸಿಕೊಳ್ಳುವವಳು ಯಾವ ವರ್ಗದ ಪ್ರತಿನಿಧಿ? ಏನಾದರೂ ಸರಿ, ಪದವಿಯನ್ನು ಗಿಟ್ಟಿಸಿಯೇ ಬಿಡಬೇಕು ಎನ್ನುವವಳೇ? ಆ ವಿದ್ಯೆಯಲ್ಲಿ ಒಲವು ಇದ್ದವಳು ಅದನ್ನು ಸಾಧಿಸಬಹುದು; 'ಆದರೆ ಪುರುಷನಿಗಿಂತ ನಾನೇನು ಕಡಿಮೆ ?'' ಎಂದು ಆಹ್ವಾನದ ರೀತಿಯಲ್ಲಿ ಹೋರಾಡಿ ತಮಗೆ ಮೆಚ್ಚಿಕೆಯಾಗದ ಮಾರ್ಗವನ್ನನುಸರಿಸುವದು ನಿಷ್ಪ್ರಯೋಜನ. ಹೀಗೆ ಮಾಡುವದಾದರೆ ತಮ್ಮ ಗುಣಗಳ ಮೌಲ್ಯವನ್ನು ತಾನೇ ಇಳಿಸಿಕೊಂಡಂತಾಗುವದು. ಇನ್ನು ಇಂದಿನ ಶಿಕ್ಷಣ ಸ್ತ್ರೀಯರಿಗೆ ಉಚಿತವಾದುದಲ್ಲ; ಅವರ ಶಿಕ್ಷಣ ಬೇರೆಯಾಗಿರಬೇಕು, ಎಂದು ಕೆಲವರ ಅಭಿಪ್ರಾಯ: ಇಂದಿನ ಈ ಶಿಕ್ಷಣದ ಪರಿಣಾಮವಾಗಿಯೇ ಅವರು ತಿಳಿದುಕೊಂಡಂಥ ಸಾಮಾಜಿಕ ದುಷ್ಪರಿಣಾಮಗಳು ಸಂಭವಿಸುತ್ತಿರುವದು. ಸ್ತ್ರೀಯರ ದೃಷ್ಟಿಯಿಂದ ಶಿಕ್ಷಣ ಅನುಚಿತ ಸರಿ. ಪುರುಷರ ದೃಷ್ಟಿಯಿಂದಾದರೂ ಎಷ್ಟು ಮಟ್ಟಿಗೆ ಉಪಯುಕ್ತವಾಗಿದೆ ? ಯಾವುದೇ ಆದರ್ಶ ಶಿಕ್ಷಣದ ಅಭಾವದಲ್ಲಿ, ಇದ್ದ ಶಿಕ್ಷಣದಲ್ಲಿಯ ಒಳ್ಳೆಯ ಅಂಶವನ್ನು ಸ್ವೀಕರಿಸಲು ಆತಂಕವೇನಿದೆ? ಆದರೆ ಸ್ತ್ರೀಯು ಈ ಗುಣಗ್ರಾಹಕತೆಯಿಂದ ಯಾವುದೇ ಬಗೆಯ ಅಶಾಂತಿ ಯಾವ ಕ್ಷೇತ್ರದಲ್ಲಿಯೇ ಆಗುತ್ತಿದ್ದರೆ ಅದು ಮಾತ್ರ ಹಾನಿಕಾರಕ.

'ಆಧುನಿಕ ಮಹಿಳೆ'ಯ ವ್ಯಾಖ್ಯೆ ಇಂದು ಸಮಾಜದಲ್ಲಿ ಹಲವಾರು ವಿಧವಾಗಿದೆ. ಇದರಲ್ಲಿ ಮಹಿಳೆಯ ವ್ಯಾಖ್ಯೆ ಒಂದೂ ಇಲ್ಲ. ಪುರುಷ ನಿರ್ಮಿತ ಸಮಾಜದಲ್ಲಿ, ಪ್ರತಿಯೊಂದು ಕುಟುಂಬ ಘಟಕದ ಶಾಸಕನು ಪುರುಷನೇ ಆಗಿರುವಾಗ, ಮಹಿಳೆಯ ಕೂಗಿಗೆ ಅವಕಾಶಕೊಡುವ, ಬಿಡುವ ಮಾತು ಅವರ ಕೈಯಲ್ಲೇ. ಸ್ತ್ರೀಗೆ ಎಷ್ಟೊಂದು ಅವಕಾಶ ಕಲ್ಪಿಸಿಕೊಟ್ಟರೂ ಅವಳು ಅದರ ಉಪಯೋಗ ಮಾಡಿಕೊಳ್ಳಲಾರಳು, ಎಂದು ಪರ್ಯಾಯವಾಗಿ ತಮ್ಮ ದೊಡ್ಡತನವನ್ನು ಕೊಚ್ಚಿಕೊಳ್ಳುವ ಜನ ಬೇರೆ ಇದ್ದಾರೆ; ಸ್ತ್ರೀಗೆ ಬಸ್ಸಿಗಾಗಿ 'ಕ್ಯೂ'ನಿಂತಾಗಲೂ ಪ್ರಥಮ ಸ್ಥಾನ; ಪಾರ್ಲಿಮೆಂಟಿನಲ್ಲಿಯೂ ಅವಳಿಗಾಗಿ ಸ್ಥಾನವನ್ನು ಕಾಯ್ದಿರಿಸಲಾಗಿದೆ. ಅವಳ ಉನ್ನತಿಗಾಗಿ 'ಹಿಂದೂಕೋಡ' ಬಿಲ್ಲನ್ನು ಪಾಸುಮಾಡುವ ಪ್ರಯತ್ನವೂ ನಡೆದಿದೆ; ಸ್ತ್ರೀಗಾಗಿ ಇಷ್ಟೊಂದು ತ್ಯಾಗಮಾಡುವಲ್ಲಿ ಪುರುಷನ ಸ್ವಾರ್ಥವೇನಿದೆ ಎಂಬುದನ್ನು ನೋಡಲು ಬೇಡವೇ ? "ಆತ್ಮನಃ ಕೃತೇ ಸರ್ವಂ ಪ್ರಿಯಂ ಭವತಿ", ಎಂಬ ಮಾತು ಎಂದಿಗೂ ಸತ್ಯ. ನನ್ನಿಂದ ಲೇಖನವೊಂದನ್ನು ಒಯ್ದು ಪತ್ರಿಕೆಗೆ ಕೊಟ್ಟ ಮಹಾಶಯರೊಬ್ಬರು, "ನಾನೇ ಅವರಿಂದ ಲೇಖನವನ್ನು ಬರೆಯಿಸಿಕೊಂಡು ಬಂದವನು"

ಎಂದು ಹೆಮ್ಮೆಕೊಳ್ಳಕೊಂಡರು. "ಮೊದಲನೆಯ ಸಲ ಮೀಟಿಂಗಿಗೆ ಬಂದಾಗ ಮುಗುದೆಯಂತಿದ್ದ ಅವರನ್ನು ಮಾತನಾಡಲು ಪ್ರೇರೇಪಿಸಿದವನು ನಾನೇ" ಎಂದು ಇನ್ನೊಬ್ಬ ಮಹಾಶಯರು, ಸ್ತ್ರೀಯರನ್ನು ಮುಂದೆ ತಂದ ಕೀರ್ತಿಗೆ ತಮ್ಮನ್ನು ತಾವೇ ಪಾತ್ರರನ್ನಾಗಿ ಮಾಡಿಕೊಂಡರು! ಸ್ವಾರ್ಥದ ಭವ್ಯ ತಳಹದಿಯ ಮೇಲೆ ಪರಾರ್ಥದ ಕಟ್ಟಡ ಹೇಗೆ ತಾನೇ ನಿಲ್ಲಬಹುದು!

ಪಾಕಶಾಸ್ತ್ರದಲ್ಲಿ ನುರಿತವಳೊಬ್ಬಳು, ಲೇಖನ ಭಾಷಣಗಳಲ್ಲಿ ನಿಪುಣೆಯೊಬ್ಬಳು, ಇನ್ನುಳಿದ ಕಾರ್ಯಗಳನ್ನು ನೀಗಿಸಬಲ್ಲವಳೊಬ್ಬಳು, ಹೀಗೆ ಮೂವರು ಪತ್ನಿಯರಿದ್ದರೆ, ಪುರುಷನ ಜೀವನ, ಸ್ಥಾನಮಾನಗಳು ಸರಿಯಾಗಿರುವವೆಂದು ಮಹನೀಯರೊಬ್ಬರು ಅಭಿಪ್ರಾಯಪಡುತ್ತಾರೆ. ಪುರುಷನಿರ್ಮಿತ ಸಮಾಜದ ತುದಿ ಇದು! ಬಳಿಕ ಮಹಿಳೆಯ ಗೊತ್ತುಗುರಿಗಳ ಗತಿಯೇನು! ಪುರುಷನು ಸ್ತ್ರೀನಿರಪೇಕ್ಷ ಜೀವನ ನಡೆಸಿಯೂ ಸಮಾಜದಲ್ಲಿ ಸನ್ಮಾನ್ಯನಾಗಿರುವಂತೆ ಸ್ತ್ರೀ ಏಕೆ ಇರಬಾರದು? ಗೊತ್ತುಗುರಿಗಳನ್ನು ಏಕೆ ಸಾಧಿಸಬಾರದು? ಎಂಬುದು ದಾದಾ ಧರ್ಮಾಧಿಕಾರಿಯವರ ಮತ. ಸಾಮೂಹಿಕ ದೃಷ್ಟಿಕೋನದಿಂದ ಇದು ಎಷ್ಟರ ಮಟ್ಟಿಗೆ ವ್ಯಾವಹಾರಿಕ? ಇಂದಿಗೂ ಪುರುಷನ ಪೂರಕಶಕ್ತಿಯಾದ ಮಹಿಳೆ, ಪುರುಷನಿರ್ಮಿತ ಸಮಾಜದಲ್ಲಿ, ಪುರುಷನ ಅಪೇಕ್ಷೆಯ ಮೇರೆಗೆ ತನ್ನ ಗೊತ್ತುಗುರಿಗಳನ್ನು ಮಾರ್ಪಡಿಸಿಕೊಳ್ಳುತ್ತಲಿದ್ದಾಳೆ. ಯಾವುದೇ ಪರಿಸ್ಥಿತಿಯಲ್ಲಿ, ಶಾಂತಿ ಸಮಾಧಾನಗಳನ್ನು ಸಾಧಿಸುವದೇ ಅವಳ ಗುರಿ.

"ಕಡುಪಾತಕಂ ಗೈದು ಪೆಣ್ಣಾಗಿ ಸಂಭವಿಸಿದೊಡಲಂ ಪೊರೆವುದೆನ್ನೊಳಪರಾಧವುಂಟು", ಎಂದು ಸೀತಾದೇವಿಯನ್ನು ಕರುಣರಸ ಉಕ್ಕುವಂತೆ ಲಕ್ಷ್ಮೀಶ ಚಿತ್ರಿಸಿದ್ದಾನೆ ನಿಜ. ಸ್ತ್ರೀಯು ಸಮಾಜದಲ್ಲಿ ಪುರುಷನ ಕಾರುಣ್ಯಕ್ಕೆ ಪಾತ್ರಳಾಗಿದ್ದಾಳೆ. ಇಂದಿನ ಸಮಾಜದಲ್ಲಿ ಇದೂ ಕೊಂಚ ಹಿಂದೆ ಬಿದ್ದು, ದುರ್ಬಲತೆಯ ಆವಿಷ್ಕಾರವೇನೋ ಅನ್ನುವಂತೆ ಮಹಿಳೆಯ ಬಗ್ಗೆ ಪುರುಷನಲ್ಲಿ ಕೃತ್ರಿಮ ತಿರಸ್ಕಾರದ ಛಾಯೆ ತೋರುತ್ತಲಿದೆ. ಇದು ಅವಳು ಸ್ವೀಕರಿಸಿದ ಆಹ್ವಾನದ ಪರಿಣಾಮ!

"ಭಾರತ ಪ್ರಜಾಪ್ರಭುತ್ವದಲ್ಲಿ ಹರಿಜನ ಬಾಲಿಕೆಯೊಬ್ಬಳು ರಾಷ್ಟ್ರಾಧ್ಯಕ್ಷಳಾದರೆ ನನ್ನ ಮನೀಷೆ ಪೂರೈಸಿದಂತೆ", ಎಂದು ಗಾಂಧೀಜಿ ಒಂದು ಸಲ ನುಡಿದರಂತೆ! ರಾಜ್ಯಘಟನೆಯ ಮೇರೆಗೆ ಸಮಾನತೆ ಎಷ್ಟೇ ಅಂದವಾಗಿದ್ದರೂ ಸಾಮೂಹಿಕವಾಗಿ ಅದು ಇಳಿದು ಬರಬೇಕಾದರೆ ತುಂಬಾ ಕಠಿಣವಾಗಿದೆ. ಆಧುನಿಕ ಮಹಿಳೆಯನ್ನು ಅವಳ ಗೊತ್ತುಗುರಿಗಳನ್ನು ಅರಿಯುವ ಆಸ್ಥೆಯುಳ್ಳವರಾದರೂ ಸರಿಯಾಗಿ ತಿಳಿದುಕೊಂಡರೆ, ಸಾಮಾಜಿಕ ಭಾವನೆ ಎಷ್ಟೋ ಉದಾತ್ತವಾದೀತು! "ಆಧುನಿಕ ಮಹಿಳೆ ಬೆಡಗುಗಾತಿ; ನೆಮ್ಮದಿಯಾಗಿದ್ದ ಸಂಸಾರಗಳನ್ನು ಒಡೆದು, ಪುರುಷನನ್ನು ತನ್ನೆಡೆಗೆ ಎಳೆದುಕೊಳ್ಳುವದೇ ಅವಳ ಉದ್ದೇಶ" ಎಂದು ಶ್ರೀ ಕೈವಾರ ರಾಜಾರಾಯರು, 'ಜನಪ್ರಗತಿ'ಯಲ್ಲಿ ಬರೆದಿದ್ದಾರೆ; ಸ್ತ್ರೀ ಒಬ್ಬ ರಾಕ್ಷಸಿ ಎನ್ನುವಂತಿದೆ ಅವರ ಚಿತ್ರ. ಎಷ್ಟು ಸಂಸಾರಗಳನ್ನು ಒಡೆದು, ಯಾವ ಗುರಿಯನ್ನು ಮುಟ್ಟಬೇಕೆಂದಿದ್ದಾಳೆ ಆಧುನಿಕ ಮಹಿಳೆ? ಕೈಯಲ್ಲಿ ಲೇಖನಿಯಿದ್ದರೂ ಸಮಾಜದ, ಅದರಲ್ಲೂ ಸ್ತ್ರೀಸಮಾಜದ ಆಳವಾದ ಅಭ್ಯಾಸ ಬೇಕಲ್ಲವೇ? ಮಹಿಳೆಯು ಈ ಶಕ್ತಿಯನ್ನೊಪ್ಪಿಕೊಂಡ ಮೇಲೆ, ಪುರುಷನ ದೌರ್ಬಲ್ಯ ತನ್ನಿಂದುತಾನೆ ಸೂಚಿತವಾಗುವದಿಲ್ಲವೇ? ಅವಳ ಓರೆನೋಟದ ಅನುಗ್ರಹಕ್ಕಾಗಿ ಬೀದಿಯಲ್ಲಿ ಕಾಯ್ದಿರುವ ಯುವಕರ ಸಮೂಹ ಇದಕ್ಕೆ ಸಹಕಾರವನ್ನೇ ಸೂಚಿಸಿರುವದಲ್ಲ!

ಪುರುಷನು, 'ಸಂಸಾರಿಗ ಕಂಸ'ನಾಗಿ ಸ್ತ್ರೀಯನ್ನು ನೋಡುವಂತೆ, ಸ್ತ್ರೀ ನೋಡುವದು ಮಾತ್ರ ಎಂದಿಗೂ ಸಾಧ್ಯವಿಲ್ಲ. ತನ್ನ, ತನ್ನವರ ಹಿತಸಾಧನೆಯ ಜೊತೆಗೆ ಸಮಾಜದ ಹಿತವನ್ನೂ ಅವಳು ಸಾಧಿಸಬೇಕೆನ್ನುತ್ತಾಳೆ; ಸಮಾಜದಲ್ಲಿ,-ಗಂಡನ ಹೆಂಡತಿಯೆಂದಲ್ಲ,-ತನಗಾಗಿಯೇ ತನ್ನ ಯೋಗ್ಯತೆಯ ಮೂಲಕ ಹೆಂಡತಿಯಾಗುವದರ ಜೊತೆಗೆ ಒಂದು ಸ್ಥಾನವನ್ನು ಗಳಿಸಿಕೊಳ್ಳುವದು ಅವಳ ಬಯಕೆ. ಇದಕ್ಕೆ ಆರ್ಥಿಕ ಸ್ವಾತಂತ್ರ್ಯ, ಸೇವೆ, ತ್ಯಾಗಗಳ ಬೆಂಬಲ ಬೇಕಾದ್ದರಿಂದ ಆ ಮಾರ್ಗದಲ್ಲಿಯೂ ಅವಳ ಪ್ರಯತ್ನ !

ವಿದೇಶಗಳಲ್ಲಿ ಮಹಿಳೆಯ, ಜೀವನವನ್ನು, ಅವರ ಆಚಾರ ವಿಚಾರಗಳನ್ನು ನೋಡಿದರೆ ಭಾರತೀಯರಿಗೆ ಕೊಂಚ ಆಶ್ಚರ್ಯವಾಗಬಹುದು. ಅವರ ವಿವಾಹವಿಚ್ಛೇದನೆಯ ಸಂಖ್ಯೆಯನ್ನು ಕಂಡ ಭಾರತೀಯ ಮಹಿಳೆ, ವಿದೇಶೀಮಹಿಳೆಯ ಗುರಿಯೇ ಇದೇನೋ, ಎಂದು ದಿಗಿಲುಕೊಳ್ಳುವಳು. ಆದರೆ ಮದುವೆ ಯಾವುದೇ ಬಗೆಯ ವೈಯಕ್ತಿಕ, ಸಾಮಾಜಿಕ ಕಲ್ಯಾಣವನ್ನು ಸಾಧಿಸಲು ಅಸಮರ್ಥವಾದಲ್ಲಿ, ವಿಚ್ಛೇದನವೇ ಒಂದು ದಾರಿಯಾಗಿದೆ. ಜಪಾನಿನಲ್ಲಿ ಮಹಿಳೆ ೨೪ ಗಂಟೆಗಳ ಕಾಲ ದುಡಿಯುತ್ತಿದ್ದರೂ ಅವಳು ತನ್ನ ಗಳಿಕೆಗೆ ಬಾಧ್ಯಸ್ಥಳಲ್ಲವಂತೆ !

ನೈಸರ್ಗಿಕವಾಗಿ, ಮತ್ತೆ ಮಾನವಮಾತ್ರರಿಗೆ ಬರಬಹುದಾದ ಕಷ್ಟನಷ್ಟಗಳನ್ನು ಎದುರಿಸಲು ಭಾರತದ ಇಂದಿನ ಮಹಿಳೆಯೂ ಸಿದ್ಧಳಾಗಿದ್ದಾಳೆ. ಆದರೆ ಸಮಾಜದ ತಿರಸ್ಕಾರದ ನೋಟವಾಗಲಿ, ದಯೆಯ ಕಟಾಕ್ಷವಾಗಲಿ ಅವಳಿಗೆ ಬೇಕಿಲ್ಲ. ಸಮಾಜವು ಅವಳನ್ನು ಗೌರವದಿಂದ ಕಾಣಬೇಕಾಗಿದೆ. ಇದಕ್ಕಾಗಿ ಬರುವ ಭಾರತದ ಪೀಳಿಗೆಯನ್ನು ಈ ತಳಹದಿಯ ಮೇಲೆ ಕಟ್ಟಬೇಕಾಗಿದೆ; ಸ್ತ್ರೀಯ ಸ್ಥಾನಮಾನಗಳಿಂದ ಯಾವದೇ ದೇಶದ ಪ್ರಗತಿಯನ್ನು ಕಂಡುಹಿಡಿಯಬಹುದಂತೆ ! ಸಹಕಾರದಿಂದ ಎಲ್ಲೆಲ್ಲಿಯೂ ಶಾಂತಿಸಮಾಧಾನಗಳನ್ನು ಸ್ಥಾಪಿಸಿ, ಸಮಾಜದಲ್ಲಿ ಸನ್ಮಾನ್ಯಳಾಗಿರುವದೇ ಇಂದಿನ ಮಹಿಳೆಯ ಆಸೆ!

~





# ಮಾನವ

ಬಂದಾನೊ ಜಗದಿ ನಿಂದಾನೊ
ಮಾನವನೆಂಬುವನತಿ ಸಾಹಸಜೀವಿ ||
ತನ್ನಾಗಮನಕ್ಕೆ ಪರಮಾತ್ಮನ ಕರುಣ
ಕಾರಣವೆಂಬುದನು ಮರೆತಾನೊ|
ಜಗದಿ ಬೆರೆತಾನೊ ||

೧

ತಾ ನಿಂತ ಭೂಮಾತೆ ಏನೆಂತು ನೋಯದೆ
ಜೀವಾಳಿಯ ಪೊರೆವ ಪಾವನಯೆ
ಆದರೇನವಗಂತೆ? ಭೇದಭಾವದ ಚಿಂತೆ
ಯಾವಾಗಲೂ ದಹಿಸುತಿರುವಂತೆಯೆ

೨

ಇದು ನನ್ನದದು ನನ್ನದಿದು ನಿನ್ನದಾದರೂ
ನನಗೇ ಸೇರಲಿ ಎನ್ನುತಲಿ
ಕಡಿಕಡಿದಾಡುತ ಕಡುನೆತ್ತರ ಸುರಿಸಿ
ತನತೊಂದೆ ಬಿಂಕದಲಿ ಮೆರೆಯುತಲಿ

೩

ಜೀವಕೋಟಿಗೆ ತನ್ನ ಜೀವರಾಶಿಯಿಂದ
ಜೀವಕಳೆಯನ್ನಿತ್ತು ಕಾಪಾಡುವ
ತೆರೆತೊರೆನದಿವಾರಿನಿಧಿಗಳನೆಲ್ಲ ಕೈ-
ವಶಮಾಡಿಕೊಳ್ಳಲು ಹೆಣಗಾಡುವ

೪

ಚಂಡಪ್ರಚಂಡನ ತೇಜದಂಶಗಳಿಂದ
ರಾಮಣೀಯಕವಾದ ಭೂಸೃಷ್ಟಿಯ
ಪುಂಡ, ಕೃತ್ರಿಮ ತೇಜದಿಂದ ದಹಿಸುವೆನೆಂದು
ಸುರಿಸುವ ಬಾಂಬಿನ ಸುವೃಷ್ಟಿಯ

೫

ಪ್ರಾಣದ ವಾಯುವ ನಿಗ್ರಹಿಸಿ ಬಾನ್ದಳವ-
ನಳೆದಳೆದು ನೋಡುವ ಹವ್ಯಾಸವ
ತಾಳುತ್ತ ಸರ್ವಸ್ವತಂತ್ರನೆಂದೆನಿಸುವ
ಮಾನವನಾಯಾಸ ಸಾಯಾಸವೆ

೬

ಪೃಥವಿ ಆಪ್ ತೇಜ ವಾಯು ಬಾನುಗಳೆಂಬ
ಪಂಚಭೂತಂಗಳ ಕಾರುಣ್ಯದಿ
ಚೈತನ್ಯವ ಪಡೆದು ಕಣ್ಬಿಡುತಿದ್ದರೂ
ಮೈಮರೆತಿರುವನು ಮಮಕಾರದಿ

೭

ಈಶನ ಕೃಪೆಯಿಂದ ಶುಚಿ ರುಚಿ ರಸ ಗಂಧ
ವಾಂತರೂ ಸಂತೋಷವಿನ್ನೆಲ್ಲಿದೆ?
ಮಾನವನೇನಿವನೇಸೊಂದು ಮೋಸದಿ
ಗಾಸಿಗೊಂಡನು ಹೇವ ಬಿಟ್ಟಲ್ಲದೆ

೮

ಆದನಿದನು ಜೋಡಿಸಿ ಇದನದನು ಕೂಡಿಸಿ
ದೇವನನೇಡಿಸಿ ಪ್ರತಿಲೋಕವ
ಯಂತ್ರ ತಂತ್ರಗಳಿಂದ ನಿರ್ಮಿಸುವ ಹಠದಿಂದ
ಲಿಂದೇನು ಪೊಂದುವನೆ ಪ್ರತಿನಾಕವ

೯

ತಿರೆಯೇನು ಬಾನೇನು ಬಾನಾಚೆ ಮತ್ತೇನು
ಮಂಗಳದಂಗಳದಲ್ಲೇನಿದೆ?
ಅಂತೇನು ಇಂತೇನು ಪಿಂತೇನು ಮುಂತೇನು
ಎಂದೆಂಬ ತಿಣಕಾಟದಿಂದೇನಿದೆ?

೧೦

ತಾನಾರು ತನ್ನೊಬ್ಬ ನೆರೆಯಾರೆನ್ನುತ
ಯೋಚಿಸಿ ಬಾಳಿನ ಗುರಿಯೇನಿದೆ
ಎಂಬುದನರಿಯುತ ಭೂಭಾರವಾಗದಲೆ
ಬಾಳುವ ಬಾಳ ಬಿಟ್ಟೆನ್ನೇನಿದೆ?

—ದ. ಲ. ಕೆರೂರ

---

ಮಾನವನ ಕೃತಿಯನವಲಂಬಿಸಿಲ್ಲವೊ ದೇವ, ಅವನ ಅರ್ಪಣೆಗಳೂ ಬೇಕಿಲ್ಲವಾತಂಗೆ ಆತ ಹೊರಿಸಿದ ಹಗುರ ನೊಗವ ತಾಳ್ವಮನುಜನೇ ಅವನ ಸೇವೆಯ ದಿಟದಿ ಮಾಡುವನ..

—ಮಿಲ್ಟನ್

# ದ್ರಾವಿಡ ಭಾಷೆಗಳ ಮೇಲೆ ಹೊಸ ಬೆಳಕು

ದ್ರಾವಿಡ ಭಾಷೆಗಳ ಶಬ್ದಕೋಶ (Lexicon) ದ ಮೇಲೆ ಮಾತ್ರವಲ್ಲದೆ, ಶಬ್ದರಚನಾಪದ್ಧತಿ (Morphology) ವಾಕ್ಯರಚನಾಕ್ರಮ (Syntax)ಗಳ ಮೇಲೆಯೂ ಸಂಸ್ಕೃತದ ಆಳವಾದ ಪ್ರಭಾವವುಂಟಾಗಿ ಭಾಷಾಮಿಶ್ರಣ (Linguistic Miscegenation) ವಾಗಿದೆ ಎಂದು ಈ ಲೇಖನವು ತೋರಿಸುವ ಹೊಸ ಬೆಳಕು. ವೈದಿಕ ವಾಙ್ಮಯ, ಐಂದ್ರ ಪರಂಪರೆಯ ಪ್ರಾತಿಶಾಖ್ಯ, ತೋಳ್ಕಾಪ್ಪಿಯಂ, ಶಬ್ದಮಣಿದರ್ಪಣಗಳು ಈ ಸಿದ್ಧಾಂತಕ್ಕೆ ಆಧಾರಗಳು. ಕೆಲವು ಎಡೆಯಲ್ಲಿ ಸಂಸ್ಕೃತೇತರ ಆರ್ಯಭಾಷೆಗಳ ಸಹಾಯವನ್ನು ತೆಗೆದುಕೊಳ್ಳಲಾಗಿದೆ.

ಲೇಖಕರು: **ಡಾ|| ವರದರಾಜ ಉಮರ್ಜಿ**
ಎಮ್. ಎ., ಪಿಎಚ್. ಡಿ.

---

## ೧. ದ್ರಾವಿಡ ಭಾಷೆಗಳು ಹಾಗು ಸಂಸ್ಕೃತ

ವಿಂಧ್ಯ ಪರ್ವತದ ದಕ್ಷಿಣದಲ್ಲಿ ಕನ್ನಡ, ತೆಲಗು, ತಮಿಳು ಮತ್ತು ಮಲಯಾಳಗಳೆಂಬ ದ್ರಾವಿಡ ಭಾಷೆಗಳು ಅನೇಕ ಶತಮಾನಗಳಿಂದಲೂ ಪ್ರಭಾವಶಾಲಿಯಾಗಿ ನಡೆದುಬಂದಿವೆ. ಅವುಗಳಿಗೆ ಒಂದು ಗಣ್ಯಸ್ಥಾನವು ಮೀಸಲಾಗಿದೆ. ಜನಸಂಖ್ಯೆಯ ದೃಷ್ಟಿಯಿಂದ, ಅಖಿಲ ಹಿಂದುಸ್ತಾನದ ಭಾಷೆಗಳಲ್ಲಿ ಹಿಂದಿಯ ನಂತರ (ಹಿಂದೀ ಮಾತಾಡುವವರು ೧೨ ಕೋಟಿ) ದ್ರಾವಿಡ ಭಾಷೆಗಳನ್ನು ಆಡುವವರೇ ಹೆಚ್ಚಾಗಿರುವರು. (ಕರ್ನಾಟಕ ಏಕೀಕರಣ, ಪರಿಶಿಷ್ಟ ೫). ಮೂಲತಃ ದ್ರಾವಿಡ ಜನಾಂಗವು ಆರ್ಯರಿಂದ ಭಿನ್ನವಾದರೂ ಐತಿಹಾಸಿಕ ಕಾಲದ ಪೂರ್ವದಲ್ಲಿಯೇ ಸಂಸ್ಕೃತಿ ಮಿಶ್ರಣವಾಗಿ ದ್ರಾವಿಡರೂ ಮರಾಟಗರು ಮತ್ತು ಬಂಗಾಲಿಗಳಷ್ಟೇ ಹಿಂದುಗಳೂ ಹಿಂದೂ ಸಂಸ್ಕೃತಿಯ ಅಭಿಮಾನಿಗಳೂ ಆಗಿರುವರು; ದೇಶೀಯ ದ್ರಾವಿಡ ಭಾಷೆಗಳನ್ನು ಆಡುವವರಾದರೂ ಮರಾಟಗರು ಮತ್ತು ಬಂಗಾಲಿಗಳಂತೆ ಸಂಸ್ಕೃತವನ್ನು ದೇವಭಾಷೆ ಎಂದೂ ದೇಶೀಯ ಭಾಷೆಗಳನ್ನು ಚನ್ನಾಗಿ ತಿಳಿದುಕೊಳ್ಳಲು ಸಂಸ್ಕೃತ (ಪ್ರಾಕೃತ) ಗಳ ಅಭ್ಯಾಸವು ಅನಿವಾರ್ಯವೆಂದೂ ಮನ್ನಿಸುವರು.

## ೨. ಭಾಷಾಮಿಶ್ರಣ

ರಾಮಾಯಣದಲ್ಲಿಯ ಅಗಸ್ತ್ಯ-ವಾತಾಪಿ-ಇಲ್ವಲಾ ಉಪಾಖ್ಯಾನವು ಆರ್ಯ-ದ್ರಾವಿಡ ಸಂಪರ್ಕವಾಗಿ ಸಂಸ್ಕೃತಿಮಿಶ್ರಣ (ಆರ್ಯೀಕರಣ) ದ ದ್ಯೋತಕವೆಂದು ವಿದ್ವಾಂಸರ ಅಭಿಪ್ರಾಯ. ವಂಶ ಹಾಗೂ ಸಂಸ್ಕೃತಿ ಮಿಶ್ರಣವಾದಲ್ಲಿ ಭಾಷಾಮಿಶ್ರಣ (Linguistic Miscegenation) ವಾಗುವದು ಕ್ರಮಪ್ರಾಪ್ತ. ಆರ್ಯ ಋಷಿಯಾದ ಅಗಸ್ತ್ಯನು ವಿಂಧ್ಯ ಪರ್ವತವನ್ನು ದಾಟ ದ್ರಾವಿಡ ಕನ್ನಿಕೆ (?) ಯಾದ ಲೋಪಾಮುದ್ರೆಯನ್ನು ಲಗ್ನವಾಗಿ ತಮಿಳ ಭಾಷೆಯ ಪ್ರಾಚೀನ ವ್ಯಾಕರಣವಾದ 'ಪೇರಗುತ್ತಿಯಂ' ಎಂಬದನ್ನು ರಚಿಸಿ ತಮಿಳ ಮುನಿ ಎನಿಸಿಕೊಂಡನು. ಅವನ ಶಿಷ್ಯನಾದ ಧೂಮಾಗ್ನಿಯು—ಜಮದಗ್ನಿಯ ಮಗನು—ಐಂದ್ರ ವ್ಯಾಕರಣವನ್ನು ಅಭ್ಯಾಸ ಮಾಡಿ "ತೋಳ್ಕಾಪ್ಪಿಯಂ" (ಕ್ರಿ. ಪೂ. ೪೦೦) ಎಂಬ ಅತಿ ಪುರಾತನ—ಈಗ ಉಪಲಬ್ಧವಿರುವ—ತಮಿಳು ವ್ಯಾಕರಣವನ್ನು ಬರೆದನು. 'ತೋಳ್ಕಾಪ್ಪಿಯಂ' ದ ಕಾಲವು ಕ್ರಿ. ಪೂ. ೧೨೦೦ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಶಕ್ಯಾನುಷ್ಠಾನ ನಿಜೇಷ್ಟ ಸಿದ್ಧಿಯುಳ್ಳವನೂ ಕನ್ನಡಭಾಷಾ ಸೀಮಾಪುರುಷನೂ ಆದ ಕೇಶಿರಾಜನು ಐಂದ್ರ ಪರಂಪರೆಯ ಕಾಲಾಪ (ಕಾತಂತ್ರ) ವ್ಯಾಕರಣ ಮಾರ್ಗಾನುಯಾಯಿ ಎಂದು ಲಿಂಗಣಾರಾಧ್ಯನು ಶಬ್ದಮಣಿದರ್ಪಣದ ಮೇಲಿನ ತನ್ನ ವೃತ್ತಿಯ ಒಂದೆಡೆಯಲ್ಲಿ ಹೇಳಿದ್ದಾನೆ.* ಪಾಣಿನಿಗೂ ಐಂದ್ರ ವ್ಯಾಕರಣಕಾರರಿಗೂ ಅನೇಕ ವಿಷಯ (ವರ್ಣೋಚ್ಚಾರ, ಶಬ್ದರಚನೆ ಮುಂ.) ಗಳಲ್ಲಿ ಭಿನ್ನಾಭಿಪ್ರಾಯಗಳಿವೆ. 'ತೋಳ್ಕಾಪ್ಪಿಯಂ'ದ ಕರ್ತೃವಾದ ಧೂಮಾಗ್ನಿಯು ಐಂದ್ರ ವ್ಯಾಕರಣ ಪರಂಪರೆಯನ್ನು ಅನುಸರಿಸಿರುವ ವೈದಿಕ ವಾಙ್ಮಯದ ಮೇಲಿನ ಗ್ರಂಥಗಳಾದ ಪ್ರಾತ್ಯಶಾಖ್ಯಗಳ ಸೂತ್ರಗಳನ್ನೂ ತನ್ನ ಗ್ರಂಥದ ಅನೇಕ ಕಡೆಯಲ್ಲಿ ಅನುವಾದಿಸಿದ್ದಾನೆ. ದ್ರಾವಿಡ ವ್ಯಾಕರಣಕಾರರು ದ್ರಾವಿಡ ಭಾಷೆಯ ವ್ಯಾಕರಣ (ವರ್ಣೋಚ್ಚಾರ, ಶಬ್ದರಚನೆ, ವಾಕ್ಯರಚನೆ)ದ ಕೆಲವು ಅಂಶಗಳನ್ನು ಹೇಳುವಾಗ ಅವನ್ನು ಐಂದ್ರ ವ್ಯಾಕರಣ ನಿಯಮಗಳ ಕಕ್ಷೆಯಲ್ಲಿ ತಂದಿರುವರೆಂದು ಸ್ಪಷ್ಟವಾಗಿರುವದು. ದ್ರಾವಿಡ ವ್ಯಾಕರಣ ರೂಪಗಳು ಐಂದ್ರ ವ್ಯಾಕರಣದ ಪಡಿಯಚ್ಚಿನಲ್ಲಿ ಬಂದಿರುವ ಕೆಲವು ಅಂಶಗಳನ್ನು ಕ್ರಮವಾಗಿ ವಿಚಾರಿಸುವ.

## ೩. ವರ್ಣೋಚ್ಚಾರ

ದ್ರಾವಿಡ ವರ್ಣಸಮಾಮ್ನಾಯದಲ್ಲಿ ಮಹಾಪ್ರಾಣ, 'ಹ'ಕಾರ ಮೊದಲಾದವು ಸಂಸ್ಕೃತದಿಂದ ಬಂದು ಸೇರಿವೆಯೆಂಬ ಬಗೆಗೆ ವಾದವೇ ಇಲ್ಲ. ವರ್ಣೋಚ್ಚಾರ (Phonology) ದಲ್ಲಿ ಕೆಲವು ಸಂದಿಗ್ಧ ಅಂಶಗಳನ್ನು ಮಾತ್ರ ಇಲ್ಲಿ ಚರ್ಚಿಸಲಾಗುವುದು. ಉದಾ: (ಅ) ಹ್ರಸ್ವ 'ಎ' ಹಾಗು 'ಒ'; (ಬ) ಱ ಮತ್ತು ೞ.

(ಅ) ಹ್ರಸ್ವ 'ಎ' ಹಾಗು 'ಒ' ಇವು ದ್ರಾವಿಡಭಾಷೆಗಳಲ್ಲಿ ಮಾತ್ರ ಇವೆ, ಸಂಸ್ಕೃತದಲ್ಲಿ ಇಲ್ಲೆಂಬುದು ಸಮಂಜಸವಲ್ಲೆಂದು ನಮಗೆ ತೋರುವದು. ಸಾಮವೇದದ 'ರಾಣಾಯನೀಯ' 'ಸಾತ್ಯಮುಗ್ರೀ' ಶಾಖೆಯವರು ಹ್ರಸ್ವ 'ಎ' ಹಾಗು 'ಒ' ಗಳನ್ನು ಪರಿಗ್ರಹಿಸಿರುವರು.‡ ಅಖಿಲ ವಿಶ್ವದಲ್ಲಿ ಪುರಾತನತಮ ಗ್ರಂಥವಾದ ಋಗ್ವೇದದಲ್ಲಿಯೂ ಹ್ರಸ್ವ 'ಎ', 'ಒ' ಗಳುಂಟೆಂದು ಸಂಶೋಧನೆಗಳಿಂದ ಗೊತ್ತಾಗುತ್ತದೆ.† ಪ್ರಾಕೃತದಲ್ಲಿಯೂ ಅಪಭ್ರಂಶದಲ್ಲಿಯೂ ಹ್ರಸ್ವ 'ಎ', 'ಒ' ಗಳಿವೆ. ಈ ವರ್ಣಗಳು 'ಸಂಸ್ಕೃತದೊಳಿಲ್ಲ' ಎಂದು ಕೇಶಿರಾಜನು ಹೇಳಿದಾಗ ತನ್ನ ಕಾಲದಲ್ಲಿ ಪ್ರಬಲವಾಗಿದ್ದ ಪಾಣಿನಿಯ ಸಂಸ್ಕೃತವನ್ನು ಅನುಲಕ್ಷಿಸಿ ಹೇಳಿದನೆಂಬುದು ಸ್ಪಷ್ಟ.

(ಬ) ಱ, ೞ ಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಱಕಾರವು ದ್ರಾವಿಡ ಭಾಷೆಗಳಲ್ಲಿ ಮಾತ್ರ ಕಾಣಿಸುತ್ತದೆಂಬ ಕಾಲ್ಡ್‌ವೆಲ್ ಸಾಹೇಬರ

---

* ಚತ್ವಾರ್ ಶಬ್ದಮಂ ಪಾಣಿನ್ಯಾಚಾರ್ಯರ್ ಚತುರ್ ಶಬ್ದಮೆಂದು ಪೇಳ್ದಪರ್ ಅಂತೆನಲಾಗದು. ಶಬ್ದಮಣಿದರ್ಪಣಂ ಕಾಲಾಪ ವ್ಯಾಕರಣ ಮಾರ್ಗದಿಂ ಪೇಳ್ದನಾಗಿ, ಅದೆಂತೆನೆ, ಇತ್ಯಾದಿ.

‡ ಸ ಪೂರ್ವಸ್ಯ ಅರ್ಧಸದೃಶಮೇಕೇಷಾಂ ಅರ್ಧಸದೃಶಮೇಕೇಷಾಂ— ತೈತ್ತಿರೀಯ ಪ್ರಾತಿಶಾಖ್ಯೆ, ಅ. ೨, ಸೂ. ೧೦.

† Bhandarkar Institute Researches.

ಹೇಳಿಕೆ ಸಮಂಜಸವಲ್ಲ. ಪ್ರಾತಿಶಾಖ್ಯೆಗಳಲ್ಲಿ ರೇಫ್ ರಕಾರವಲ್ಲದೆ ವರ್ತ್ಸ್ಯ† ರಕಾರವು ಹೇಳಲ್ಪಟ್ಟಿದೆ. ತಮಿಳಿನಲ್ಲಿ ಱಕಾರಕ್ಕೆ ಸಮನಾದ ற ಕಾರವು ತಾಲವ್ಯವೆಂದು ಹೇಳಿದೆ. ವರ್ತ್ಸ್ಯವೆಂದರೂ ಹಲ್ಲುಗಳ ಮೇಲ್ಭಾಗದಲ್ಲಿ ಉಬ್ಬಿದ ಪ್ರದೇಶದಲ್ಲಿ ಹುಟ್ಟುವ ಅಂದರೆ ತಾಲವ್ಯ ವರ್ಣವೆಂದೇ ಅರ್ಥ. ಶಬ್ದಮಣಿದರ್ಪಣದಲ್ಲಿಯೂ ರಕಾರವನ್ನು 'ಬೆಟ್ಟಿತ್ತಾಗಿ' (ಜೋರಾಗಿ) ಅಂದರೆ ತಾಲವ್ಯವಾಗಿ (?) ಉಚ್ಚರಿಸಿದರೆ 'ಱಂ ಪುಟ್ಟುಗುಂ' ಎಂದಿದೆ. ಸಂಸ್ಕೃತ ಶಬ್ದಗಳಲ್ಲಿಯೂ ತದ್ಭವ ಶಬ್ದಗಳಲ್ಲಿಯೂ ಱಕಾರ ಕಾಣುವದುಂಟು. ಉದಾ: ಸಂಸ್ಕೃತ ಱೂಢಿ, ಆಱೂಢ (ಶಾಸನಗಳಲ್ಲಿ); ಸಂಸ್ಕೃತ ಪ್ರತ್ಯಯ ಕಾಱ, ಗಾಱ (ಹಳಗನ್ನಡದಲ್ಲಿ); ತದ್ಭವ ಅಱುಲ, ಕವಾಱ.*

"ೞ" ಕಾರವು ಹಳೆಗನ್ನಡದಲ್ಲಿಯೂ ತತ್ಸಮನಾದ ழ ಕಾರವು ಈಗಿನ ತಮಿಳಿನಲ್ಲಿಯೂ ಕಾಣಿಸಿಕೊಳ್ಳುವದು. ತಮಿಳು ழ ಕಾರವು ಕೆಲವೆಡೆಯಲ್ಲಿ 'ಯ್' ಕಾರವಾಗಿಯೂ ಕೆಲವಡೆಯಲ್ಲಿ 'ಳ್' ಕಾರವಾಗಿಯೂ ಈಗ್ಗೆ ಉಚ್ಚರಿಸಲ್ಪಡುತ್ತದೆ. ಇದರ ಸರಿಯಾದ ಮೂಲ ಉಚ್ಚಾರವು ಏನಿರಬಹುದೆಂದು ಊಹಿಸುವದು ಸಾಧ್ಯವಾಗದಿದ್ದರೂ ಇದು ಒಂದು ತರಹದ 'ಡ' ಕಾರವೆಂದು ಹೇಳಬಹುದು. "ಡ ಕಾರಮುಂ ಬೆಟ್ಟಿತ್ತಾಗಿ ಉಚ್ಚರಿಸೆ ಱೞಂ ಪುಟ್ಟುಗುಂ 'ಡ' ಕಾರಮುಂ ಮೂರ್ಧನ್ಯಂ. ಱ ೞಂ ಅದರೊಳ್ ಏಕಸ್ಥಾನಿ" ಎಂದು ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಹೇಳಿರುವನು. ೞ ಕಾರದ ಉಚ್ಚಾರವು ಮೂರ್ಧನ್ಯವಾಗಿರದೆ 'Alveolar' ಇರಬಹುದೆಂದು ಡಾ|| ನರಸಿಂಹಯ್ಯನವರ ಮತ. ಈ ಸಂದರ್ಭದಲ್ಲಿ ಮೂರ್ಧನ್ಯವರ್ಗದ ಮೂರನೇ ವರ್ಣವಾದ "ಡ" ಕಾರವಲ್ಲದೆ ಜಿಹ್ವಾಮೂಲೀಯ ತಾಲು "ಡ" ಕಾರವನ್ನು ಪ್ರಾತಿಶಾಖ್ಯೆಯಲ್ಲಿ ಹೇಳಿರುವದು ಗಮನಾರ್ಹವಾಗಿದೆ.‡

ಜಿಹ್ವಾಮೂಲ ತಾಲು "ಡ" = Alveolar "ಡ" ಐಂದ್ರಮಾರ್ಗಾನುವರ್ತಿ ಶಬ್ದಮಣಿದರ್ಪಣದಲ್ಲಿ ಇರುವದು. ೞ ಕಾರವು ಒಂದು ತರಹದ ಡ ಕಾರವೆಂದು ತೊಳ್ಕಾಪ್ಪಿಯಂದಲ್ಲಿ, ಅದರ (ழ) ಉಚ್ಚಾರವು ಜಿಹ್ವಾಮೂಲ ತಾಲು ಎಂದೂ ವರ್ಣಸಮಾಮ್ನಾಯದಲ್ಲಿ ಹೇಳಿದ್ದೇನು ಆಶ್ಚರ್ಯವಲ್ಲ. ಕನ್ನಡ 'ೞ' ತಮಿಳ 'ழ' ಕಾರವು ಜಿಹ್ವಾಮೂಲ ತಾಲು ಎಂದು ಹೇಳುವದಕ್ಕೆ ಇನ್ನೂ ಒಂದು ಕಾರಣವುಂಟು. ವೈದಿಕ ವಾಙ್ಮಯದಲ್ಲಿ ಜಿಹ್ವಾಮೂಲ ತಾಲು "ಡ" ಕಾರವು "ಳ್" ಕಾರವಾಗುವದು.×

ಅದರಂತೆ ಕನ್ನಡದಲ್ಲಿಯೂ ತಮಿಳಿನಲ್ಲಿಯೂ ೞ ಕಾರವು ಳ್ ಕಾರವಾಗುವದು. ೞ ಕಾರವು ತದ್ಭವ ಶಬ್ದಗಳಲ್ಲಿಯೂ ಉಪಯೋಗಿಸಲ್ಪಟ್ಟಿದನ್ನು ನೋಡಬಹುದು. ಉದಾ:— ಗೞಿಗೆ (ಸಂ:—ಘಟಿಕಾ), ಕೋೞಿ (ಸಂ.– ಕುಕ್ಕುಟ), ಪೞಿಹಟ್ಟಂ (ಸಂ.– ಪ್ರತಿಹಸ್ತಂ) ಮುಂ. ಮಧುರಾ ತಿನೇವಳ್ಳಿ ಪ್ರಾಕೃತ ಶಾಸನದಲ್ಲಿ ತಮಿಳು ழ ಕಾರವನ್ನು ಹೋಲುವ ಚಿಹ್ನವಿದೆ. ಹೀಗೆ ಐಂದ್ರ ವರ್ಣಸಮಾಮ್ನಾಯದಲ್ಲಿ ಬರುವ ಱ ೞ ಕಾರಗಳು ಪ್ರಾಕೃತದಲ್ಲಿ ಕಾಣಿಸಿಕೊಳ್ಳುವಂತೆ ತಮಿಳು ಕನ್ನಡಗಳಲ್ಲಿಯೂ ಕಾಣಿಸಿಕೊಳ್ಳುವವು. ದ್ರಾವಿಡ ಭಾಷೆಯ ಜೀವಾಳ ಎನಿಸಿಕೊಳ್ಳುವ 'ಱ' 'ೞ' ಮುಂತಾದವುಗಳು ಸಂಸ್ಕೃತದಿಂದ ಬಂದಿವೆಯೆಂದ ಕೂಡಲೆ ಸಂಸ್ಕೃತ ಸಂಪರ್ಕದ ಪೂರ್ವದಲ್ಲಿ ದ್ರಾವಿಡ ಭಾಷೆಗಳಲ್ಲಿ ವರ್ಣಸಮಾಮ್ನಾಯವೇ ಇದ್ದಿಲ್ಲವೆಂದು ಅರ್ಥವಲ್ಲ. ಅ ಆ ಇತ್ಯಾದಿ ವರ್ಣಗಳು ಇರಬಹುದು. ಅವು ಸಂಸ್ಕೃತದ ವರ್ಚಸ್ಸಿಗೆ ಒಳಗಾಗಿ ಅವುಗಳ ಉಚ್ಚಾರವು ಬದಲಾಗಿರಬಹುದೆಂದು ನಮ್ಮ ಅಭಿಪ್ರಾಯ. ಆದ್ದರಿಂದಲೇ ಐಂದ್ರ ವ್ಯಾಕರಣ ನಿಯಮಕಕ್ಷಕ್ಕೆ ದ್ರಾವಿಡವರ್ಣ ಉಚ್ಚಾರವು ಬಂದಿದೆಯೆಂದು ಸ್ಪಷ್ಟವಾಗುವದು.

## ೪. ಶಬ್ದಕೋಶ

ದ್ರಾವಿಡ ಭಾಷೆಯ ಶಬ್ದಕೋಶ (Lexicon) ವು ಸಂಸ್ಕೃತದ ಆಳವಾದ ಪ್ರಭಾವಕ್ಕೆ ಒಳಗಾಗಿದೆ ಎಂದು ಎಲ್ಲರೂ ಒಪ್ಪುತ್ತಾರೆ. ದ್ರಾವಿಡ ಭಾಷೆಯ ಅತಿ ಪ್ರಾಚೀನ ಲೇಖನ (Records) ಗಳನ್ನು ನೋಡಿದರೂ ಸಂಸ್ಕೃತಶಬ್ದಮಿಶ್ರಣವಾಗದ ದ್ರಾವಿಡ ವಾಕ್ಯಗಳು ಸಿಗಲಾರವು. ದ್ರಾವಿಡ ಭಾಷೆಯ ಪ್ರಾಚೀನತಮ ಗ್ರಂಥವಾದ "ತೊಳ್ಕಾಪ್ಪಿಯಂ" (ಕ್ರಿ. ಪೂ. ೪೦೦) ದಲ್ಲಿ ಅನೇಕ ಸಂಸ್ಕೃತ ಶಬ್ದಗಳನ್ನು ಕಾಣಬಹುದು. ಉದಾ: ದೇವಂ (ತೇಯವಂ), ಕಾರಣಂ, ಕಾಲಂ, ಲೋಕ, ವರುಣಂ, ದೂತ, ಉಪಮಾ, ನಾಟಕಂ, ಮಹಾರಾಜ, ತಾಪಸ, ಹವಿ, ಅಮರರ್, ಕರ್ಮನ್, ಮಂತ್ರ ಮುಂ. ಗ್ರೀಕ ಫಾರ್ಸ (ಕ್ರಿ. ಶ. ೨೦೦) ದಲ್ಲಿ ಬರುವ ಕನ್ನಡ ವಾಕ್ಯಗಳು ಸಂಸ್ಕೃತ ಶಬ್ದಗಳಿಂದ ಕೂಡಿವೆ. ಉದಾ: ಮಧು, ಪಾತ್ರ, ಪಾನಂ, ಮುಂ—. ಇದಲ್ಲದೆ ನಾನು, ನೀನು, ಅವನು, ಅವಳು, ಅದು, ಇವನು, ಇವಳು, ಇದು ಮುಂತಾದ ದೇಶೀಯ ಸರ್ವನಾಮಗಳು ಆಯಾ ಸಂಸ್ಕೃತ ಶಬ್ದಗಳಿಗೆ ಸಂಬಂಧಿಸಿವೆ ಎಂಬುದು ಕೆಳಗಿನ ವಿವೇಚನೆಯಿಂದ ತಿಳಿಯುವದು: ನಾವು ಮೊದಲು ಪ್ರಥಮ ಪುರುಷ ಸರ್ವನಾಮವನ್ನೇ ತೆಗೆದುಕೊಳ್ಳೋಣ. ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ ಕಂಡು ಬರುವ ಪ್ರಥಮ ಪುರುಷ ಸರ್ವನಾಮಗಳು ಇಂತಿವೆ.

ಕನ್ನಡ — ಆಮ್ (ಅನ್) — ನಾಂ (ನಾನ್)ನಾನು — ನಾ—
ಮಲೆಯಾಳಿ — ಞಾನ್ — — —
ತಮಿಳು — ಯಾನ್ — ನಾನ್ — — —
ತುಳು — ಯಾನ್ — — — —
ತೆಲಗು— ಏನ್ — ನೇನು — ಎನೆ — —

ಮೇಲಿನ ಸರ್ವನಾಮಗಳ ಮೂಲರೂಪವು "ಯ್" ಅಥವಾ "ನ್" ದಿಂದ ಒಡಗೂಡಿದ "ಆಮ್ (ಅನ್)" ಎಂದು



† ರೇಫಸ್ಯ ವರ್ತ್ಸ್ಯಮಿತ್ಯೇಕೇ—ಋಗ್ವೇದ ಪ್ರಾತಿಶಾಖ್ಯೆ.

* Grammar of Oldest Kannada Inscriptions (pp. 34)

‡ ಜಿಹ್ವಾಮೂಲಂ ತಾಲು ಚಾಹ ಸ್ಥಾನಂ ಡಕಾರಸ್ಯ ಆಚಾರ್ಯಃ ವೇದಮಿತ್ರಃ (ಋಗ್ವೇದ ಪ್ರಾತಿಶಾಖ್ಯಾ).

× ದ್ವಯೋಶ್ಚಾಸ್ಯ ಸ್ವರಯೋರ್ಮಧ್ಯಮೇತ್ಯ ಸಂಪದ್ಯತೇ ಸಡಕಾರೋ ಳಕಾರಃ. ಇಳಾ, ಸಾಳ್ಹೇತಿ (ಋಗ್ವೇದ ಪ್ರಾತಿಶಾಖ್ಯಾ).

ಹೇಳಬಹುದು. ಕನ್ನಡ ದ್ರಾವಿಡ ಅವ್ (ಅನ್) ಮತ್ತು ಸಂಸ್ಕೃತದ "ಅಹಂ" ಇವುಗಳ ಅರ್ಥವು ಒಂದೇ ಇದ್ದು ಉಚ್ಚಾರದಲ್ಲಿ ಹೋಲಿಕೆ ಇರುವದರಿಂದ ಅವುಗಳಲ್ಲಿ ಸಂಬಂಧವಿರುವದು ಸಹಜ. ಸಂ.—"ಅಹಮ್"> ದ್ರಾ. "ಆಮ್". ಕನ್ನಡದಲ್ಲಿ "ಹ" ಕಾರವು ಲೋಪವಾಗಿ ಹಿಂದಿನ ಸ್ವರವು ದೀರ್ಘವಾದ ಉದಾಹರಣೆಗಳುಂಟು. ಉದಾ: ಸಂ-ಮಹಾಜನ = ಮಾಜನ, ಸಂ-ಮಹಾಲಕ್ಷ್ಮಿ = ಮಾಲಕ್ಷ್ಮಿ ಮುಂ. ಪಾಲೀ ಭಾಷೆಯಲ್ಲಿ ಸಂಸ್ಕೃತ "ಅಹಮ್" ಶಬ್ದವು "ಅಅಮ್" ರೂಪವನ್ನು ತಾಳುತ್ತದೆ. ಮುಂದೆ ಆ "ಅಅಮ್" ರೂಪವೇ ಸಂಧಿಯಾಗಿ "ಆಮ್" ಆಗಿರಬಹುದು.

ಸಂ. ಅಹಮ್ > ಪಾಲಿ ಅಅಮ್ > ದ್ರಾವಿಡ ಆಮ್. ಸಂಸ್ಕೃತದಲ್ಲಿ "ಆಮ್" ಪದವಿದ್ದು ಒಪ್ಪಿಗೆಯನ್ನು ತೋರಿಸುವಾಗ ಉಪಯೋಗಿಸಲಾಗುವದು. ಉದಾ: "ಆಂ ಜ್ಞಾತಂ". ಎರಡನೆಯವರ ಲಕ್ಷ್ಯವನ್ನು ಸೆಳೆಯಲು ಅಂ, ಆ, ಎಂಬ ಉದ್ಗಾರವಾಚಕಗಳನ್ನು ಸಂಸ್ಕೃತದಲ್ಲಿ ಉಪಯೋಗಿಸುವರು. ತನ್ನ ಕಡೆಗೆ ಬೊಟ್ಟು ಮಾಡಿ ತನ್ನನ್ನು ತೋರಿಸಿಕೊಳ್ಳಲು, "ಆಂ" ಎಂದು ಉಪಯೋಗ ಮಾಡಬಹುದು. ತನ್ನ ಎದುರಿಗೆ ಇರುವ ವ್ಯಕ್ತಿಯನ್ನು ತೋರಿಸಿ "ಈಂ" ಎನ್ನಬಹುದು; ಮುಂದೆ ಆ "ಈಮ್" ರೂಪವೇ "ನ್" ದಿಂದ ಕೂಡಿ (ದ್ವಿತೀಯ ಪುರುಷ ಸರ್ವನಾಮ) ಆಯಿತು.

ಈಮ್ > ನೀಮ್ > ನೀನ್ > ನೀನು ಮುಂ.

ಕನ್ನಡ "ಅದು" ಸಂಸ್ಕೃತ "ಅದಸ್" ಇವುಗಳ ಅರ್ಥ ಒಂದೇ ಇದ್ದು ಉಚ್ಚಾರದಲ್ಲಿ ಹೋಲಿಕೆ ಇದೆ. ಆದ್ದರಿಂದ ಅವುಗಳಲ್ಲಿ ಸಂಬಂಧವಿರುವದು. ಕನ್ನಡ "ಅದು" ಶಬ್ದವು ಸಂ. "ಅದಸ್" ಶಬ್ದದಿಂದ ಹುಟ್ಟಿರುವದು ಸಾಧ್ಯ.

ಸಂ. ದೇವಃ > ಪ್ರಾ. ದೇವೊ > ಅಪಭ್ರಂಶ ದೇವು ಆಗುವಂತೆ ಸಂ. ಅದಸ್ > ಪ್ರಾ. ಅದೋ* > ಅಪಭ್ರಂಶ ಅದು* ಹಾಗೂ ಕನ್ನಡ "ಅದು" ತಮಿಳ್ "ಅತು".

ಕನ್ನಡ "ಅದು" ಶಬ್ದದಂತೆ ಅವನು, ಇವನು, ಅವಳು, ಇವಳು, ಇದು ಮೊದಲಾದ ದರ್ಶಕ ಸರ್ವನಾಮಗಳಿಗೆ ಆಯಾ ಸಂಸ್ಕೃತ ದರ್ಶಕ ಸರ್ವನಾಮಗಳ ಸಂಬಂಧವನ್ನು ತೋರಿಸಬಹುದು. ಕನ್ನಡದಲ್ಲಿ ಬರುವ ದರ್ಶಕ ಸರ್ವನಾಮಗಳ ರೂಪಗಳು ಕೆಳಗಿನಂತೆ ಇವೆ:

| | ಪು. ಏಕವಚನ | ಸ್ತ್ರೀ. ಏಕವಚನ | ಉಭಯಲಿಂಗ ಬ. | ನಪು. ಏ. | ನಪು. ಬ. |
|---|---|---|---|---|---|
| ದೂರ ದರ್ಶಕ | | | | | |
| ಪ್ರಾಚೀನ | ಅವ (ಅವ್+ಅ) | ಅವಳ್ (ಅವ್+ಅಳ್) | ಅವರ್ (ಅವ್+ಅರ್) | ಅದು (ಅದ್+ಉ) | ಅವು (ಅವ್+ಉ) |
| ಮಧ್ಯಕಾಲೀನ | ಅವಂ (ಅವ್+ಅಂ) | ,, ,, | ,, ,, | ,, | ,, |
| ನೂತನ | ಅವನು (ಅವ್+ಅನು) | ಅವಳು (ಅವ್+ಅಳು) | ಅವರು (ಅವ್+ಅರು) | ,, | ,, |
| ಸಮೀಪ ದರ್ಶಕ | | | | | |
| ಪ್ರಾಚೀನ | ಇವ (ಇವ್+ಅ) | ಇವಳ್ (ಇವ್+ಅಳ್) | ಇವರ್ (ಇವ್+ಅರ್) | ಇದು (ಇದ್+ಉ) | ಇವು (ಇವ್+ಉ) |
| ಮಧ್ಯಕಾಲೀನ | ಇವಂ (ಇವ್+ಅಂ) | ,, ,, | ,, ,, | ,, | ,, |
| ನೂತನ | ಇವನು (ಇವ್+ಅನು) | ಇವಳು (ಇವ್+ಅಳು) | ಇವರು (ಇವ್+ಅರು) | ,, | ,, |



ದೂರದರ್ಶಕ ಸರ್ವನಾಮದ ಮೂಲರೂಪ (ಏಕವಚನ, ಬಹುವಚನ) "ಅವ್" ಹಾಗೂ ನಪುಂಸಕಲಿಂಗ ಏಕವಚನ "ಅದ್" ಎಂದು ಸ್ಪಷ್ಟವಾಗಿ ಕಾಣುವದು. ಕನ್ನಡ "ಅವ್" ರೂಪಗಳಲ್ಲಿರುವ "ವ್" ಕಾರವು ಕಿಟ್ಟೆಲ್ ಸಾಹೇಬರು ಹೇಳುವಂತೆ ಸಂಧಿಯಿಂದ ಬಂದುದಲ್ಲ. ತೆಲಗು, ತಮಿಳು ರೂಪಗಳಲ್ಲಿಯೂ ಅದನ್ನು ಕಾಣಬಹುದು. ಉದಾ: ತಮಿಳು— ಅವ್+ಯಾನ್ಯೆ ಹಾಗೂ ಇವ್+ಅಮ್. ತೆಲಗಿನಲ್ಲಿ "ವ್" ಇದು ಪ್ರಥಮಾಕ್ಷರವಾಗಿ ಬರುವದು. ಉದಾ: ತೆಲಗು ವಂಡು, ವಿಂಡು. ತುಳುವಿನಲ್ಲಿ "ವ್" ಕಾರವು "ಮ್" ಕಾರ ರೂಪದಲ್ಲಿ ಕಾಣುವದು. ಉದಾ: ತುಳು ಮೋಕ್, ಮೋಲು, ಮೋಕುಳು. ಈ ಸಂದರ್ಭದಲ್ಲಿ ಸಂಸ್ಕೃತ ಕನ್ನಡ "ಅಮುಕ" (Somebody) ಶಬ್ದವನ್ನು ಪರಿಶೀಲಿಸಬಹುದು. ಕೆಲವು ದ್ರಾವಿಡ ದರ್ಶಕ ಸರ್ವನಾಮಗಳಲ್ಲಿ "ವ್" ಕಾರವು ಮ್ ಕಾರಕ್ಕೆ ಸಂಬಂಧಿಸಿದೆಯೆಂಬುದು ತುಳು ಉದಾಹರಣೆಯಿಂದ ಸ್ಪಷ್ಟವಾಗುವದು. ಕನ್ನಡ ಅವ್ < ಅಮ್.

ಈ ಸಂದರ್ಭದಲ್ಲಿ ಪ್ರಾಕೃತ ಅಪಭ್ರಂಶ ದರ್ಶಕ ಸರ್ವನಾಮ "ಆದಸ್" ದ ಮೂಲರೂಪವು "ಅಮ್" ಇರುವದನ್ನು ಗಮನಿಸಬಹುದು. "ಮುಸ್ಯಾದೌ" (ಹೇಮಚಂದ್ರ, ಅಧ್ಯಾಯ ೩, ಸೂತ್ರ ೫೬) ಎಂಬುದರಿಂದ "ಅದಸ್" ಶಬ್ದದ ಮೂಲರೂಪವು ಪ್ರಾಕೃತದಲ್ಲಿ "ಅಮ್" ಇರುವದೆಂದು ತಿಳಿದುಬರುವದು. ಸಂಸ್ಕೃತದಲ್ಲಿಯೂ "ಅಮ್" ಎಂಬುದೇ ದರ್ಶಕ ಸರ್ವನಾಮ—"ಅದಸ್" ಶಬ್ದದ ಪುಲ್ಲಿಂಗ ಸ್ತ್ರೀಲಿಂಗ ಪ್ರಥಮಾ ಏಕವಚನ "ಅಸೌ" ಹಾಗೂ ನಪುಂಸಕ ಪ್ರಥಮಾ ಏಕವಚನ "ಅದಃ" ಇವುಗಳ ಹೊರತಾಗಿ ಬಹುತರವಾಗಿ ಬರುವ ಸಾಮಾನ್ಯ ಮೂಲರೂಪ (Standard base) ಎಂದು ಹೇಳಿದರೆ ತಪ್ಪಾಗದು. "ಅದಸ್" ಶಬ್ದದ ಸಂಸ್ಕೃತ ರೂಪಗಳನ್ನು ಪರೀಕ್ಷಿಸಿರಿ :

| ಪುಲ್ಲಿಂಗ | | | ಸ್ತ್ರೀಲಿಂಗ | | |
|---|---|---|---|---|---|
| ಅಸೌ | ಅಮೂ | ಅಮೀ | ಅಸೌ | ಅಮೂ | ಅಮೀ |

ಪುಲ್ಲಿಂಗ　　　　　　　ಸ್ತ್ರೀಲಿಂಗ

ಅಮುಂ　ಅಮೂ　ಅಮೂನ್　　ಅಮುಂ　ಅಮೂ　ಅಮೂಃ

ಅಮುನಾ.　ಇತ್ಯಾದಿ　　　　ಅಮುಯಾ　ಇತ್ಯಾದಿ.

ನಪುಂಸಕಲಿಂಗ

ಅದಃ　ಅಮುನಿ　ಅಮೂನಿ

ಅಮುನಾ　ಇತ್ಯಾದಿ.

ಕನ್ನಡ, ದ್ರಾವಿಡ ದರ್ಶಕ ಸರ್ವನಾಮ ಮೂಲರೂಪ "ಅವ್ (ಅನ್)" ಹಾಗೂ ಸಂಸ್ಕೃತ ಪ್ರಾಕೃತ ದರ್ಶಕ ಸರ್ವನಾಮ "ಅದಸ್" ಇದರ ಮೂಲರೂಪವಾದ "ಅಮ್" ಇವುಗಳಲ್ಲಿ ಉಚ್ಚಾರದಲ್ಲಿಯೂ ಅರ್ಥದಲ್ಲಿಯೂ ತಾದಾತ್ಮ್ಯವಿದೆಯಾದ್ದರಿಂದ ದ್ರಾವಿಡ ದರ್ಶಕ ಸರ್ವನಾಮಗಳು ಸಂಸ್ಕೃತಕ್ಕೆ ಸಂಬಂಧಪಟ್ಟವುಗಳೆಂದು ನಿರ್ವಿವಾದವಾಗಿ ಹೇಳಬಹುದು. ಸಂಸ್ಕೃತ ದರ್ಶಕ ಸರ್ವನಾಮವಾದ "ಅದಸ್" ಶಬ್ದದಲ್ಲಿ "ಅದ್" ಮೂಲರೂಪವಿದ್ದು "ಅದ್" = ಅ (that) + "ದ್" < "ತ್" (it) meaning that—it ಎಂಬುದರಲ್ಲಿಯ "ತ್" (it) ಪುರುಷವಾಚಕ ಸರ್ವನಾಮವು ಎಲ್ಲ ಆರ್ಯ ಭಾಷೆಗಳಲ್ಲಿ ಮಾತ್ರ ಕಂಡುಬರುವದರಿಂದ ಅದು ಆರ್ಯ ಭಾಷಾವರ್ಗಕ್ಕೆ ಸೇರಿದ್ದೆಂದು ಎಲ್ಲರಿಗೂ ವಿದಿತವಾದದ್ದು. "ಮೂಲರೂಪವಾದ "ಅದ್" ಇದು "ಅಸ್" (ಸಂ. ಅಸೌ) ಹಾಗೂ ಅಮ್" (ಸಂ. ಅಮೂ) ರೂಪಗಳನ್ನು ತಾಳುವದು.

ಅದ್—ತ್ > ಅಸ್ (ಅಸೌ)—ಸಂಸ್ಕೃತದಲ್ಲಿ ತ್ ಕಾರವು ಸ ಕಾರವಾಗುವದು. ಉದಾ :—

ಸಃ, ತೌ, ತೇ, (ತತ್ ಶಬ್ದದ ಪ್ರಥಮೆಯ ರೂಪಗಳು.)

ಅದ್-ತ್ > ಅಮ್; ಇಲ್ಲಿ-ತ್ > ನ್ ವಾಗಿ ಮುಂದೆ ನ್ > ಮ್ ವಾಗಿರುತ್ತದೆ. ಪ್ರಾಕೃತದಲ್ಲಿ "ತ್"ಕಾರವು "ನ್"ಕಾರವಾದದ್ದನ್ನು ಕಾಣಬಹುದು. ಉದಾ :—

ನಃ, ನೌ, ನೇ, (ತತ್ ಶಬ್ದದ ಪ್ರಾಕೃತದಲ್ಲಿಯ ಪ್ರಥಮಾ ರೂಪಗಳು.)

ಸಂಸ್ಕೃತದಲ್ಲಿಯೂ "ತ್"ಕಾರವು ವೈಕಲ್ಪಿಕವಾಗಿ "ನ್"ಕಾರವಾಗುವದು. ಉದಾ :— ಏತಾನ್, ಏನಾನ್ ಏತೇನ ಏನೇನ ಇತ್ಯಾದಿ. ದರ್ಶಕ ಸರ್ವನಾಮ "ಅದ್" ಇದರಿಂದ "ಅನ್" ಹಾಗೂ "ಅಮ್" ಆಗಿರುವದು. ವೇದಗಳಲ್ಲಿ "ಅಮ" ಹಾಗೂ "ಅವ" ದರ್ಶಕ ಸರ್ವನಾಮುಗಳ ರೂಪಗಳ ಪ್ರಯೋಗಗಳನ್ನು ತೋರಿಸಬಹುದು. "ಅಮೋಽಹಮಸ್ಮಿ" ಎಂಬ ಅಥರ್ವ ವೇದವಾಕ್ಯದಲ್ಲಿ "ಅಮ್" ಪ್ರಯೋಗವಿದೆ. ಋಗ್ವೇದದಲ್ಲಿ "ಅವ್" ಶಬ್ದವನ್ನು "ವಾಮ್" ಶಬ್ದದ ಕೂಡ ಪ್ರಯೋಗಿಸಿದ್ದನ್ನು ನೋಡಬಹುದು. ಸಂ. "ಅಮ್" ರೂಪವೇ "ಅವ್" ರೂಪವು ಆಗಿ ಕನ್ನಡ, ದ್ರಾವಿಡ ದರ್ಶಕ ಸರ್ವನಾಮದ ಮೂಲರೂಪವಾಗಿ ಸ್ವೀಕರಿಸಲ್ಪಟ್ಟದೆ ಎಂಬುದು ಸ್ಪಷ್ಟವಾಗುವದು. ಕನ್ನಡ ದರ್ಶಕ ಸರ್ವನಾಮುಗಳ ರೂಪಗಳನ್ನು ಪೃಥಕ್ಕರಿಸಿ ಅವುಗಳ ಅರ್ಥವನ್ನು ಕೆಳಗಿನಂತೆ ವಿಶದಪಡಿಸಬಹುದು:

ಅವನ್ = ಅ + ವ + ನ್ — that — it — he ಪುಲ್ಲಿಂಗವಾಚಕ ದರ್ಶಕ ಸರ್ವನಾಮ.

ಅವಳ್ = ಅ + ವ + ಳ್ — that — it — she ಸ್ತ್ರೀಲಿಂಗ ವಾಚಕ ದರ್ಶಕ ಸರ್ವನಾಮ.

ಅದು = ಅ + ದ್ + ಉ ( < ಓ < ಸ್ < ತ್ ) that — it — it ನಪುಂಸಕಲಿಂಗ ವಾಚಕ ದರ್ಶಕ ಸರ್ವನಾಮ.

ಇಲ್ಲಿ ಲಿಂಗ ಪ್ರತ್ಯಯುಗಳಾದ ನ್ ( ಪು. ), ಳ್ ( ಸ್ತ್ರೀ ), ಉ ( < ಓ < ಸ್ < ತ್ ) ( ನ. ) ಇವುಗಳು ಸಂಸ್ಕೃತದ ಪುರುಷವಾಚಕ ಸರ್ವನಾಮದ ಮೂಲರೂಪವಾದ ತ್ ( it ) ಇದರ ರೂಪಾಂತರಗಳೆಂದು ಹೇಳಬಹುದು.

ಸಂ. ತ್ > ಸ್ — ( ಸಂಸ್ಕೃತ ಪ್ರಾಕೃತದಲ್ಲಿ ಪುಲ್ಲಿಂಗವಾಚಕ ).

,, ತ್ > ನ್ > ಮ್ ( ಸಂಸ್ಕೃತ ಪ್ರಾಕೃತ ದ್ರಾವಿಡ ಭಾಷೆಗಳಲ್ಲಿ ಪುಲ್ಲಿಂಗವಾಚಕ ).

,, ತ್ > ಲ್ > ಳ್ — (ದ್ರಾವಿಡ ಭಾಷೆಗಳಲ್ಲಿ ಸ್ತ್ರೀಲಿಂಗ ವಾಚಕ).

( ತ್ > ಲ್ > ಳ್ ರೂಪಾಂತರವು ಸ್ವಾಭಾವಿಕವಾದದ್ದು—"ಇತುಲಸಾನಾಂ ದಂತಾಃ" ಮತ್ತು "ಲಳಯೋರ್ನ ಭೇದಃ").

ಸಂಸ್ಕೃತ ತ್ > ಸ್ > ಓ > ಉ — (ದ್ರಾವಿಡ ಭಾಷೆಗಳಲ್ಲಿ ನಪುಂಸಕಲಿಂಗ ವಾಚಕ).

ಈ ಸಂದರ್ಭದಲ್ಲಿ ದರ್ಶಕ ಸರ್ವನಾಮುಗಳ ಮೂಲ ರೂಪಗಳು 'ಅದ್' ಅಥವಾ 'ದ್', 'ತ್', ಗಳು ಪ್ರತ್ಯಯುಗಳಾಗಿ ಉಪಯೋಗಿಸಲ್ಪಡುವವು ಎಂಬುದನ್ನು ಗಮನಿಸಬೇಕು. ( ಮುಂದೆ ನೋಡಿರಿ ).

ಇದರಂತೆ ಸಮೀಪದರ್ಶಕ ಸರ್ವನಾಮದ ಮೂಲರೂಪವಾದ "ಇವ್", ಇದು, ಸಂಸ್ಕೃತ ಸಮೀಪ ದರ್ಶಕ ಸರ್ವನಾಮವಾದ "ಇದಂ" ಶಬ್ದದ ಮೂಲರೂಪವಾದ "ಇಮ್" ದಿಂದಲೂ "ಇದ್" ರೂಪವು "ಇದಂ" ಶಬ್ದದಿಂದಲೂ ಹುಟ್ಟಿರುವವು. "ಇವು" ಎಂಬ ಬಹುವಚನ ರೂಪವು ಪ್ರಾಕೃತದ "ಇಮು" ರೂಪದ ಮುಖಾಂತರವಾಗಿ ಕನ್ನಡಕ್ಕೆ ಬಂದಿರುವದು. ಇದರಂತೆ ಯಾವ, ಯಾರು, ಯಾವದು ಈ ರೂಪಗಳು ಸಂಸ್ಕೃತದ "ಯತ್" ಶಬ್ದಕ್ಕೆ ಸಂಬಂಧಿಸಿದ್ದನ್ನು ಕಂಡುಕೊಳ್ಳಬಹುದು.

## ೫. ಶಬ್ದರಚನೆ

ದ್ರಾವಿಡ ಭಾಷೆಗಳು ಮೂಲತಃ ಸಮುಚ್ಚಾಯಿಕ ( Agglutinative ) ಭಾಷೆಗಳಾದ್ದರಿಂದ ವಿಭಕ್ತಿ ಪ್ರತ್ಯಯುಗಳಾಗಲಿ ಪುರುಷ ಹಾಗೂ ಲಿಂಗವಾಚಕ ಪ್ರತ್ಯಯವಾಗಲಿ ಇರಲಿಲ್ಲವೆಂದು ಕಾಲ್ಡವೆಲ್ ಸಾಹೇಬರು ಹೇಳುವದು ಯಥಾರ್ಥವಾದುದು. ದ್ರಾವಿಡ ಭಾಷೆಗಳು

ಈಗಿರುವಂತೆ ಸಂಸ್ಕೃತದ ಹಾಗೆ ಪ್ರತ್ಯಾಯಕ (Inflexional) ಭಾಷೆ ಯಾದುದು ಎಂತು? ಎಂಬ ಪ್ರಶ್ನೆ ಉದ್ಭವಿಸುವದು. ಸಂಸ್ಕೃತದ ಪ್ರಭಾವದಿಂದೆಂದು ಧಾರಾಳವಾಗಿ ಹೇಳಬಹುದು. ದ್ರಾವಿಡ ಭಾಷೆಗಳು ವಂತ, ಮಂತ, ಇಕ ಮುಂತಾದ ಸಂಸ್ಕೃತದ ತದ್ಧಿತ ಪ್ರತ್ಯಯಗಳನ್ನು ಸ್ವೀಕರಿಸಿ ತಮ್ಮ ದ್ರಾವಿಡ ಶಬ್ದ ಸಾಮಗ್ರಿಯನ್ನು ಬೆಳೆಸಿಕೊಂಡದ್ದುಂಟು. ಉದಾ: ಕನ್ನಡ, ಮಡಿವಂತ, ಪೂವಡಿಗ, ಮಾಡಣಿಗ ಇತ್ಯಾದಿ. ಅದ ರಂತೆ ಸಂಸ್ಕೃತ ಪ್ರತ್ಯಯಗಳನ್ನು ಉಪಯೋಗಿಸಿ (ಅ) ವಿಭಕ್ತಿ ರೂಪ (Declensions) ಗಳನ್ನು (ಬ) ಕ್ರಿಯಾಪದ ರೂಪ (Conjugations) ಗಳನ್ನು ಬೆಳೆಸಿಕೊಂಡಿರುವವು. ಮೊದಲು ನಾವು ವಿಭಕ್ತಿ ಪ್ರತ್ಯಯ ಗಳನ್ನು ಕುರಿತು ಚರ್ಚಿಸೋಣ:

(i) ಏಕವಚನ ವಿಭಕ್ತಿ ಪ್ರತ್ಯಯಗಳು:

| ವಿಭಕ್ತಿ | ಸಂಸ್ಕೃತ | ಪ್ರಾಕೃತ | ದ್ರಾವಿಡ ಕನ್ನಡ | ದ್ರಾವಿಡ ತಮಿಳು |
|---|---|---|---|---|
| ಪ್ರಥಮಾ | ಸ್—ನ್ | ಮ್ | ನ್—ಮ್ | ನ್—ಮ್ |
| ದ್ವಿತೀಯಾ | ಅಮ್ | ಅಮ್ | ಅಮ್ | |
| ತೃತೀಯಾ | ಆ—ಇನ | ಇನ—ಇನ್, ಅಪಭ್ರಂಶ ಇಂ | ಇಂ—ಇಂದ | ಆಲ್ |
| ಚತುರ್ಥಿ | ಏ (ಆಯ) | (ಪಾಲಿ) ಆಯ—ಆಯೇ (ಪ್ರಾಕೃತ) ಅಕೆ—ಕೆ | ಅಕೆ—ಅಕ್ಕೆ—ಗೆ | ಅಗ—ಇಕ್ಕಾಗ |
| ಪಂಚಮಿ | ಅಸ್—ಅತ್ | ಅತ್ತೋ—ಅತ್ತೇ | ಅತ್ತ(ಣ)+ಇಂದ | ಇಲಿಂದು—ಇಲಿಂಡ್ರು |
| ಷಷ್ಠೀ | ಅಸ್ | ಅ | ಅ | |
| ಸಪ್ತಮಿ | ಇ—ಏ | ಇ—ಏ | ಇ—ಏ | ಇಲ್ |

ಟೀಪು:— ಸಂಸ್ಕೃತ, ಪ್ರಾಕೃತ, ಅಪಭ್ರಂಶ ಎಂಬಿವು ಒಂದೇ ಭಾಷೆಯ—ಮಾತನಾಡುವ ಜನರ ಸಂಸ್ಕೃತಿಯ ಮೂಲಕವಾಗಿ ಉಂಟಾಗಿ ರುವ—ರೂಪಾಂತರಗಳೆಂದೂ ಸಮಕಾಲೀನಗಳೆಂದೂ ಪ್ರಾಕೃತ ಶಿಲಾಶಾಸನ ಗಳಲ್ಲಿ ದೊರೆಯುವ ಮೂರು ತರಹದ ರೂಪಗಳಿಂದ ನಿರ್ಣಯಿಸಬಹುದು. ಆದರೆ ಅವು ಒಂದರ ತರುವಾಯ ಒಂದು ಗ್ರಂಥಸ್ಥವಾಗಿ ಬಂದವು.

ಸಂಸ್ಕೃತ, ಪ್ರಾಕೃತ ಪ್ರತ್ಯಯಗಳಿಗೂ ದ್ರಾವಿಡ ಪ್ರತ್ಯಯಗಳಿಗೂ ಉಚ್ಚಾರ ಸಾಮ್ಯವಿದ್ದು ಅದೇ ಅರ್ಥದಲ್ಲಿ ಉಪಯೋಗಿಸಲ್ಪಟ್ಟವೆಯಾದ್ದ ರಿಂದ ಅವುಗಳಲ್ಲಿ ಸಂಬಂಧವಿರುವದು ಸಹಜ. ಪ್ರತ್ಯಯಗಳು ದರ್ಶಕ ಸರ್ವನಾಮಗಳ ಮೂಲರೂಪಗಳೆಂದು ಮತ್ತೆ ಬೇರೆ ಹೇಳಬೇಕಾಗಿಲ್ಲ.

ಟೀಪು:— i) ದ್ರಾವಿಡ ಭಾಷೆಗಳಲ್ಲಿ ಪ್ರಾಕೃತದಂತೆ ಏಕವಚನ ಬಹು ವಚನಗಳು ಮಾತ್ರ ಇವೆ. ii) ಕನ್ನಡ ದ್ರಾವಿಡ ಭಾಷೆಗಳಲ್ಲಿ ತೃತೀಯೆಯಿಂದ ಸಪ್ತಮೀ ವಿಭಕ್ತಿಗಳವರೆಗೆ ಅಪಭ್ರಂಶ ಭಾಷೆಗಳಲ್ಲಿಯಂತೆ ಷಷ್ಠೀ ವಿಭಕ್ತಿ ರೂಪವನ್ನು ಮೂಲ ರೂಪವಾಗಿ ಗ್ರಹಿಸಿ ಪ್ರತ್ಯಯವನ್ನು ಹಚ್ಚುವ ಪರಿಪಾಠ ವುಂಟು. ಉದಾ:— ಕನ್ನಡ: ಮರದ+ಇಂ=ಮರದಿಂ. ರಾಮನ+ ಇಗೆ=ರಾಮನಿಗೆ.

(ಅ) ಬಹುವಚನ ಪ್ರತ್ಯಯಗಳು:—

(*a*) ಅಸ್=ಅರ್:— ದ್ರಾವಿಡ ಭಾಷೆಗಳಲ್ಲಿ ಪ್ರಾಕೃತ ಅಪಭ್ರಂಶ ಭಾಷೆಗಳಂತೆ, ಸಂಸ್ಕೃತದಲ್ಲಿಯ ಹಾಗೆ, ಬೇರೆ ಬಹುವಚನ ವಿಭಕ್ತಿ ಪ್ರತ್ಯಯಗಳಿರದೆ ಮೂಲ ರೂಪಕ್ಕೆ "ಅರ್" "ಗಳ್" ಅಂಟಿಸಿ ಏಕವಚನ ಪ್ರತ್ಯಯಗಳನ್ನೇ ಹಚ್ಚುವರು. ಸಂಸ್ಕೃತ ಬಹುವಚನ ಪ್ರತ್ಯಯ "ಅಸ್" ಇದು "ಅರ್" ಆಗುವದು. ಸಂಸ್ಕೃತ 'ಸ'ಕಾರವು 'ರ'ಕಾರವಾಗುವ ಅನೇಕ ಉದಾಹರಣೆಗಳನ್ನು ಕೊಡಬಹುದು. ಪುನಸ್ (>ಪುನಃ)+ಅಪಿ=ಪುನರಪಿ ಮುಂ. ಪ್ರಾಕೃತದಲ್ಲಿ ಸಂಸ್ಕೃತ "ಅಸ್" ಇದು "ಆ" ಆಗುವದು. (ಉದಾ:— ಸಂಸ್ಕೃತ: ದೇವಾಃ=ಪ್ರಾಕೃತಃ ದೇವಾ) ಮತ್ತು ಅದು "ಅರ್" ರೂಪವನ್ನು ಹೊಂದಬಹುದು. — ಸಂಸ್ಕೃತ "ಅಸ್" > ಅವೆಸ್ತಾ "ಅಝ್" ಅಥವಾ ಸಂಸ್ಕೃತ 'ಅರ್' ಮುಂದೆ "ಅಝ್" > ಆ. ಸಂಸ್ಕೃತ ಸಕಾರವು ಅವೆಸ್ತಾ ಭಾಷೆಯಲ್ಲಿ ಝ್ ಕಾರವಾಗುವದೆಂದೂ ಮತ್ತು ಅವೆಸ್ತೆಯ 'ಝ್' ಕಾರಕ್ಕೆ ಸಂಸ್ಕೃತ 'ರ'ಕಾರವು ಸಮವೆಂದೂ ಮ್ಯಾಕ್ಡೋನೆಲ್ ಸಾಹೇಬರು ತಮ್ಮ ವೈದಿಕ ವ್ಯಾಕರಣ (ಪು. ೭೦) ದಲ್ಲಿ ಹೇಳಿದ್ದಾರೆ. ಉದಾ:— ಅವೆಸ್ತಾ, ದುಝುತಾ=ಸಂಸ್ಕೃತ ದುರಿತಾ. ಮೇಲಿನ ವಿವೇಚನೆಯಿಂದ "ಅರ್" — ಬಹುವಚನ ಪ್ರತ್ಯಯವು, — ಅವೆಸ್ತಾ ಸಮಕಾಲೀನವೂ ಪ್ರಾಕೃತ ಬಹುವಚನ ಪ್ರತ್ಯಯ "ಆ" ಇದಕ್ಕಿಂತ ಪುರಾತನವಾದದ್ದೂ ಇದ್ದು, ಪ್ರಾಕೃತದಲ್ಲಿ "ಆ" ಪ್ರತ್ಯಯವು ಪ್ರಬಲವಾದ್ದರಿಂದ ಅದು ಲೋಪವಾಗಿರಬಹುದು. ಮತ್ತು ದ್ರಾವಿಡ ಭಾಷೆಗಳಲ್ಲಿ ಮಾತ್ರ ಉಳಿ ದಿರಬಹುದು. ಆರ್ಯ ಭಾಷೆಗಳಲ್ಲಿ "ಅರ್" ಇದರ ಅವಶೇಷಗಳನ್ನು ಕಾಣಬಹುದು. ಉದಾ:— ಬಂಗಾಲಿ—ಪಯರ್=ಪದ > ಪಯ+ ಅರ್— a verse of two lines.

(*b*) ಸಂ. ಅಸಸ್ > ಅಕಳ್—ಗಳ್:—

ಕನ್ನಡ ದ್ರಾವಿಡ—ಅರ್ಕಳ್;—ಅಕಳ್; (-ಕಳ್) ಎಂಬ ಡಬಲ್ ಪ್ರತ್ಯಯಗಳು ಅರ್ಕಳ್=(ಅರ್+ಕಳ್) ವೈದಿಕ ವಾಙ್ಮಯದಲ್ಲಿ ಬರುವ ಅಸಸ್ (ದೇವಾಸಃ) ಎಂಬ-ಡಬಲ್ ಪ್ರತ್ಯಯ (ಅಸ್+ಅಸ್)ಕ್ಕೆ ಸಂಬಂಧಿ ಸಿನೆಯೆಂದು ಕೆಳಗಿನ ಪೃಥಕ್ಕರಣದಿಂದ ಮನಗಾಣಬಹುದು:

ಸಂ:— ಅಸಸ್ (ಅಸ್+ಅಸ್) > ಅಹಸ್ (ಸ > ಹ—ರೂಪಾಂ ತರ) > ಅಕರ್ (ಹ > ಕ ರೂಪಾಂತರ—ದ್ರಾವಿಡ ಭಾಷೆಗಳಲ್ಲಿ 'ಹ'ಕಾರ ವಿಲ್ಲದ್ದರಿಂದ 'ಕ'ಕಾರ ಬರುವದು.) > ಅಕಲ್. (ರಯಲೋರ್ನ ಭೇದಃ)> ಕನ್ನಡ ಅಕಳ್ > ಕನ್ನಡ ದ್ರಾವಿಡ ಕಳ್.

ಆರ್ಯಭಾಷೆಯಾದ ಪಾಲಿಯಲ್ಲಿಯೂ "ಗಳ್" (ಪುಪ್ಪಗಳ್. ಮಾತ್ರಾ ಗಳ್.=ಮಾತ್ರಾಸಮೂಹಃ), ಪ್ರಾಕೃತದಲ್ಲಿಯೂ "ಗಳ್" (ಬಿಸಗಳ್-ಮಾ ಅಗಳ್), ಆರ್ಯಭಾಷಾ ವರ್ಗಕ್ಕೆ ಸೇರಿದ ಬಂಗಾಲಿ, ಓರಿಯಾಗಳಲ್ಲಿಯೂ ಗುಳ, ಗುಳಿ ಎಂದು ಅಕಳ್—ಕಳ್—(< ಅಸಸ್)ದ ಅವಶೇಷಗಳನ್ನು ನೋಡಬಹುದು.

(ಬ) ಕ್ರಿಯಾಪದ ರೂಪಗಳ ಪ್ರತ್ಯಯಗಳು:—

| ಪುರುಷ | ಸಂ. | ಪ್ರಾ. | ದ್ರಾವಿಡ ಕನ್ನಡ | ದ್ರಾವಿಡ ತಮಿಳು |
|---|---|---|---|---|
| ಪ್ರಥಮ | ಮಿ—ಏಮಿ | ಏಮಿ | ಏಂ. ಎ. | ಏನ್ |
| ದ್ವಿತೀಯಾ | ಸಿ—ಏಸಿ | ಏಸಿ ಅಪಭ್ರಂಶ-ಇ. | ಇ-ಐ (ಅಯ್) | ಆಯ್ |
| ತೃತೀಯಾ-ಪು- | ಅನ್ (ಕೃತವಾನ್.) | ಅಂ | ಅನ್-ಅಮ್ | ಆನ್ |
| ಸ್ತ್ರೀ- | ಅಳ್ | ಆಳ್ | ಅಳ್ | ಆಳ್ |
| ನಪುಂ:— | ಅತ್-(ಕೃತವತ್) | — | ಅದು | ಅತು |

ಟೀಪು :— i) ದ್ರಾವಿಡ ಭಾಷೆಗಳಲ್ಲಿ ಪ್ರಾಕೃತ ಭಾಷೆಗಳಂತೆ ಧಾತು ಸಾಧಿತ ಕಾಲವಾಚಕ ವಿಶೇಷಣಗಳನ್ನು ತೆಗೆದುಕೊಂಡು ಅವುಗಳಿಗೆ ಪುರುಷ ವಾಚಕ ಚಿನ್ಹಗಳನ್ನು ಹಚ್ಚಿ ಕ್ರಿಯಾಪದ ರೂಪಗಳನ್ನು ತಯಾರಿಸುವರು. ಉದಾ :— ಪ್ರಾಕೃತ: — ಕರಿದೇಮಿ = ಕರಿದ+ಏಮಿ: — Having-done—I = I did. ಪ್ರಹಿತೇಸಿ = ಪ್ರಹಿತ+ಏಸಿ ಹೋಲಿಸಿ ನೋಡಿರಿ. ಕನ್ನಡ :— ಗೈದೇಂ = ಗೈದ್ದು + ಏಂ = Having done—I = I did.

(ii) ಎಲ್ಲ ಕಾಲಗಳಲ್ಲಿಯೂ ಮತ್ತು ಬಹುವಚನಗಳಲ್ಲಿಯೂ ದ್ರಾವಿಡ ಭಾಷೆಗಳಲ್ಲಿ ಏಕವಚನ ಪ್ರತ್ಯಯಗಳನ್ನು ಹಚ್ಚುವರು. ಪುರುಷ ವಾಚಕ ಸರ್ವನಾಮುಗಳ ರೂಪ [ಸಂ. ಮಿ (I) ಕನ್ನಡ ಏಂ (I) ಮುಂತಾದ] ಗಳನ್ನು ಪ್ರತ್ಯಯಗಳೆಂದು ಉಪಯೋಗಿಸುವರು. ಪ್ರಾಕೃತದಲ್ಲಿ 'ಮಿ (ಅಹಮ್) ಎಂಬ ಸ್ವತಂತ್ರನಾದ ರೂಪವೇ ಇದೆ.

ಪ್ರಥಮ ಪುರುಷ:- ಸಂ. ಮಿ (I) ಕನ್ನಡ ಏಂ (I) :-

ಕನ್ನಡ ಏಂ ಎ ಪ್ರತ್ಯಯಗಳು ಸಂ. ಪ್ರಾ. (ಏ) ಮಿ (ಸಂ. जहेमि) ಎಂಬುದಕ್ಕೆ ಅರ್ಥದಲ್ಲಿ ತಾದಾತ್ಮ್ಯ, ಉಚ್ಚಾರದಲ್ಲಿ ಸಾದೃಶ್ಯವಿರೋಣದರಿಂದ ಅವುಗಳಲ್ಲಿ ಸಂಬಂಧವಿರುವದು ಸ್ವಾಭಾವಿಕ. ಸಂ. ಪ್ರಾ. ಪ್ರತ್ಯಯ ಏಮಿ ಇದರಲ್ಲಿಯ ಇ ಕಾರವು ಕರಗಿಹೋಗಿ ಕನ್ನಡ ಏಂ ರೂಪವಾಗಿದೆ. ಮುಂದೆ ಅದು ಕನ್ನಡ "ಎ" ರೂಪವಾಗಿದೆ. ಪ್ರತ್ಯಯದ ತುದಿಯು ಸವೆದು ಹೋಗುವದು ಸಹಜ. ಸಂ. ಮಿ ಇದರಲ್ಲಿಯ ಇ ಕಾರವು ಸವೆದು ಪ್ರಾಕೃತ ದಲ್ಲಿ "ಮ್" ಆದದ್ದನ್ನು ನೋಡಬಹುದು.

ಸಂ. ಭವಿಷ್ಯಾಮಿ > ಪ್ರಾಕೃತ ಭವಿಸ್ಸಂ—ಭವಿಸಂ
ಸಂ. ಕರಿಷ್ಯಾಮಿ > ,, ಕರಿಸ್ಸಂ—ಕರಿಸಂ

ಏಮ್ ರೂಪವು ತಮಿಳಿನಲ್ಲಿ ಮ್>ನ್ ರೂಪಾಂತರವಾಗಿ "ಏನ್" ಆಗಿದೆ.

ದ್ವಿತೀಯ ಪುರುಷ:- ಸಿ>ಹಿ>ಇ (you).

ಕನ್ನಡ "ಇ" ಪ್ರತ್ಯಯವು ಸಂಸ್ಕೃತ ಸಿ>ಹಿ ಪ್ರತ್ಯಯಗಳಿಗೆ ಸಂಬಂಧಿಸಿದೆ. ಸಂಸ್ಕೃತ ಸಿ>ಹಿ ಅಪಭ್ರಂಶದಲ್ಲಿ 'ಇ' ರೂಪವನ್ನು ತಾಳುವದೆಂದು ಹೇಮಚಂದ್ರನು ತನ್ನ ವ್ಯಾಕರಣ (ಅಧ್ಯಾಯ ೪, ಸೂತ್ರ ೩೮೭) ದಲ್ಲಿ ಹೇಳಿದ್ದಾನೆ. ಕನ್ನಡ ಐ (ಅಯ್) ತಮಿಳ ಅಯ್ ಪ್ರತ್ಯಯಗಳು ಸಂ. 'ಏಸಿ' 'ಏಹಿ' (ಸಂ. जहेसि) ಇದರ ರೂಪಾಂತರಗಳೆಂದು ಹೇಳಬಹುದು. ಸಂ. ಏಸಿ, ಏಹಿ ಇದು ಮರಾಠಿಯಲ್ಲಿ ಐ ರೂಪವನ್ನು ತಾಳುತ್ತದೆ. ಉದಾ: ಜಾಣೈ (ಜಾಣ+ಐ) ಹೋಲಿಸಿ ನೋಡಿರಿ. ಕನ್ನಡ ಕೇಳ್ದೈ = ಕೇಳ್ದ + ಐ. ಮರಾಠಿ ಜಾಣೈ ಇದು ಸಂ. ಜಾನಾಹಿ > ಜಾಣಾಹಿ > ಜಾಣೇಹಿ > ಜಾಣೇಇ ಮುಖಾಂತರವಾಗಿ ಬಂದಿದೆ ಎಂದು ಡಾ. ಗುಣೆ ಅವರು ತಮ್ಮ ಭಾಷಾ ಶಾಸ್ತ್ರದ ಪ್ರಸ್ತಾವನೆಯಲ್ಲಿ ಹೇಳಿರುವರು.

ತೃತೀಯ ಪುರುಷ:- ಪುಲ್ಲಿಂಗ ಅನ್ > ಅವ್ (that, he).

ಕನ್ನಡ ದ್ರಾವಿಡ ನ್ (he) ಕಾರಕ್ಕೂ ಹಾಗೂ ಸಂ. ನ್ (he) ಕಾರಕ್ಕೂ ಉಚ್ಚಾರದಲ್ಲಿಯೂ ಅರ್ಥದಲ್ಲಿಯೂ ತಾದಾತ್ಮ್ಯವಿರುವದರಿಂದ ಅವು ಒಂದೇ ಎಂದು ಮೇಲೆ ಹೇಳಿದ್ದೇವೆ. ಕನ್ನಡ:- ಕೇಳ್ವಳ್ ಎಂಬುದರಲ್ಲಿಯ "ಳ್" ಸಂ. ತ್ > ಲ್ > ಳ್ ಕಾರಕ್ಕೆ ಸಂಬಂಧಿಸಿದೆಯೆಂದು ಮೇಲೆ ತೋರಿಸಿದ್ದೇವೆ. ಕಾಲ್ಡವೆಲ್ಲರು ಹಾಗೂ ಸ್ವಾಮಿನಾಥ ಅಯ್ಯರವರು ಒಂದೇ ಮೂಲರೂಪದಿಂದ ಪುಲ್ಲಿಂಗ ಸ್ತ್ರೀಲಿಂಗ ಪ್ರತ್ಯಯಗಳ ರೂಪಾಂತರ ವಾಗುವದೆಂಬ ತತ್ವವನ್ನು ಒಪ್ಪಿಕೊಂಡಿದ್ದಾರೆ.

## ೬. ವಾಕ್ಯ ರಚನೆ (Syntax)

ಸಂಸ್ಕೃತ ಪ್ರತ್ಯಯಗಳನ್ನು ಸ್ವೀಕರಿಸಿ ದ್ರಾವಿಡ ಭಾಷೆಗಳು ಅದೇ ಅರ್ಥದಲ್ಲಿ ಅವುಗಳನ್ನು ಉಪಯೋಗಿಸಿವೆ ಎಂಬುದು ಸ್ಪಷ್ಟವಾದದ್ದು. ಪ್ರಥಮಾ ವಿಭಕ್ತಿಯನ್ನು ಕರ್ತೃವನ್ನಾಗಿಯೂ ದ್ವಿತೀಯಾ ವಿಭಕ್ತಿಯನ್ನು ಕರ್ಮವಾಗಿಯೂ ತೃತೀಯಾ ವಿಭಕ್ತಿಯನ್ನು ಕರಣವಾಗಿಯೂ ಹೀಗೆಯೇ ಉಳಿದ ವಿಭಕ್ತಿಗಳನ್ನು ಸಂಸ್ಕೃತದಂತೆ ಉಪಯೋಗಿಸಿದ್ದು ವ್ಯಾಕರಣದ ವಿಭಕ್ತ್ಯರ್ಥ ಎಂಬ ಪ್ರಕರಣದಿಂದ ಗೊತ್ತಾಗುವದು. ಈಗ ನಾವು ವಾಕ್ಯ ರಚನೆಯಲ್ಲಿ ಒಂದು ಮುಖ್ಯವಾದ ವಿಷಯವನ್ನು ಕುರಿತು ವಿಚಾರಿಸುವಾ. ಅದು ಅಂದರೆ ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳ ಸ್ಥಾನ.

(i) ಕರ್ತೃ ಕರ್ಮ ಕ್ರಿಯಾಪದ ಕ್ರಮ ಸಂಸ್ಕೃತದಲ್ಲಿ:- ಸಂಸ್ಕೃತವು ಪ್ರಾತ್ಯಾಯಿಕ ಭಾಷೆಯಾದರೂ ವೈದಿಕ ಗದ್ಯವಾಙ್ಮಯದಲ್ಲಿಯೂ ಪ್ರಾಕೃತ ಗದ್ಯದಲ್ಲಿಯೂ ಮತ್ತು ಗದ್ಯ ಕಾವ್ಯದಲ್ಲಿಯೂ ವಾಕ್ಯ ರಚನೆಯಲ್ಲಿ ಶಬ್ದಗಳನ್ನು ಒಂದು ವಿಶಿಷ್ಟಕ್ರಮದಲ್ಲಿ ಹಾಕಿರುವದನ್ನು ನಾವು ನೋಡಬಹುದು.

ವೈದಿಕ ವಾಙ್ಮಯ:— (i) ಅಗ್ನಿರೇಕಾಕ್ಷರೇಣ ವಾಚಮುದಜಯತ್ ಅಶ್ವಿನೌ ದ್ವ್ಯಕ್ಷರೇಣ ಪ್ರಾಣಾಪಾನಾ ಉದಜಯತಾಮ್ (ಕೃಷ್ಣಯಜುರ್ವೇದ ಸಂಹಿತಾ). (ii) ದೇವಾಸುರಾಃ ಸಂಯತಾ ಆಸನ್ ತೇ ದೇವಾಃ ವಿಶ್ವಮುಪಜಯಂತೋ ಅಗ್ನೌ ವಾಮಂಸು ಸಂನ್ಯದಧುಃ. ತೇ ತದ್ವಸುನೋ ಭವಿಷ್ಯತಿ (ತೈತ್ತಿರೀಯಬ್ರಾಹ್ಮಣ). (iii). ದೇವಾಸುರಾಃ ಹ ವೈ ಯತ್ರ ಸಂಯೇತಿರೇ. ಉಭಯೇ ಪ್ರಾಜಾಪತ್ಯಾಃ (ಪ್ರಶ್ನೋಪನಿಷತ್).

ಪಾಲೀಶಾಸನ:— ಅತೀತೇ ಬಾರಣಸಿಯಂ ಬ್ರಹ್ಮದತ್ತೇ ರಾಜ್ಯಂ ಕರಂತೇ- ಇತ್ಯಾದಿ.

ಪ್ರಾಕೃತ (ಅಶೋಕಶಾಸನ):- ಇಮಂ ಬ್ರಹ್ಮಲಿಪೀ ದೇವಾನಾಂ ಪ್ರಿಯೇಣ ಪ್ರಿಯದರ್ಶಿನಾ ರಾಜ್ಞಾ ಲೇಖಾಪಿತಾ.

ಮೇಲಿನ ವಾಕ್ಯಗಳಲ್ಲಿ ಕರ್ತೃ, ಕರ್ಮ, ಕ್ರಿಯಾಪದಕ್ರಮವು ಕಂಡು ಬರುತ್ತದೆ. ಇತರ ಆರ್ಯಭಾಷೆಗಳಾದ ಗ್ರೀಕ ಹಾಗು ಲೇಟಿನ್‌ಗಳಲ್ಲಿಯೂ ಇದೇ ಕ್ರಮವನ್ನು ನಾವು ನೋಡುತ್ತೇವೆ. ವಾಕ್ಯದ ಅಂತ್ಯದಲ್ಲಿ ಕ್ರಿಯಾಪದ ಬರುವದು ಆರ್ಯಭಾಷೆಯ ವೈಶಿಷ್ಟ್ಯವೆಂದು ಗ್ರಿಯರ್ಸನ್‌ರ ಮತ. (Linguistic Survey of India). ಆರ್ಯೇತರ ಕೆಲವು ಜನಾಂಗಗಳು ಕ್ರಿಯಾಪದಕ್ಕೆ ಮುಖ್ಯಸ್ಥಾನವನ್ನು ಕೊಟ್ಟು ವಾಕ್ಯದ ಮೊದಲನೇ ಸ್ಥಾನದಲ್ಲಿ ಹಾಕುವರು. ಆರ್ಯವಿಚಾರಸರಣಿಯಲ್ಲಿ ಕರ್ತೃವಿಗೆ ಮುಖ್ಯಸ್ಥಾನವಿದ್ದು ಆ ವಿಚಾರಸರಣಿಯ ಪ್ರತೀಕವಾದ ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯಾಪದ ಕ್ರಮವು ರೂಪುಗೊಳ್ಳುವದು ಸಹಜ. ಆರ್ಯಜನಾಂಗವಾದ ಭಾರತೀಯರ ವಿಚಾರಸರಣಿಯು ಐಂದ್ರವ್ಯಾಕರಣದ ಪರಂಪರೆಯನ್ನನುಸರಿಸುವ ನೈಯ್ಯಾಯಿಕರ ವಾಕ್ಯಾರ್ಥದಲ್ಲಿ ಅಭಿವ್ಯಕ್ತವಾಗುವದು. ಅಲ್ಲಿಯೂ ಕರ್ತೃವಿಗೆ ಮುಖ್ಯಸ್ಥಾನವಿದ್ದು ವಾಕ್ಯದಲ್ಲಿ ಉಳಿದ ಶಬ್ದಗಳು ಕರ್ತೃವಿನ ವಿಶೇಷಣಗಳೆಂದು ಪರಿಗ್ರಹಿಸಲ್ಪಟ್ಟವೆ. ಆದ್ದರಿಂದ ಗದ್ಯಸಂಸ್ಕೃತ ಹಾಗೂ ಪ್ರಾಕೃತಗಳಲ್ಲಿ ಕರ್ತೃವಿಗೆ ಪ್ರಥಮಸ್ಥಾನ. ಕರ್ಮಕ್ಕೆ ದ್ವಿತೀಯಸ್ಥಾನ. ಕ್ರಿಯಾಪದಕ್ಕೆ ಅಂತಿಮಸ್ಥಾನ ಕ್ಲಪ್ತವಾಗಿವೆ.

(ii) ದ್ರಾವಿಡ ವಾಕ್ಯರಚನೆಯಲ್ಲಿ ಸಂಸ್ಕೃತದ ಪ್ರಭಾವ:— ದ್ರಾವಿಡ ಭಾಷೆಗಳ ವಾಕ್ಯಗಳಲ್ಲಿಯೂ ಕರ್ತೃ, ಕರ್ಮ, ಕ್ರಿಯಾಪದಕ್ರಮವು ಕಂಡು ಬರುವದು. ಈ ಕ್ರಮವು ಆರ್ಯಭಾಷೆಯ ವೈಶಿಷ್ಟ್ಯವಿದ್ದು ಆರ್ಯಜನಾಂಗದ ವಿಚಾರಸರಣಿಯ (Thought pattern) ಪ್ರತೀಕವೆಂದು ಮೇಲೆ ಹೇಳಿದ್ದೇವೆ. ಭಿನ್ನ ಭಾಷಾವರ್ಗಕ್ಕೆ ಸೇರಿದ ದ್ರಾವಿಡಭಾಷೆಗಳಲ್ಲಿ ಆರ್ಯಭಾಷೆಯ ವೈಶಿಷ್ಟ್ಯವು ಹೇಗೆ ಬಂದಿತು ? ದ್ರಾವಿಡಭಾಷೆಗಳು ಆರ್ಯಭಾಷಾವರ್ಗಕ್ಕೆ ಸೇರಿರಬೇಕು—ಇದು ಮೊದಲನೆಯ ಪಕ್ಷ. ಇಲ್ಲವೆ ಸಂಸ್ಕೃತದ ವರ್ಚಸ್ಸಿಗೆ ಒಳಗಾಗಿ ವಾಕ್ಯರಚನೆಯಲ್ಲಿ ಕರ್ತೃ, ಕರ್ಮ ಕ್ರಿಯಾಪದಕ್ರಮವನ್ನು ಅನುಸರಿಸಿರಬೇಕು— ಇದು ಎರಡನೆಯ ಪಕ್ಷ. ಎರಡನೇ ಪಕ್ಷವೇ ದ್ರಾವಿಡಭಾಷೆಗಳಿಗೆ ಅನ್ವಯಿಸುವದೆಂದು ನಮ್ಮ ಅಭಿಪ್ರಾಯ. ದ್ರಾವಿಡ ಭಾಷೆಗಳಿಗೆ ಸಂಸ್ಕೃತದ ಸಂಪರ್ಕದ ಪೂರ್ವದಲ್ಲಿ ಸ್ವತಂತ್ರವಾದ ಶಬ್ದಕೋಶ (lexicon), ವಾಕ್ಯರಚನಾಪದ್ಧತಿ (Morphology) ಗಳು ಇದ್ದವು. ಈ ಲೇಖನದಲ್ಲಿ ಅವು ಅಪ್ರಸ್ತುತವಾದ್ದರಿಂದಲೂ ಲೇಖನಗೌರವ ಭೀತಿಯಿಂದಲೂ ಅವುಗಳನ್ನು ಇಲ್ಲಿ ಹೇಳಿಲ್ಲ. ಅವುಗಳನ್ನು ಕುರಿತು ಒಂದು ಸ್ವತಂತ್ರ ಲೇಖನವನ್ನೇ ಬರೆಯಬಹುದೆಂದು ಹೇಳಿ ನಾವು ವಿರಮಿಸುವೆವು.

# ಭಾರತೀಯ ನಾಗರಿಕತೆಗೆ ಪುರಾಣಗಳ ಕೊಡುಗೆ

ಭಾರತದ ಜನಜೀವನದ ಮೇಲೆ ಪುರಾಣಗಳ ಪ್ರಭಾವ ಗಾಢವಾಗಿ ಬಿದ್ದಿದೆ. ಅಕ್ಷರಜ್ಞರಲ್ಲದಿದ್ದರೂ ಜನಸಾಮಾನ್ಯರು ಸುಸಂಸ್ಕೃತರಾಗಿರಲು ಪುರಾಣಗಳ ಪ್ರಸಾರವೇ ಮುಖ್ಯ ಕಾರಣ. ನಮ್ಮ ಜೀವನದ ಮೇಲೆ ಪುರಾಣಗಳು ಬೀರಿದ ಪ್ರಭಾವದ ಸ್ವರೂಪವನ್ನು ಲೇಖಕರು ಚರ್ಚಿಸಿದ್ದಾರೆ.

ಲೇಖಕರು: **ಪ್ರೊ. ಬಿ. ಎಚ್. ಶ್ರೀಧರ,**
ಎಂ. ಎ.

---

'ಯಾವ ಯಾವ ವಸ್ತುಗಳ ಬೆಲೆ ಎಷ್ಟೆಷ್ಟು ಎನ್ನುವುದನ್ನು ತಿಳಿಯುವುದೇ ಬುದ್ಧಿವಂತಿಕೆ' ಎಂದೊಂದು ಆಂಗ್ಲ ಗಾದೆಯಿದೆ. ವಸ್ತುಗಳ ಆತ್ಯಂತಿಕ ಬೆಲೆ ಕಟ್ಟಲು ತತ್ವಜ್ಞಾನಿಯೇ ಬೇಕಾದರೂ ನಿತ್ಯ ಜೀವನದ ವ್ಯಾವಹಾರಿಕ ಕೊಡು-ಕೊಳುಗಳಲ್ಲಿ 'ಇದು ಚಲೋದು' ಎಂದು ನೋಡಿದ ಕೂಡಲೇ ಸರಿಯಾಗಿ ಹೇಳಬಲ್ಲವನಿಗೆ ಬುದ್ಧಿವಂತ, ಗಟ್ಟಿಗ ಎನ್ನುವುದು ರೂಢಿ. ಈ ಗಟ್ಟಿಗತನ ಎನ್ನುವುದು ಕೆಲವರಲ್ಲಿ ಸಹಜ, ಕೆಲವರಲ್ಲಿ ಅನುಭವಜಾತ; ಮತ್ತೆ ಕೆಲವರಲ್ಲಿ ಬುದ್ಧಿಪೂರ್ವಕ ಅಭ್ಯಾಸದ ಫಲವಾಗಿರುತ್ತದೆ. ಜಾನಪದ ಜೀವನದ ಐತಿಹಾಸಿಕ ದರ್ಪಣವೆನಿಸುವ ಜನಪದ ಸಾಹಿತ್ಯ ಇಂಥ ಗಟ್ಟಿಗರ ಜೀವನವಿವೇಕದ ಭಾವಗಳನ್ನು ಪ್ರತಿಬಿಂಬಿಸಿರುವುದು.

ಭಾರತ ದೇಶದಲ್ಲಿ ಅನಾದಿ ಕಾಲದಿಂದಲೂ ಧರ್ಮವು ಜೀವನದ ಸರ್ವಾಂಗವ್ಯಾಪಿಯಾಗಿದೆ. Religious ಧಾರ್ಮಿಕ ಮತ್ತು Secular ಲೌಕಿಕ ಎಂಬ ವಿಭಜನೆ ಇಲ್ಲಿ ತೀರ ಈಚಿನದು. ಸಂವಾದ, ಅಭಿನಯ, ಸಂಗೀತ, ನೃತ್ಯ ಮುಂತಾದ ಲಲಿತ ಕಲೆಗಳಿಗೆ ಕೂಡ ಇಲ್ಲಿ ವೇದವೇ ತಂದೆ. ಮಂತ್ರದ್ರಷ್ಟಾರರು ಪುರಾಣ ಕಾವ್ಯಕರ್ತರಂತೆ Bards ಗಮಕಿಗಳಾಗಿದ್ದರೆಂದು ಒಂದು ದೃಷ್ಟಿಯಿಂದ ಹೇಳಬಹುದು; ಬಹುಶಃ ಉಚ್ಚ ಶ್ರೇಣಿಯ ಧಾರ್ಮಿಕ ಉದ್ಗಾತೃಗಳಾಗಿರಬಹುದು. ಆರ್ಯರು ಈ ದೇಶಕ್ಕೆ ಬರುವಾಗಲೇ ಅತಿ ಮೌಲಿಕ ವೇದ ಸೂಕ್ತಗಳನ್ನು ಪರಂಪರಾನುಗುಣವಾಗಿ ಇಲ್ಲಿಗೆ ತಂದರೆಂಬ ನಂಬಿಕೆಯಿದೆ. ಇಂದ್ರಾದಿ ದೇವತೆಗಳ ಪರಾಕ್ರಮಗಳನ್ನು ಸೂಕ್ತಗಳು ವರ್ಣಿಸುವುದನ್ನು ಕಂಡರೆ ಅವುಗಳಲ್ಲಿ Heroic Tradition ವೀರಚರಿತ್ರ ಕಥನದ ಪದ್ಧತಿ ಅಡಕವಾಗಿರುವುದು ಸ್ಪಷ್ಟವಾಗುತ್ತದೆ. ಎಲ್ಲ ನಾಗರಿಕತೆಗಳ ಬಾಲ್ಯದಲ್ಲೂ ದೇಶಪ್ರೇಮವನ್ನು ಜನತೆಯಲ್ಲಿ ಉದ್ಬೋಧಿಸಲು ಗತಕಾಲದ ಹಿರಿಯ ವೀರರ ಚರಿತ್ರೆಯನ್ನು ಹೃದ್ಯವಾಗಿ ಹಾಡಿ ಪ್ರಚುರಪಡಿಸಿದ್ದು ಕಂಡುಬರುತ್ತದೆ. ನಾಡನ್ನು ಕಟ್ಟಹೊರಟ ನೇತೃಗಳು, ನಾಡನ್ನು ಕಟ್ಟಿದ ಪರಾಕ್ರಮಿಗಳು ಮತ್ತು ನಾಡನ್ನು ಕೇಡು, ಕೀಳ್ಮೆಗಳಿಂದ ಬದುಕಿಸಲು ಜನರನ್ನು ಹುರಿದುಂಬಿಸ ಹೊರಟ ದ್ರಷ್ಟಾರರು ಎಲ್ಲ ಕಾಲದಲ್ಲೂ ಜನಪದಗಮ್ಯವಾದ ಸತ್ಕಾರ್ಯಪ್ರಚೋದಕವಾದ ಕಥನಗೀತಗಳನ್ನು ಪರಿವ್ರಾಜಕರಂತೆ ದೇಶದಾದ್ಯಂತ ಹಾಡಿದ್ದುಂಟು, ಹಾಡಿಸಿದ್ದುಂಟು. ಈ ಪ್ರಥಮೋದ್ದೇಶ ಫಲಿಸುತ್ತ ಹೋದ ಹಾಗೆ ಮನೋರಂಜನೆಯ ಉದ್ದೇಶವೂ ಕೂಡಿಕೊಂಡು ಪ್ರೇಮ, ಭಕ್ತಿ, ಕರುಣೆ, ಸಾಹಸ, ಧೈರ್ಯ, ಬುದ್ಧಿವಂತಿಕೆ, ಸತ್ಸಹಾಯಬುದ್ಧಿ, ನ್ಯಾಯವೀರತೆಗಳನ್ನು ಉದಾಹರಿಸುವ ಕಥೆಗಳೂ ಕಥನ ಕವನಗಳೂ ಜನಪದ ಭಾಷೆ ಅಥವಾ ತದ್ಗನ್ಯ ಶಿಷ್ಟಭಾಷೆಯಲ್ಲಿ ರಚಿತವಾಗಿ ಪ್ರಾಚುರ್ಯ ಪಡೆದದ್ದಕ್ಕೆ ಹಲವು ನಿದರ್ಶನಗಳು ದೊರಕುತ್ತವೆ.

ಸಂಸ್ಕೃತ, ಪ್ರಾಕೃತ, ಅಪಭ್ರಂಶ— ಈ ಯಾವುದರಲ್ಲಿದ್ದರೂ ಪುರಾಣವೆಂಬುದು ಭಾರತೀಯ ಜನಪದಕ್ಕೆ ಸುಲಭವಾಗಿ ತಿಳಿಯುವ ಹಾರ್ದಿಕ ಭಾಷಾಮಾಧ್ಯಮ. ಪುರಾಣ ಶೈಲಿಯೇ ನಮ್ಮ ಜನಪದ ಶೈಲಿ. ಭಾಷಾದೃಷ್ಟಿಯಿಂದ ವೇದಗಳು ಬಹಳ ಮೊದಲೇ ಹಳೆಯವೆನಿಸಿದ್ದರಿಂದ ಅವುಗಳಲ್ಲಿಯ ಕಥೆಗಳು ಬ್ರಾಹ್ಮಣ, ಉಪನಿಷತ್ತುಗಳಲ್ಲಿ ವಿಕಾಸಪಡೆದವು. ಸರ್ವ ಕಲೆಗಳೂ ಧರ್ಮದಿಂದ ಸ್ಫೂರ್ತಿ ಪಡೆದಿರುವ ಈ ದೇಶದಲ್ಲಿ ಬಹುಸಂಖ್ಯ (ಗದ್ಯಪದ್ಯಗತ) ಕಥೆಗಳು ಧರ್ಮ, ನೀತಿಗಳನ್ನು ವ್ಯಕ್ತಾವ್ಯಕ್ತವಾಗಿ ಬೋಧಿಸುವ ಉದ್ದೇಶದಿಂದ ರಚಿತವಾದದ್ದು ಸ್ವಾಭಾವಿಕ. ವೇದೋಪನಿಷತ್ತುಗಳೂ ಕಾಲಕ್ರಮೇಣ ಹಳೆಯವಾಗಲು ಅವುಗಳಲ್ಲಿನ ಕಥಾಬೀಜಗಳನ್ನು ಬಿತ್ತಿ ಬೆಳೆದು ಹಂಚಲು ಪುರಾಣಕವಿಗಳು ಉದಯಿಸಿದರು.

ವೇದಗಳು ಸುಮಾರು ಕ್ರಿ.ಪೂ. ೪೫೦೦ ವರ್ಷಗಳ ಹಿಂದಿನವಾದರೆ ಬ್ರಾಹ್ಮಣಗಳು ಅನಂತರ ರಚಿತವಾದವು. ವೇದಾಂತದ ಭಾವಗಳಿಗೆ ಅವು ಆದ್ಯಾಕರಗಳಾಗಿರುವಂತೆ ಪೌರಾಣಿಕಕಥೆಗಳಿಗೂ ಆದ್ಯಾಕರಗಳಾಗಿವೆ. ಸದ್‌ವೃತ್ತ-ದುರ್ವೃತ್ತರು ಮಾಡಿದ ಸತ್ಕರ್ಮ-ದುಷ್ಕರ್ಮಗಳೂ ತಜ್ಜನ್ಯ ಸು-ದುಷ್ಫಲಗಳೂ ಬ್ರಾಹ್ಮಣಗಳಲ್ಲಿ ವರ್ಣಿಸಲ್ಪಟ್ಟವೆ. 'ಕಾಂತಾಸಂಮಿತತಯೋಪದೇಶಯುಜೇ' ಎಂಬುದು ಭಾರತೀಯ ಕಲೋದ್ದೇಶಗಳಲ್ಲಿ ಅತ್ಯುನ್ನತವಾಗಲು ವೈದಿಕ ಸಾಹಿತ್ಯದಲ್ಲಿ ನೀತಿಜ್ಯೋತಿಯು ಆತ್ಮಸ್ಥಾನದಲ್ಲಿರುವುದೇ ಕಾರಣ. ಆರ್ಯರು ಒಳಹೊಕ್ಕ ಬಳಿಕ ದೇಶೀಯರೊಡನೆ ಮಿಳಿತರಾಗುತ್ತ ಬಂದ ಸಾವಿರಾರು ವರ್ಷಗಳಲ್ಲಿ ಆರ್ಯಾನಾರ್ಯ ಪ್ರಾಚೀನ ಆಖ್ಯಾನ ಉಪಾಖ್ಯಾನಗಳು ಬೆಳೆಯುತ್ತ ಬಂದವು. ಅತಿ ವಿಸ್ತಾರವಾದ ಈ ದೇಶದಾದ್ಯಂತ ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಸಾಮಾಜಿಕ ನೀತಿನಿಯಮಗಳ ಪ್ರಸಾರ ಸುಲಭಸಾಧ್ಯವಾಗಲು ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿ ಭೈಕ್ಷ್ಯವೃತ್ತಿಯನ್ನು ಜನನಾಯಕರು ಪ್ರಶಂಸಿಸಿ, ವಿದ್ಯಾವಿದ್ಯುದ್ದೀಪಹಸ್ತರಾದ ಬ್ರಾಹ್ಮಣರು ಆ ವೃತ್ತಿಯನ್ನು ಹಿಡಿಯುವಂತೆ ಮಾಡಿ, ಪುರಾಣ ಮಾಧ್ಯಮದ ಮೂಲಕ ಪ್ರಚಾರವನ್ನು ಕೈಕೊಂಡದ್ದೇ ಕಾರಣ. ಈ ಪೌರಾಣಿಕ ಪ್ರಚಾರಶಕ್ತಿಯು ಮುಂದೆ ಗೊಬೆಲ್ಸನ ಪ್ರಚಾರಸಿದ್ಧಿ ಅಣುಪ್ರಾಯವೆನ್ನಬೇಕು! ಅತ್ಯುನ್ನತ ತತ್ವಜ್ಞಾನದಿಂದ ಹಿಡಿದು ಸಾಮಾನ್ಯ ವ್ಯವಹಾರಜ್ಞಾನದ ವರೆಗೆ ಎಲ್ಲ ಶಿಕ್ಷಣವೂ ನಿರಕ್ಷರತೆಯಿದ್ದರೂ ಜನತೆಗೆ ದೊರಕಿತು. ಸಾಕ್ಷರನು ಮಾತ್ರ ವಿದ್ಯಾವಂತನೆಂಬುದು ಕೇವಲ ಆಧುನಿಕವಾದ ಬುಡವಿಲ್ಲದ ಕಲ್ಪನೆ.

ಪ್ರಾಚೀನ ಕಾಲದಲ್ಲಿ, ಅಂದರೆ ಸುಮಾರು ಕ್ರಿ. ಪೂ. ೪೦೦-೫೦೦ ವರ್ಷಗಳ ಅವಧಿಯಲ್ಲಿ ಇತಿಹಾಸ, ಪುರಾವೃತ್ತ, ಉಪಾಖ್ಯಾನ, ಪುರಾಣೋಪಾಖ್ಯಾನ, ಪುರಾವೃತ್ತೋಪಾಖ್ಯಾನ, ಶಿಷ್ಟಸಮಾಚಾರ, ಉದಂತವೆಂಬ ನಾನಾ ಕಥನಕಾವ್ಯಗಳಿದ್ದವೆಂದು ತಿಳಿದುಬರುತ್ತದೆ. ಕ್ರಿಸ್ತಪೂರ್ವ ಕ್ರಿಸ್ತೋತ್ತರ ಕಾಲದಲ್ಲಿ ರಚಿತವಾದ ನಮ್ಮ ಅಷ್ಟಾದಶ ಪುರಾಣಗಳ ಬೀಜಭೂತ ಕಥೆಗಳಲ್ಲಿ ಹಲವೂ ಅವುಗಳಿಗೆ ಬಿಳಿಲಾಗಿ ಬೆಳೆದ ಉಪಾಖ್ಯಾನಗಳಲ್ಲಿ ಹಲವೂ ಇತಿಹಾಸಪೂರ್ವಕಾಲದ ಪರಂಪರಾಗತ ಗಾಥಾಗೀತಗಳಲ್ಲಿ ಇದ್ದವಾಗಿರಬೇಕು. ಪುರಾಣ ಮಹಾಕಾವ್ಯಗಳಾದ ಮಹಾಭಾರತ ರಾಮಾಯಣಗಳು ಐತಿಹಾಸಿಕ ಪುರಾಣಗಳು;

ಅವು ಅತಿ ಪ್ರಾಚೀನವೂ ಮಿಕ್ಕಪುರಾಣಗಳಿಗೆ ಆದರ್ಶವೂ ಆದವು. ವಿಂಟರ್‌ನಿಟ್ಜ್ ಪಂಡಿತರ ಪ್ರಕಾರ ಒಂದು ಲಕ್ಷ ಶ್ಲೋಕಗಳುಳ್ಳ ಮಹಾಭಾರತ ಕ್ರಿ. ಶಕ ೪೦೦ರಷ್ಟು ಹೊತ್ತಿಗೆ ರೂಪಿತವಾಗಿತ್ತು. ಕ್ರಿ. ಪೂ. ೪೦೦ ರಲ್ಲಿ ಅದು ೪೦೦ ಶ್ಲೋಕಗಳ ಭಾರತವಾಗಿತ್ತಂತೆ. ಕ್ರಿ. ಪೂ. ೩ನೆಯ ಶತಮಾನದಲ್ಲಿ ವಾಲ್ಮೀಕಿ ರಚಿಸಿದ ಮೂಲ ರಾಮಾಯಣ ೨೪,೦೦೦ಶ್ಲೋಕಗಳ ಮಹಾಗ್ರಂಥವಾಗಿ ಕ್ರಿ. ಶ. ೨ರಲ್ಲಿ ಪ್ರಾಚುರ್ಯ ಪಡೆಯಿತೆಂದು ಸಂಶೋಧಕರ ಊಹೆ.

ಕಥೆ ಆಬಾಲವೃದ್ಧ ಸ್ತ್ರೀ-ಪುರುಷಪ್ರಿಯ. ಭಾರತೀಯ ನಾಗರಿಕತೆಗೆ ಅನಾದಿಯಿಂದ ನೀರೆರೆಯುತ್ತ ಬಂದ ತೋಟಗನ ಸ್ಥಾನ ಕಥಾಸಾಹಿತ್ಯಕ್ಕೆ ಸಲ್ಲುತ್ತದೆ. ಅದರಲ್ಲೂ ಹಳೆಯ ಕಥೆಗಳನ್ನು ಅಜ್ಜರ ಬಾಯಿಂದ ಕೇಳುವ ರಸಿಕತೆ ಪ್ರಾಚೀನ ನಾಗರಿಕತೆಗಳೆಲ್ಲವುಗಳಲ್ಲೂ ಕಂಡುಬಂದರೂ ಭಾರತದಲ್ಲಿ ಅದು ಇನ್ನಷ್ಟು ಹೆಚ್ಚಾಗಿ ಇತ್ತೆನ್ನಬಹುದು. ಗಾಥಾ, ನಾರಾಶಂಸಿಗಳೆಂಬ ಹೆಸರಿಂದ ವೈದಿಕ ಯುಗದಲ್ಲೇ ಕಥನ ಪ್ರಾರಂಭಿಸಿತ್ತು. ಅವೇ ನಮ್ಮ ಇತಿಹಾಸಬೀಜಗಳು.

> 'ಧರ್ಮಾರ್ಥ ಕಾಮಮೋಕ್ಷಾಣಾ-
> ಮುಪದೇಶಸಮನ್ವಿತಂ
> ಪೂರ್ವವೃತ್ತಕಥಾಯುಕ್ತ-
> ಮಿತಿಹಾಸಂ ಪ್ರಚಕ್ಷತೇ'

ವೃದ್ಧವ್ಯವಹಾರಾಗತವಾದ ಉಪಾಖ್ಯಾನ, ಆಖ್ಯಾನಗಳು ಹಿರಿಯರ ಅನುಭವವೆಂಬ ಕಾರಣದಿಂದ ಮುಂದಿನ ಪೀಳಿಗೆ ಜ್ಞಾನಭಂಡಾರವೆಂದು ತಿಳಿದು ಅವನ್ನು ತನ್ನಿಂದ ಮುಂದೆ ಬಂದವರಿಗೆ ಸಾಂಸ್ಕೃತಿಕ ಆಸ್ತಿಯನ್ನಾಗಿ ಬಿಟ್ಟುಕೊಡುತ್ತ ಬಂದಿತು. ಹಿರಿಯರು ಸಾಧಿಸಿದ ಮಹತ್ಕಾರ್ಯಗಳ ಅರಿವು ಎಲ್ಲ ದೇಶಗಳಲ್ಲೂ ಕಿರಿಯರಿಗೆ ಮಹೋದ್ಯಮಪ್ರಚೋದಕಗಳಾದದ್ದು ಸುವಿದಿತ. ಪುರಾಣ (ಪುರಾ+ನವಂ) ಎಂದರೆ Legendary History ಕಥಾಗತ ಇತಿಹಾಸ. 'ಆಖ್ಯಾನಂ ಪೂರ್ವವೃತ್ತೋಕ್ತಿಃ' ಆಖ್ಯಾನವೆಂದರೆ ಗತವೃತ್ತ ಕಥನ. ಭಾರತವೊಂದು ಆಖ್ಯಾನ; ಉಪಾಖ್ಯಾನಗಳನ್ನು ಕೂಡಿಕೊಂಡು ಅದು ಮಹಾಭಾರತವೆನಿಸಿತು. ('ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ)'. ಗದ್ಯಗತ ಕಥೆಗಳನ್ನು ಆಖ್ಯಾಯಿಕೆಗಳೆಂದರು. ('ಆಖ್ಯಾಯಿಕಾ ಕಥಾವತ್ ಸ್ಯಾತ್ ಕವೇರ್ವಂಶಾದಿಕೀರ್ತನಂ। ಅಸ್ಯಾಮನ್ಯಕವೀನಾಂ ಚ ವೃತ್ತಂ ಗದ್ಯಂ ಕ್ವಚಿತ್ ಕ್ವಚಿತ್. . . . .' ಇತ್ಯಾದಿ).

'ಸಖಿ ನಮ್ಮ ಸಖ್ಯದ ಆಖ್ಯಾನ ಕಟುಮಧುರ ವ್ಯಾಖ್ಯಾನವೊಡಗೂಡಿ ವಿವರಿಸಲೇ' ಎಂಬ ಗಂಗಾಪ್ರವಾಹೋಪಮ ಮಂದ, ಋಜು, ಗಂಭೀರ, ವಿಸ್ತಾರಗತಿಯಿಂದ ನಮ್ಮ ಪ್ರಾಚೀನ ಕಥನಕಾರರು ಕಾವ್ಯಾರಂಭ ಮಾಡುತ್ತಿದ್ದರು. ಸೂತ ಉವಾಚವೆಂದರೆ ತೀರಿತು. ದೀರ್ಘ ಕಥೆ ಅರಂಭವಾಯಿತೆಂದು ಈಗಲೂ ನಾವು ತಿಳಿದುಕೊಳ್ಳುತ್ತೇವೆ. 'ಎಷ್ಟುದ್ದವಪ್ಪಾ ನಿನ್ನ ಪುರಾಣ!' ಎಂಬ ಮಾತಿನಲ್ಲಿ ಬೇಸರದ ಜೊತೆಗೆ ಕಥಾದೈರ್ಘ್ಯವೂ ಉಕ್ತವಾಗಿದೆ. ಪ್ರಾಚೀನ ಜನಪದ ಶಿಕ್ಷಣ ಕೇಂದ್ರಗಳಾದ ದೇವಾಲಯಗಳಲ್ಲಿ ಪುರಾಣ ಪ್ರವಚನ ನಡೆಯುತ್ತಿದ್ದುದರ ಪರಂಪರೆಗೆ ಇಂದೂ ನಿದರ್ಶನಗಳು ದೊರಕುತ್ತವೆ. ಪುರಾಣಗಳ ಜನಪ್ರಿಯತೆಗೆ, ಪುರಾಣ ಗಮಕಿಗಳಿಗೆ ರಾಜಾಸ್ಥಾನಗಳಲ್ಲಿ ಕೂಡ ಮನ್ನಣೆಯಿದ್ದುದೊಂದು ಕಾರಣ. "ತೃತ್ಸುರಾಜ ಸುದಾಸನ ವಿಜಯ, ದಿವೋದಾಸನಿಂದ ಶಂಬರ ಪರಾಜಿತನಾದದ್ದು ಮುಂತಾದ ವೀರ ಕಥೆಗಳು ಋಗ್ವೇದದಲ್ಲಿ ಕಂಡುಬರುವುವು; ಶತಪಥ ಬ್ರಾಹ್ಮಣದಲ್ಲಿ ಹಗಲಿನಲ್ಲಿ ಅಶ್ವಮೇಧ ಯಾಗವಾಗುವಾಗ ಬ್ರಾಹ್ಮಣನೂ ರಾತ್ರಿಯಲ್ಲಿ ರಾಜನ್ಯನೂ ಕಥನಕವನಗಳನ್ನು ಹಾಡುತ್ತಿದ್ದ ಉಲ್ಲೇಖವಿದೆ. ರಾಜಾಸ್ಥಾನಗಳಲ್ಲಿ ವೀರಕಥೆಗಳನ್ನು ಹಾಡಿ ಅರಸನನ್ನು ಪ್ರಸನ್ನಗೊಳಿಸಲು ಕುಲಕಸಬಿಗಳಾದ ಹಾಡುಗಾರರಿದ್ದರೆಂದು ಮಹಾಭಾರತದಲ್ಲಿ ಹೇಳಲಾಗಿದೆ" ಎಂಬ ಶ್ರೀ ಎನ್. ಕೆ. ಸಿದ್ಧಾಂತರ ಮಾತಿನಿಂದ ಪುರಾಣಿಕರು ಭಾರತೀಯ ನಾಗರಿಕತೆಗೆ ಸಲ್ಲಿಸಿದ ಸೇವೆಯ ಮಹತ್ವವು ಸ್ಪಷ್ಟವಾಗುತ್ತದೆ. ಪುರಾಣಗಳೆಲ್ಲ ಸಂಸ್ಕೃತದಲ್ಲೇ ಇದ್ದರೂ ಅವು ಎಂದಿನಿಂದಲೂ ಜನಪ್ರಿಯವಾಗಿ ಉಳಿಯಲು ಪುರಾಣಿಕರ ಗಮಕಕಲೆಯ ಶಕ್ತಿಯೇ ಕಾರಣ. ಜನಪ್ರಿಯತೆಯ ಬಲದಿಂದಲೇ ಪುರಾಣ ಮಹಾಕಾವ್ಯಗಳು (Epics) ಪಾಣಿನಿಯ ವ್ಯಾಕರಣ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸಲು ಮನಗೊಡಲಿಲ್ಲವೆನ್ನಬೇಕು. ಅದರಿಂದಲೇ ಸಮಕಾಲೀನವೆನಿಸಿರಬಹುದಾದ ರಾಮಾಯಣ ಭಾರತಗಳ ಭಾಷೆಯನ್ನು ಪಾಣಿನಿ ಗಣನೆಗೆ ತಂದುಕೊಳ್ಳಲಿಲ್ಲ ಎನ್ನುತ್ತಾರೆ, ಏ.ಬಿ. ಕೀತ್ ಪಂಡಿತರು. ಅವುಗಳಲ್ಲಿಯ ಸ್ವಾಭಾವಿಕ ಸಾರ್ವಮಾನವೀಯ ಅನುಭವಚಿತ್ರಗಳ ಹೃದಯಸ್ಪರ್ಶಿತ್ವವು ಅಲ್ಪಸ್ವಲ್ಪವಾಗಿದ್ದ ಭಾಷಾದುರ್ಗಮ್ಯತೆಯನ್ನು ಜನತೆಯ ದೃಷ್ಟಿಯಲ್ಲಿ ಗೌಣವಾಗಿಸಿತು ಎಂಬುದಕ್ಕೆ ಮಂಥರೆ ಕೈಕೇಯಿಯ ಮನಸ್ಸನ್ನು ಕೆಡಿಸಲು ಪ್ರದರ್ಶಿಸಿದ

ಮಾತ್ಸರ್ಯಮಂತ್ರೋಪದೇಶದ ಶಕ್ತಿಯನ್ನು ಒಂದು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು.

"ಸುಭಗಾ ಖಲು ಕೌಸಲ್ಯಾ
ಯಸ್ಯಾಃ ಪುತ್ರೋಽಭಿಷೇಕ್ಷ್ಯತೇ।
ಯೌವರಾಜ್ಯೇನ ಮಹತಾ
ಶ್ವಃ ಪುಷ್ಯೇಣ ದ್ವಿಜೋತ್ತಮೈಃ॥
ಪ್ರಾಪ್ತಾಂ ವಸುಮತೀಂ ಪ್ರೀತಿಂ
ಪ್ರತೀತಾಂ ತಾಂ ಹತದ್ವಿಷಂ।
ಉಪಸ್ಥಾಸ್ಯಸಿ ಕೌಸಲ್ಯಾಂ
ದಾಸೀವತ್ ತ್ವಂ ಕೃತಾಂಜಲಿಃ॥
ಏವಂ ಚ ತ್ವಂ ಸಹಾಸ್ಮಾಭಿ-
ಸ್ತಸ್ಯಾಃ ಪ್ರೇಷ್ಯಾ ಭವಿಷ್ಯಸಿ।
ಪುತ್ರಶ್ಚ ತವ ರಾಮಸ್ಯ
ಪ್ರೇಷ್ಯಭಾವಂ ಗಮಿಷ್ಯತಿ॥
ಹೃಷ್ಟಾಃ ಖಲು ಭವಿಷ್ಯಂತಿ
ರಾಮಸ್ಯ ಪರಮಾಃ ಸ್ತ್ರಿಯಃ।
ಅಪ್ರಹೃಷ್ಟಾ ಭವಿಷ್ಯಂತಿ
ಸ್ನುಷಾಸ್ತೇ ಭರತಕ್ಷಯೇ॥"

ಸಪತ್ನೀ ಮಾತ್ಸರ್ಯ ಹುಟ್ಟಿಸುವ ಈ ವಾಗ್ವಿದಗ್ಧತೆಯ ಸರಳ ಮಾರ್ಮಿಕತೆ, ಕುಟಿಲ ಭಾವಪ್ರೇರಣೆ ಯಾರಿಗಾದರೂ ಹೌದು ಹೌದೆನ್ನಿಸದಿರದು. ಹೇಳುತ್ತಿರುವುದು ರಾಜಮಾನ್ಯ ರಾಜಶ್ರೀಗಳ ಚರಿತ್ರೆಯನ್ನಾದರೂ ಕಾವ್ಯದಲ್ಲಿ ವರ್ಣಿತವಾಗಿರುವುದು ರಾಜತ್ವಾಂತರ್ಗತವಾದ ಮನುಷ್ಯಹೃದಯದ ಭಾವನೆ, ಕಲ್ಪನೆ, ಅಭಿಪ್ರಾಯ, ಅರ್ಥಗಳು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೂ ಪ್ರೇಮ, ಹಾಸ, ಉತ್ಸಾಹ, ಭಯ, ಶೌರ್ಯ, ಪರಾಕ್ರಮ, ಜುಗುಪ್ಸೆ, ಶೋಕ, ಶಮಗಳೂ ಸರ್ವಮಾನವಸಾಧಾರಣವಾದ ಮಾನಸಿಕ ಅವಸ್ಥೆಗಳು, ಮನೋಧರ್ಮಗಳು, ಚಿತ್ತವೃತ್ತಿಗಳು. ವಿಜ್ಞಾನಿಯಿಂದ ಅಜ್ಞಾನಿಯವರೆಗೆ ಎಲ್ಲರಿಗೂ ಅವುಗಳ ಅನುಭವ ಹೆಚ್ಚು ಕಡಿಮೆ ಇದ್ದೇ ಇದೆ. ಇವು ಚಿರಂತನ, ಚಿರನವೀನ ಸೂರ್ಯೋದಯಾಸ್ತಗಳಂತೆ. ಈ ಜೀವಿತ ಪ್ರಧಾನಾಂಗವೇ ಭಾರತೀಯ ಕಲೆಗಳು ಚಿತ್ರಿಸುತ್ತ ಬಂದ ಕಲಾರ್ಥ; ಕಾವ್ಯಗಳು ಕಡೆದು ತೆಗೆಯುತ್ತ ಬಂದ ರಸನವನೀತ. ವಿವಿಧಭಾವಗಳ ಸಾಮಂಜಸ್ಯವನ್ನು ಸಾಧಿಸಿ ವ್ಯಕ್ತಿತ್ವದ ವಿವಿಧ ಮಾದರಿಗಳನ್ನು ಸಹೃದಯರೆದುರಿಡುವುದೇ ಕಲೆಯ ಗುರಿಗಳಲ್ಲಿ ಕೇಂದ್ರವೆನಿಸಿದೆ; ಆ ಗುರಿಯನ್ನು ಅತಿಸಹಜಸುಂದರವಾಗಿ ಸಾಧಿಸಿದವೆಂದರೆ ಇಂದಿಗೂ ಪುರಾಣಗಳೇ. ಆಧುನಿಕ ಯುಗದ ಶಾಬ್ದಿಕ ಕಲ್ಪನಾಭೇದಗಳ ಅಂತಃಪ್ರವೇಶದಿಂದ ಜನ ಸಂಸ್ಕೃತ ಪುರಾಣಗಳ ಶ್ರವಣವನ್ನೂ ಕನ್ನಡ ಪುರಾಣಗಳ ಅವಲೋಕನವನ್ನೂ ಕೆಲ ಮಟ್ಟಿಗೆ ಕಡಿಮೆ ಮಾಡಿರಬಹುದು. ಆದರೆ ಜಗತ್ತಿನ ಬಹುಸಂಖ್ಯ ಜನ ಇನ್ನೂ ಪುರಾಣಜೀವಿಯೇ ಆಗಿದೆ ಎಂಬುದು ಮನೋವಿಜ್ಞಾನ ದೃಷ್ಟಿಯ ವಿವೇಕಕ್ಕೆ ಹೊಳೆಯದಿರದು. "The mass of humanity has not risen beyond the bodily needs, the vital desires, the emotion and the current of thought-sensations created by these lower strata— ದೈಹಿಕ ಅವಶ್ಯಕತೆ, ಪ್ರಾಣಿಕ ಆಶೆ-ಆಕಾಂಕ್ಷೆ, ಭಾವನೆ ಮತ್ತು ವಿಚಾರ-ಸಂವೇದನೆಗಳು ಈ ಕೆಳಮಟ್ಟಗಳಿಂದ ಉದಿಸಿವೆ; ಅವುಗಳನ್ನು ಜಗತ್ತಿನ ಜನಸಂತತಿ ಮೀರಿ ಮೇಲೆ ತಲೆಯೆತ್ತಿ ನಿಲ್ಲಲು ಶಕ್ತವಾಗಿಲ್ಲ." ಹಳೆಯ ಪುರಾಣಗಳ ಬದಲು ಹೊಸ ವೈಜ್ಞಾನಿಕ ಪುರಾಣಗಳು ಹೊರಡುತ್ತಿವೆ, ಅಷ್ಟೆ. ಆದರಿಂದ ಪುರಾಣಯುಗ ಹಿಂದಕ್ಕಾಯಿತು ಎಂದು ಹೇಗೆ ಹೇಳಲಾದೀತು? ವರ್ಗಕ್ಕೆ ತಕ್ಕ ಪಠ್ಯಪುಸ್ತಕವನ್ನಿಡುವಂತೆ ಅಧಿಕಾರಿಯೋಗ್ಯತಾನುಸಾರವಾದ ಮಾಧ್ಯಮ ಬಳಕೆಗೆ ಬರುವುದು ಸಹಜ. ವೇದಾಧಿಕಾರವುಳ್ಳ ದ್ವಿಜರಿಗೇ ವೇದಾರ್ಥ ಅರಿಯದಂತಾಗಲು ಪುರಾಣಗಳು ಪ್ರಸಿದ್ಧಿಗೆ ಬಂದದ್ದರಲ್ಲಿ ಆಶ್ಚರ್ಯಪಡಬೇಕಾದ್ದಿಲ್ಲ. ಸಾಮಾನ್ಯ ಜನರ ಜೀವನಕ್ಕೆ ಹೊಂದುವ ಭಾವ-ಭಾವನೆ--ಸನ್ನಿವೇಶ--ವೇಷ-

ಭಾಷೆಗಳ ಶೂಧ್ಯಮವನ್ನು ಹಿಡಿದುದೇ ಪುರಾಣಗಳ ವಿಜಯಕ್ಕೆ ಕಾರಣ. ಬುದ್ಧಿವೈಶದ್ಯ ಕಡಿಮೆಯುಳ್ಳ ಅನೇಕ ವಿದ್ಯಾವಂತರು ಇಂದಾದರೂ ಘನಪ್ರತಿಭರ ಕೃತಿಗಳನ್ನು ( Ivory tower ) ಆರಣ್ಯಕ ಸಂಗೀತವೆಂದು ನಗುವುದು ಸ್ಪಷ್ಟವಾಗಿಯೇ ಇದೆಯುಲ್ಲವೇ? ಹಾಗಾದ ಮೇಲೆ ಸಾಮಾನ್ಯವೇ ಮಾನ್ಯವಾಗುವುದು ಸ್ವಾಭಾವಿಕ. ಅಂತೆಯೇ ಪುರಾಣಸಾಹಿತ್ಯವು ಜನತೆಯ ಇತರ ಭಾಷಾಸಾಹಿತ್ಯ, ದೈನಂದಿನ ವಾಗ್‌ವ್ಯವಹಾರ ಮುಂತಾದ ಎಲ್ಲದರ ಮೇಲೂ ತನ್ನ ಅಚಲ ಪ್ರಭಾವವನ್ನು ಬೀರಿತು. ಪುರಾಣಪ್ರಸಿದ್ಧ ಬ್ರಾಹ್ಮ-ಕ್ಷಾತ್ರ ವೀರರು ಲೋಕಪ್ರಿಯರೂ ಕವಿ-ಕಲಾಕಾರಪ್ರಿಯರೂ ಆಗುತ್ತ ಬಂದಂತೆ ಪುರಾಣ ಶೈಲಿಯ ಪದ, ಪದಸಂಹತಿ, ಕಲ್ಪನಾಚಿತ್ರ, ಉಪಮಾರೂಪಕಾದಿಗಳು, ಭಾವಭಂಗಿಗಳು ಜನಜೀವನದಲ್ಲಿ ಸಾಮರಸ್ಯ ಪಡೆದವು. ಪರಸ್ಪರ ಪ್ರೇರಣೆ ಹೊಂದಿ ಜನತೆಯೂ ಪುರಾಣಪ್ರಪಂಚವೂ ಪರಿಣಮಿಸುತ್ತ ಬಂದವು. ಬಳಕೆಯ ಭಾಷೆಗಳಲ್ಲೂ ಪುರಾಣಗಳು ಉದಿಸಿದವು; ಪುರಾಣ ಹಿಮಾಲಯದಿಂದ ಸ್ಫೂರ್ತಿಪಡೆದ ರಸಗಂಗೆಗಳು ಹುಟ್ಟಿದವು; ವಿದ್ವತ್ತಾಪೂರ್ಣ ಗ್ರಂಥಗಳು ಕೂಡ ಪುರಾಣಋಣದಿಂದ ಉದ್ಭವಿಸಿದವು. ಇಂದಿನ ಜನಪದ ಸಾಹಿತ್ಯದಿಂದ ಹಿಡಿದು ಮಹಾಕೃತಿಗಳ ವರೆಗೆ ಎಲ್ಲ ಮಟ್ಟಗಳಲ್ಲೂ ಪುರಾಣಸ್ಫೂರ್ತಿ ಪಡೆದ ಕೃತಿಗಳು ಹಲವು ದೊರಕುತ್ತವೆ. ಕುವೆಂಪುಗಳ ಮಹಾರಾಮಾಯಣ ಇದಕ್ಕೊಂದು ಮಹಾಸಾಕ್ಷಿ. 'I am eighty years young — ನಾನು ಎಂಭತ್ತು ವರುಷ ಚಿಕ್ಕವನು' ಎಂದುಕೊಂಬ ಶೈಶವ-ಪ್ರೇಮಪ್ರಚಲಿತವಾದ ಈ ಕಾಲದಲ್ಲಿ Romanticism 'ವೀರಶೃಂಗಾರದ ಸಸ್ಮಿತ ವಿಸ್ಮಯ'ಕ್ಕೆ ಮುಪ್ಪು ಬಂದಿತೆಂದರೆ ನಂಬಲಾದೀತೇ? 'ರೊಮಾಂಟಿಕ್ ಪೀರಿಯಡ್' ಕಳೆದುಹೋಯಿತೆಂಬುದು ಸುಳ್ಳು; ಮಾನವನೆದೆ ಪುರಾಣಪ್ರಿಯವಾಗಿರುವ ತನಕ ಅದಕ್ಕೇ ಸ್ಥಿರಪಟ್ಟ; ಜೀವನದ ಶೃಂಗಾರ, ಅಲಂಕಾರ, ಸಾಹಸ, ಇಂದ್ರಿಯ ತೃಪ್ತಿಗಳ ಭೌತಿಕ ಆವರಣದಲ್ಲೇ ಮನಸ್ಸು ಸುಳಿದಾಡುತ್ತಿರುವ ವರೆಗೆ ವೀರಶೃಂಗಾರ ರಸಗಳೇ ಜಗತ್ತಿನ ಕಾವ್ಯ, ನಾಟಕ, ಸಿನೆಮ, ಚಿತ್ರಕಲೆಗಳನ್ನು ಆಮೂಲಾಗ್ರವಾಗಿ ಆಳುವುದು ಸ್ವತಃ-ಸಿದ್ಧ. ಪ್ರಾಚೀನ ನಾಗರಿಕತೆಗಳ ಜೀವಾಳವಾಗಿದ್ದ ಧರ್ಮ ಕಥಾಸರಿತ್ಸಾಗರವಾಗಿದ್ದಂತೆ ಇಂದಾದರೂ ರಾಜಕೀಯ, ಆರ್ಥಿಕ, ಶೈಕ್ಷಣಿಕ, ವೈಜ್ಞಾನಿಕ, ಕಲಾತ್ಮಕ ಕಥಾಸರಿತ್ಸಾಗರವೇ ಜನತೆಯ ಮನೋಧರ್ಮವನ್ನು ರೂಪಿಸುತ್ತಿದೆ.

ಕಥನದ ಜೊತೆಗೆ ಬೆಳೆದು ಬಂದ ಮತ್ತೊಂದು ಕಲೆ ಎಂದರೆ ವರ್ಣನೆ. ಪುರಾಣಗಳಲ್ಲಿ ಕಂಡು ಬರುವ ನಿಸರ್ಗದೃಶ್ಯಗಳ ವರ್ಣನೆ, ಪುರವರ್ಣನೆ, ಯುದ್ಧವರ್ಣನೆ ಇಂದಿಗೂ ನವೋನವ ಸೌಂದರ್ಯದಿಂದ ಕಂಗೊಳಿಸುತ್ತಿವೆ. ಆ ವರ್ಣನೆಯ ಸರಳತೆ, ಮಾರ್ಮಿಕತೆ, ಸಾಂಗೋಪಾಂಗ ಸಾಹಿತ್ಯ, ರಂಗು ರಸಗಳು ಇಂದಿನ ಎಷ್ಟೋ ಮಹಾಕವಿಂ-ಮನ್ಯರಿಗೆ ಪಾಠ ಹೇಳಬಲ್ಲವು ಎಂಬುದರ ಸತ್ಯವನ್ನು ವಾಲ್ಮೀಕಿಯ ಶ್ರೀಮದ್ರಾಮಾಯಣವೊಂದನ್ನೋದಿದರೆ ಚೆನ್ನಾಗಿ ಮನಗಾಣಬಹುದು. ಆಕಾಶದಗಲದ ಮೈದಾನಕ್ಕೆ ಗೌರೀಶಂಕರದೆತ್ತರದಿಂದ ಭಾಸ್ವರ ಶುಕ್ಲ ತೇಜಸ್ಸಿನಿಂದ ಹರಿದಿಳಿವ ನದಿಯಂತೆ ಅದ್ಭುತ-ರುದ್ರ-ರಮ್ಯ ರಂಜಕವಾದ ಮಾನುಷಾಮಾನುಷ ಘಟನಾಚಿತ್ರಪರಂಪರೆ ಮೃದುಗಂಭೀರ ಗತಿಯಿಂದ ಭೂವ್ಯೋಮ ಪಾತಾಳಗಳನ್ನಾವರಿಸಿ ನಮ್ಮ ಮುಂದೆ ನಿಲ್ಲುವಂತೆ ಮಾಡಿದ ಪುರಾಣ ಕವಿಗಳ ಕಲ್ಪನಾಸಾಮರ್ಥ್ಯ ವಿಶ್ವತೋಮುಖ ಮತ್ತು ವಿಶ್ವಗ್ರಾಸಿ. ರಾಮಾಯಣವನ್ನು ಸಂಪೂರ್ಣ ಸಹೃದಯತೆಯಿಂದ ಓದಿದವನಿಗೆ ಹನುಮಂತ ಲಂಕೆಗೆ ಹಾರಿದ್ದು ನಿಜವೇ ಸುಳ್ಳೇ ಎಂಬ ಪ್ರಶ್ನೆಯೇ ಏಳುವುದಿಲ್ಲ; ಭಾರತದಲ್ಲಿ ತಲ್ಲೀನನಾದವನಿಗೆ ದೇವಲೋಕಕ್ಕೆ ಅರ್ಜುನ ಶರಸೋಪಾನಪಂಕ್ತಿ ಕಟ್ಟಿದ್ದನ್ನು ನಂಬಲಾದೀತೇ ಎಂಬ ಸಂಶಯವೇ ಮೂಡದು. ಇವೆಲ್ಲ after-thoughts ಆ ಮೇಲೆ ಬರುವ ಶುಷ್ಕ ವಿಚಾರಗಳು. ಆದರೆ ಪುರಾಣಗಳ ಗುರಿ ಇಂದಿನವುಗಳಂತೆ ಬರಿ ಕಥೆ ವರ್ಣನೆಗಳಿಂದ ನಿರುದ್ಯೋಗಾನಂದ ಸ್ವಾಮಿಗಳ ಮನೋರಂಜನೆ ಮಾಡುವುದಾಗಿದ್ದಿಲ್ಲ. ಅವುಗಳ ಕಟ್ಟನಲ್ಲಿ ಜೀವನಕ್ಕೇ ಜೀವನವೆನಿಸುವ ಹೃದ್ಧರ್ಮಾಮೃತದ ಸಾರಸರ್ವಸ್ವವನ್ನು ಪ್ರತಿಬಿಂಬಿಸುವುದಾಗಿತ್ತು. ಕುರುಕ್ಷೇತ್ರದಲ್ಲಿ Didactic ನೀತಿಪರವೆನಿಸುವ ವೇದಾಂತವನ್ನು ಅರ್ಜುನನಿಗೆ ಕೃಷ್ಣ ಬೋಧಿಸಿದ್ದು ಮಹಾಕಾವ್ಯದ ರಸಗೌರವವನ್ನು ಹೆಚ್ಚಿಸಿದೆಯಲ್ಲದೆ ಕಡಿಮೆ ಮಾಡಿದೆ ಎಂದು ಯಾವ ಭಾರತೀಯ ರಸಿಕನೂ ಹೇಳಲಾರನು. ಭಾರತೀಯರ Social Psychology ಸಾಮಾಜಿಕ ಮನೋಧರ್ಮ ಎಂಥದೆಂಬುದನ್ನು ಅರಿಯುವ ಕುತೂಹಲವಿದ್ದವರು ಭಾರತವನ್ನು ಓದಿನೋಡಬೇಕು. ಆಗ ಸುಮಾರು ಕ್ರಿ. ಪೂ. ೧೫೦೦ ವರ್ಷಗಳ ಹಿಂದೆ ನಡೆದಿರಬಹುದಾದ ಭಾರತ ಯುದ್ಧದ ಕಾಲದಲ್ಲಿಯ ಜನರೇ ನಮ್ಮ ಹಳ್ಳಿಗಳಲ್ಲಿ ಇಂದಿಗೂ ಸ್ವಲ್ಪ ವ್ಯತ್ಯಸ್ತ ವೇಷ-ಭಾಷೆಗಳಲ್ಲಿ ಬದುಕಿದ್ದಂತೆ ಕಂಡುಬರದಿರದು.

ಆಧುನಿಕ ಶಿಕ್ಷಣವು ಇಷ್ಟಾರ್ಥವನ್ನು ಸಾಧಿಸದಿರಲು ಜನಮನೋಧರ್ಮದ ಹೃದಯನಾಡಿಗೆ ಅದರ ಪದ್ಧತಿ ರುಚಿಸದಿರುವುದೇ ಕಾರಣ. ಆಧುನಿಕ ಶಾಸನ, ಶಿಸ್ತುಗಳು ಉದ್ದಿಷ್ಟ ಪರಿಣಾಮವನ್ನು ತೃಪ್ತಿಕರವಾಗಿ ಉಂಟುಮಾಡದಿರಲು ಜನತಾಜನಾರ್ದನನ ಅಂತರಾತ್ಮಕ್ಕೆ ಅವು ಆಪ್ಯಾಯಮಾನವಾಗದಿರುವುದೇ ಶುದ್ಧ ವೈಜ್ಞಾನಿಕ ಕಾರಣ. ಪುರಾಣದ ಮರಿಗಳಾದ ಗಮಕ, ಲಾವಣಿ, ಪ್ರಸಂಗ, ಹರಿಕಥೆ, ಕಿಂದರಿಗೀತ, ಗೊಂದಲ, ಮೂಡಲಪಾಯ, ಹೋಳಿಯ ಹಾಡು, ವ್ರತಕಥೆ, ಕ್ಷೇತ್ರ ಕೀರ್ತನ, ಮಂಗಲ ಗೀತ, ಪತಿವ್ರತಾಮಾಹಾತ್ಮ್ಯಕಥನ, ಪುರುಷಾರ್ಥಸಾಧಕ ಪುಣ್ಯಕಥೆ ಮುಂತಾದ ಮಾಧ್ಯಮ, ಭಾಷಾಶೈಲಿ, ಭಾವವ್ಯಂಜನತಂತ್ರಗಳ ಸುಧಾರಿಸಿದ ಆವೃತ್ತಿಯನ್ನು ನವಸಾಹಿತಿಗಳು ರೂಪಿಸಿಕೊಳ್ಳಲು ಶಕ್ತರಾಗದುದೇ ಆಧುನಿಕ ಸಾಹಿತ್ಯವು ಗ್ರಾಮೀಣರ ಹೃದಯವನ್ನು ಮುಟ್ಟದೆ ಅಸ್ಪೃಶ್ಯವಾಗಿ ಉಳಿಯಲು ಕಾರಣ. ಅಂಥ ಪ್ರಯತ್ನದಲ್ಲಿ ಕೆಲ ಮಟ್ಟಿನ ಯಶಸ್ಸನ್ನಾದರೂ ಪಡೆದವರೆಂದರೆ — ಅದೂ ಶೈಲಿಪರಿಪಾಕದಲ್ಲಿ — ಬೇಂದ್ರೆಯವರು ಮತ್ತು ಇತರ ನಾಲ್ಕಾರು ಕವಿಗಳು ಎನ್ನಬಹುದು. ಆಧುನಿಕ ಜನಪ್ರಿಯ Epic Poetry — ಪುರಾಣ ಮಹಾಕಾವ್ಯ ಇನ್ನೂ ಭವಿ

ತವ್ಯತೆಯು ಗರ್ಭದಲ್ಲೇ ಅಡಗಿದೆ ಎನ್ನಬೇಕು. ಭಾವಗೀತದ ಬೆನ್ನುಹತ್ತಿದ ಕವಿಗಳು ಇಂದು ಭಾವಗೀತಗಳನ್ನು ಬರೆಯದೆ ಬರಿ ತುಂಡುಪದ್ಯಗಳನ್ನು ಬರೆದೊಗೆದಿದ್ದಾರೆ; ಸಲಕ್ಷಣ ಭಾವಗೀತ ಬರೆದವರ/ಸಂಖ್ಯೆ ಅತ್ಯಲ್ಪ. ಹಾಗೆ ಬರೆದರೆ ಅವು ಜನತೆಯ ಸ್ವತ್ತಾಗುವುದು, ಜನಪ್ರಿಯಗುಣವನ್ನು ಸಂಪಾದಿಸುವುದು ಎಂದಾದರೂ ಎಲ್ಲಾದರೂ ಅಸಾಧ್ಯವೇ; ಪಿಕಾಸೋವಿನ ಚಿತ್ರಕಲೆಯಂತೆ ಅರಣ್ಯರೋದನವಾಗಿಯೇ ಜನತಾಪ್ರಪಂಚದಲ್ಲಿ ಅಂಥವು ಉಳಿಯುವುದು ಸ್ವಾಭಾವಿಕ. Symbolism ಪ್ರತೀಕಬದ್ಧಶೈಲಿಯ ಸೂಕ್ಷ್ಮತಮ ವ್ಯಂಜಕಮಾಧ್ಯಮವನ್ನು ಯಾವ ಕಲೆಗಾರ ಹಿಡಿದರೂ ಪರಾಕಾಷ್ಠೆಯಲ್ಲಿ ಅದು ಜನಗಮ್ಯತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡೇ ತೀರುತ್ತದೆ. ಬೀಜಮಂತ್ರಗಳು ಕಾಲಕ್ರಮೇಣ ಅರ್ಥಹೀನವೆನಿಸಿದಂತೆ ವರ್ಣರೇಖೆ, ಶಬ್ದ, ನಾದ ಮುಂತಾದ ಸಾಧನಗಳನ್ನು ಅತಿವ್ಯಂಜಕ ದೃಷ್ಟಿಯಿಂದ ಬಳಸಿಕೊಳ್ಳುತ್ತ ಹೋದ ಯಾವ ಕಲೆಯಾದರೂ ಭಾವವ್ಯಂಜಕತ್ವವನ್ನು ಕಳೆದುಕೊಂಡು ಭಾವಶೂನ್ಯತ್ವವನ್ನು ಹೊಂದೀತು. ಹೊಸತಿನ ಹುಚ್ಚಿನಲ್ಲಿ ಹೀಗೆ ವಿಪರೀತ ದೃಷ್ಟಿಯನ್ನು ತಳೆದುದಕ್ಕೆ ಅಲ್ಲಲ್ಲಿ ಇಂದು ಉದಾಹರಣೆಗಳು ಸಿಕ್ಕುತ್ತವೆ. ಪುರಾಣಶೈಲಿಯ ಹೃದಯದಾರ್ಢ್ಯವನ್ನು ಇಂಗಿತಜ್ಞತೆಯಿಂದ ಕಂಡುಕೊಂಡು ಹೋದರೆ ಮಾತ್ರ ಸಾಹಿತ್ಯವು ಜನಪ್ರಿಯವೂ ಜನಜೀವನಪೋಷಕವೂ ಜನಾಭಿರುಚಿರೂಪಣಕ್ಕೆ ಶಕ್ತವೂ ಆದೀತು. ಆಗ ಮಾತ್ರ ಇಂದಿನ ಕವಿಗಳು Unacknowledged Legislators— ಅಪ್ರತ್ಯಭಿಜ್ಞಾತ ಶಾಸನಕರ್ತರು ಎನಿಸಿ ಜನಾದರಣೆ ಪಡೆದಾರು,ಪಂಡಿತ ಪಾಮರ-ಉಭಯಪ್ರಿಯರಾದಾರು; ಆಗಲೇ ಅವರು ರಾಷ್ಟ್ರನಿರ್ಮಾಪಕ ಸಾಹಿತ್ಯವನ್ನು ರಚಿಸಿಯಾರು, ಸಾರ್ಥಕ ರಾಷ್ಟ್ರಕವಿಗಳಾದಾರು.

'ನಾನೃಷಿಃ ಕುರುತೇ ಕಾವ್ಯಂ' ಎಂಬ ಮಾತು ಪುರಾಣ ಮಹಾಕವಿಗಳಿಗೇ ಸಂಪೂರ್ಣಾರ್ಥದಲ್ಲಿ ಅನ್ವಯಿಸುತ್ತದೆ. 'The beautiful and the good are not only a truth but the fundamental truth of existence'–ರಸಸತ್ವ ಸಂಪನ್ನತೆಗಳು ಬರಿ ಒಂದು ಸತ್ಯವಷ್ಟೇ ಅಲ್ಲ, ಸಕಲ ಅಸ್ತಿತ್ವದ, ಬಾಳಿನ ಮೂಲಭೂತವಾದ ಸತ್ಯ ಎಂಬ ದರ್ಶನವನ್ನು ಪಡೆದಲ್ಲದೆ, ಗೌರವಾರ್ಹ ಪುರಾಣ ಮಹಾಕಾವ್ಯ ಹುಟ್ಟದು; ಜನಜೀವನದ ಪರಿಸ್ಪಂದ ಗತಿಯೊಡನೆ ಸಮಶ್ರುತಿಯಿಂದ ಬೆರೆದು ಅದರ ಉದ್ಧಾರಕ್ಕೆ ಸೊಂಟಕಟ್ಟಿ ನಿಲ್ಲಲು ಯಾವ ಕವಿಕೃತಿಗೂ ಯೋಗ್ಯತೆಯುಂಟಾಗದು. ಇಂಥ ಕಾರ್ಯವನ್ನು ಈ ವರೆಗೆ ಸಾಧಿಸಿದ ಪುರಾಣಗಳಿಗೆ ಭಾರತದ ಆಧುನಿಕ ನಾಗರಿಕತೆ ಕೃತಜ್ಞವಾಗಿರಬೇಕು. ಅವುಗಳ ಪರಿಣಾಮಿಯಾದ ಗುಣಬಾಹುಲ್ಯದ ಎದುರು ಇರಬಹುದಾದ ಅಲ್ಪದೋಷಗಳು ತೀರ ಅಗಣ್ಯ ಎಂಬುದನ್ನು ನಾಗರಿಕತೆಯ ಇತಿಹಾಸಕಾರನು ಒಪ್ಪದೆ ಉಳಿಯನು.

---

ಕವಿಗಳು ಮಿತಿಮೀರಿ ಸುಳ್ಳು ಹೇಳುತ್ತಾರೆ. ಅವರಿಗೆ ಇರುವ ತಿಳಿವಳಿಕೆ ಕಡಿಮೆ, ಕಲಿಯಲೂ ಮನಸಿಲ್ಲ: ಇಂತು ಸುಳ್ಳು ಹೇಳದೆ ಅವರಿಗೆ ವಿಧಿಯೇ ಇಲ್ಲ .... ಕೋಣನ ಮುಂದಾದರೂ ರೆಕ್ಕೆ ಅರಳಿಸಿ ಅದರ ಬಣ್ಣಗಳನ್ನು ಮೆರಸುವ ನವಿಲಿನಂತೆ ಕವಿಯೂ, ಕೋಣಗಳಾದರೂ ಚಿಂತೆಯಿಲ್ಲ, ತನಗೆ ಪ್ರೇಕ್ಷಕರು ಬೇಕೆನ್ನುತ್ತಾನೆ.

— ನೀಟ್ಸೆ

ಪತ್ರಿಕಾವೃತ್ತಿ

# ಅವನದೊಂದು ಪ್ರತ್ಯೇಕೋದ್ಯಮ

ಬೆಳಿಗ್ಗೆ ಎದ್ದೊಡನೆ ಜಗತ್ತಿನ ಸುದ್ದಿಗಳನ್ನು ಹೊತ್ತ ಪತ್ರಿಕೆಯನ್ನೋದದಿದ್ದರೆ ಬಾಳೇ ಅಸಹ್ಯವೆನಿಸುವ ಯುಗವಿದು. ಆದರೆ ಈ ಸುದ್ದಿಗಳು ಹೇಗೆ ಬರುತ್ತವೆ, ಅವನ್ನು ಕಲೆಹಾಕುವವರ, ಆಕಾರ ಕೊಟ್ಟು ಹಂಚುವವರ, ಆರಿಸಿ ತಲೆಬರಹಗಳೊಡನೆ ಮುದ್ರಿಸುವವರ ಬಾಳು ಹೇಗಿದೆ? ಅದರಲ್ಲಿನ ಸಿಹಿ - ಕಹಿಗಳೇನು, ಮೋಜು - ನೋವುಗಳೇನು? ಒಂದು ಮಾತಂತೂ ನಿಜ— ಊರಿಗೊಂದು ದಾರಿಯಾಗಿದ್ದರೆ ಈ ಪೋರರ ದಾರಿಯೇ ಬೇರೆ. ಅವರಿಗೆ ಹಗಲಿರುಳಿಲ್ಲ, ಶುಭಾಶುಭವಿಲ್ಲ. ಜಗತ್ತು ಅವರ ಪಾಲಿಗೆ ಕೇವಲ ಸುದ್ದಿಗಳಿಂದ ತುಂಬಿದ ಒಂದು ನಿರ್ವಿಕಾರ ಸ್ಥಳ.

ಲೇಖಕರು: ಶ್ರೀ. 'ಶೇಷಣ್ಣ', ಮುಂಬಯಿ

---

ಆ ಶನಿವಾರ ಬೆಳಗಿನ ಸಮಯವಿದ್ದರೂ ವಾತಾವರಣ ಅತ್ಯಂತ ನಿರುತ್ಸಾಹವಾದುದಿತ್ತು. ಮುಂಬಯಿಯ ಬೀದಿಗಳನ್ನೆಲ್ಲ ಮಸಣಗಟ್ಟೆಯ ಸದ್ದು ಆವರಿಸಿತ್ತು. ಪ್ರತಿಯೊಬ್ಬನ ಮುಖವೂ ಏನನ್ನೋ ಕಳೆದುಕೊಂಡವರಂತೆ ಹುಚ್ಚು ಸುರಿಯುತ್ತಿತ್ತು. ಹೌದು, ಅದರ ಹಿಂದಿನ ಸಂಜೆ ಕ್ರೂರಕರ್ಮಿಯೊಬ್ಬನ ಗುಂಡಿನೇಟಿಗೆ ಮಹಾತ್ಮನು ಬಲಿಯಾಗಿದ್ದ. ಹೋಟೇಲುಗಳಲ್ಲಿಯ ಬಾನುಲಿಗಳು ರಾಮನಾಮವನ್ನು ಹೊರಹೊಮ್ಮಿಸುತ್ತಿದ್ದವು. ಅದರ ಮಧ್ಯೆ, ಡಿವೆುಲೋನ ಹೆಡಸು ಧ್ವನಿಯಲ್ಲಿ ಗಾಂಧೀಜಿಯ ಅಂತಿಮ ಯಾತ್ರೆಯ ವರದಿಯನ್ನು ಕೇಳಲು ಜನ ಗುಂಪುಗುಂಪಾಗಿ ನಿಂತುಕೊಂಡಿತ್ತು.

ಆ ಸಮಯಕ್ಕೆ ಹಾರ್ನಬಿ ರಸ್ತೆಯಗುಂಟ ತರುಣನೊಬ್ಬ ನಡೆದಿದ್ದ. ತಲೆಗೂದಲು ಕೆದರಿದೆ. ಕನ್ನಡಕದ ಹಿಂದಿನ ಕಣ್ಣುಗಳಲ್ಲಿ ಒಂದು ಬಗೆಯ ಸೌಮ್ಯ ಕಾತರವಿದೆ. ಅವನ ನಡಿಗೆಯ ರೀತಿ ಅವನ ಉದ್ದೇಶರಹಿತ ಓಡಾಟವನ್ನು ಸೂಚಿಸುತ್ತಿತ್ತು. ಆಗ ಅವನ ಬದಿಯಲ್ಲಿ ಒಂದು ಕಾರು ಹಾದುಹೋಯಿತು. ಇವನನ್ನು ಕಂಡು ತುಸು ಮುಂದೆ ಹೋಗಿ ನಿಂತಿತು. ಅದರಲ್ಲಿದ್ದ ಶೀವಿಯ ಗೃಹಸ್ಥನೊಬ್ಬ ಇವನೊಟ್ಟಿಗೆ ಮಾತಾಡಿದಾಗ ಈತ ಗೋಣು ಹಾಕಿದ. ಕಾರು ಮುಂದೆ ಹೊರಟಿತು.

ಮರುದಿನ ನಸುಕಿನಲ್ಲಿ ಈ ತರುಣ ದಿಲ್ಲಿಗೆ ಹೊರಟಿದ್ದ ವಿಮಾನವೊಂದರಲ್ಲಿ ಸುಖಾಸೀನನಾಗಿದ್ದ. ಒಳ್ಳೆಯ ವೇಷಭೂಷಣದಲ್ಲಿದ್ದ ಆತ ಡರ್ಬಿ ರೇಸಿನಲ್ಲಿ ಗೆದ್ದವನಂತೆ ಕಾಣುತ್ತಿದ್ದ.

ಇದೇನು ಯವನಯಾಮಿನೀ ಕತೆಯಲ್ಲಿನ ಆರಂಭವಲ್ಲ, ಅಥವಾ ಪತ್ತೇದಾರಿ ಕತೆಯೊಂದರ ಪುಟವಲ್ಲ. ಪತ್ರಿಕೋದ್ಯಮಿಯೊಬ್ಬನ ಜೀವನದಲ್ಲಿ ನಡೆಯಬಹುದಾದ ನೈಜ ಘಟನೆ. ಆ ತರುಣನೊಬ್ಬ ಪತ್ರಿಕೋದ್ಯಮಿ. ಅವನನ್ನು ನಿಲ್ಲಿಸಿ ಮಾತನಾಡಿದವ ಮುಂಬಯಿ ಪತ್ರಿಕೆಯೊಂದರ ಒಡೆಯ. ಹಿಂದಿನ ದಿವಸ ಆ ತರುಣನಲ್ಲಿ ತುಸು ಚಿಲ್ಲರೆ ಹೊರತು ಹೆಚ್ಚಿನ ಹಣವಿರಲಿಲ್ಲ. ಆದರೆ ಮರುದಿನ ಬೆಳಿಗ್ಗೆ, ದಿಲ್ಲಿಯಿಂದ ತ್ರಿವೇಣೀ ಸಂಗಮದ ವರೆಗಿನ ಬಾಪೂಜಿಯ ಅಸ್ಥಿಯಾತ್ರೆಯಲ್ಲಿ ಭಾಗವಹಿಸಿ 'ಪೇಪರಿ' ನಲ್ಲಿ ವರದಿ ಮಾಡುವುದಕ್ಕಾಗಿ 'ನೌಕರಿ' ಯೊಂದನ್ನು ಗಳಿಸಿದ್ದ. ನೌಕರಿ! ಆ ನೌಕರಿ ಹನ್ನೆರಡು ದಿನದ್ದು ಮಾತ್ರ.

ಇದೊಂದು ಸಣ್ಣ ಘಟನೆಯಲ್ಲಿ ಅವನ ಜೀವನವನ್ನು ಕುರಿತ ಒಂದು ನಿಲುವು ಸಿಗುವಂತಿದೆ. ಮತ್ತೆ ಆ ಹನ್ನೆರಡು ದಿನದ ನಂತರದ ನಿರುದ್ಯೋಗವೂ ಅವನ ಪ್ರವೃತ್ತಿಯ ಫಲವೆಂಬುದನ್ನು ಮರೆಯಬಾರದು. ಹೊರಗಿನವರಿಗೇನೋ ಇದೊಂದು ರಮ್ಯ ಹಾಗೂ ಸಾಹಸಿ ಜೀವನವೆನ್ನಿಸಬಹುದು. ಆದರೆ, ಅದು ಹೊಸದಾಗಿ ಶಾಲೆಗೆ ಹೋಗುವ ಹುಡುಗ ಬಸ್ಸಿನ ಡ್ರೈವರ್ ಅಥವಾ ಕಂಡಕ್ಟರನಲ್ಲಿ ಕಾಣುವ ರಮ್ಯತೆ.



ಈ ಪತ್ರಿಕೋದ್ಯಮಿ ಎಂಬವನ ತೆರೆಯ ಹಿಂದಿನ ಕಾರ್ಯ ಅಥವಾ ಜೀವನ ಯಾವ ಬಗೆಯದು? ಅವರಲ್ಲಿ ಅನೇಕ ನಮೂನೆಗಳು ಇವೆ. ವೃತ್ತಪತ್ರಿಕೆಯೊಂದರ ಕಚೇರಿಯಲ್ಲಿ ಸುದ್ದಿಗಾರರಿರುತ್ತಾರೆ. ಉಪಸಂಪಾದಕರು, ಮುಖ್ಯೋಪಸಂಪಾದಕರು, ಸಹಸಂಪಾದಕರು, ಸಂಪಾದಕರು ಇವರಲ್ಲದೆ ಈಚೆಗೆ 'ಕಾರ್ಯನಿರ್ವಾಹಕ ಸಂಪಾದಕ' ನೆಂಬ ವಿಶಿಷ್ಟ ಹೆಸರೂ ಕೇಳಬರುತ್ತಿದೆ. ಸುದ್ದಿಗಾರನು ಹೊರಬಿದ್ದು ಹತ್ತು ಕಡೆ ತಿರುಗಿ ಸುದ್ದಿಗಳನ್ನು ಸಂಗ್ರಹಿಸುವವ. ಉಪಸಂಪಾದಕನು ಅದಕ್ಕೊಂದು ಆಕಾರ ಕೊಟ್ಟು ಪ್ರಕಟನಾಯೋಗ್ಯವಾಗುವಂತೆ ಮಾಡುವವ. ಸಹಸಂಪಾದಕನ ಕೆಲಸ, ಆಗಾಗ ಸಂಪಾದಕೀಯಗಳನ್ನು ಬರೆಯುವುದು, ಮೇಲ್ವಿಚಾರಣೆಯನ್ನು ಮಾಡುವುದು— ಇದಕ್ಕೆ ಮೇಸ್ತ್ರಿಯ ಕೆಲಸವೆಂದರೂ ಸರಿಯೇ. ಇವರೆಲ್ಲರ ಕೆಲಸದ ಹೊಣೆ ಸಂಪಾದಕನ ಮೇಲೆ. ಇನ್ನು ಕಾರ್ಯನಿರ್ವಾಹಕ ಸಂಪಾದಕನ ಕೆಲಸ ಒಟ್ಟಿನಲ್ಲಿ ಕಾರ್ಯವನ್ನು ಮುಂದರಿಸಿಕೊಂಡು ಹೋಗುವುದೆನ್ನಬೇಕು. ಈತನೊಬ್ಬನನ್ನು ಬಿಟ್ಟರೆ ಸಾಮಾನ್ಯವಾಗಿ ಉಳಿದವರೆಲ್ಲ ಅವಸರದ ಅಂಚಿನಲ್ಲಿ ತೂಗಾಡುವವರಾಗಿದ್ದು, ಅವರಲ್ಲಿ ವೇಳೆ ಹಾಗೂ ಪತ್ರಿಕಾಸ್ಥಳಕ್ಕಾಗಿ ಕ್ಷಣಶಃ ಹೋರಾಟ ನಡೆದಿರುತ್ತದೆ. ಸಂಕ್ಷಿಪ್ತತೆಯ ಕಡೆ ಒಬ್ಬರ ಗಮನವಿದ್ದರೆ, ಇನ್ನೊಬ್ಬರಿಗೆ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದರ ಕಡೆಗೆ ಮಿದುಳು ಓಡುತ್ತಿರುತ್ತದೆ. ಸುದ್ದಿಗಾರನಾದವನು ಹೇಗೆ, ಎಲ್ಲಿ ಎಂದು ಯೋಚಿಸದೇ ಸುದ್ದಿಗಳಿಗಾಗಿ ಧಾವಿಸಬೇಕಾಗುತ್ತದೆ. ಅದಕ್ಕೆಯೇ, 'ವಿಶ್ವಸನೀಯವಾಗಿ', 'ಅತ್ಯಂತ ವಿಶ್ವಸನೀಯವಾಗಿ', 'ನಂಬಲರ್ಹವಾದ ಕಡೆಗಳಿಂದ' ಅಥವಾ 'ಪ್ರಸಿದ್ಧಿ ಶಾಖೆಯಿಂದ' ಇಲ್ಲವೆ 'ಸರಕಾರೀ ವಕ್ತಾರನಿಂದ' ಸುದ್ದಿಗಳು ತಿಳಿದುಬರುವವು. ಉಪಸಂಪಾದಕನು ಹೀಗೆ ಬಂದ ಸುದ್ದಿಗಳಿಗೊಂದು ಆಕಾರ ಕೊಟ್ಟು, ಅಚ್ಚಿನ ಕೋಣೆಗೆ ಕಳಿಸುವಾಗ ಯಾವಾಗಲೂ ರೇಲ್ವೆ ಗಾಡಿಗಳ ವೇಳೆ, ಅಥವಾ ಎದುರಾಳಿ ದಿನಪತ್ರಿಕೆಯಲ್ಲಿ ನಡೆಯುವ ಅದೇ ಕೆಲಸ, ಇವು ಅವನ ಮೆದುಳು ಹಾಗೂ ಕೈಗಳನ್ನು ಎಚ್ಚರಿಸುತ್ತಲೇ ಇರುತ್ತವೆ. ಸಂಪಾದಕೀಯವನ್ನು ಬರೆಯುವವನಿಗೆ ದಿನವೆಲ್ಲ ತನ್ನ ವಿಷಯದ್ದೇ ಚಿಂತೆ. ಅದು ಸಾರ್ವಜನಿಕದಲ್ಲಿ ಮಹತ್ವವುಳ್ಳದ್ದೋ ಅಥವಾ ಪ್ರಚಲಿತ ವಿಷಯದ ಮೇಲಿನ ವ್ಯಾಖ್ಯೆಯಾದರೋ ಆಗಿರಬೇಕಲ್ಲ.

ಇದು ವೃತ್ತಪತ್ರಿಕೆಯಲ್ಲಿನ ನಿತ್ಯಕರ್ಮ. ಆದರೆ ಸುದ್ದಿ ಸಂಸ್ಥೆಗಳಲ್ಲಿ ಇಷ್ಟು ತಾಪದಾಯಕವಾದ ಕೆಲಸವಿಲ್ಲ. ಸುದ್ದಿಗಳಿಗೆ ಸ್ವಂತ ಅಭಿಪ್ರಾಯಗಳ ಬಣ್ಣಬಳಿಯುವ ಕಟ್ಟಳೆ ಇಲ್ಲ. ಪತ್ರಿಕೆಗಳಿಗಾಗಿ ಸುದ್ದಿಗಳನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಸರಣಗೊಳಿಸುವುದು ಅವುಗಳ ಮುಖ್ಯ ಕೆಲಸ. ಸಂಸ್ಥೆಯು ಎಲ್ಲ ಬಗೆಯ ರಾಜಕೀಯ ಅಭಿಮತಗಳಿಗೂ ಆಸ್ಪದ ಕೊಡಬೇಕಾಗುವುದರಿಂದ, ಯಾವುದೇ ಬಗೆಯ ಊಹನೆಯಾಗಲಿ 'ಹೀಗೆ ಆದೀತು' ಎಂಬ ಸಂಶಯರೂಪಿ ಪ್ರಶ್ನಾರ್ಥಕವಾಗಲಿ ನಡೆಯುವುದಿಲ್ಲ. "ವಿಶ್ವಸನೀಯವಾಗಿ ತಿಳಿದು ಬರುವ" ವಾರ್ತೆ

ಗಳಿಗೂ ಅವಕಾಶ ಕಡಿಮೆಯೇ. ಹಾಗೆಂದು ಈ ಸಂಸ್ಥೆಯ ಸುದ್ದಿಗಾರನಾದರೂ ತನ್ನ ಸುದ್ದಿಗಳನ್ನು ಕೇಂದ್ರ ಕಚೇರಿಗೆ ಕಳಿಸುವಾಗ ನಿಶ್ಚಿತ ಮಾಡಿಕೊಂಡೇ ಕಳಿಸುವುದು ಎಷ್ಟರ ಮಟ್ಟಿಗೆ ಸಾಧ್ಯ? ಜಗತ್ತಿನ ಪ್ರಮುಖ ಸುದ್ದಿ ಸಂಸ್ಥೆಗಳಲ್ಲೊಂದೂ ಕಾನುನವೆಲ್ತನಲ್ಲೇ ಅತಿದೊಡ್ಡದೂ ಆದ ರಾಯಟರ್ ಸುದ್ದಿ ಸಂಸ್ಥೆಯಲ್ಲಿ ಸುದ್ದಿಗಳ ಉಗಮುಗಳಿಗೆ ಒಂದು ಕ್ರಮುವನ್ನು ಗೊತ್ತುಪಡಿಸಲಾಗಿದೆ. ಸುದ್ದಿಗಾರನು '....ಎಂದು ತಿಳಿದು ಬಂದಿದೆ' ಎಂಬುದಾಗಿ ಹೇಳಿದರೆ, ಒಬ್ಬ ಛೋಟಾ ಅಧಿಕಾರಿಯು ಸುದ್ದಿಯನ್ನು ಹೊರಗೆಡವಿದನೆಂದು ಅದರ ಅರ್ಥ. 'ವಿಶ್ವಸನೀಯವಾಗಿ ತಿಳಿದು ಬಂದಿದೆ' ಎಂದರೆ ದೊಡ್ಡ ಅಧಿಕಾರಿಯೊಬ್ಬ ಅದನ್ನು ಒದವಿಸಿದನೆಂದು ತಿಳಿಯಬೇಕು. ಇನ್ನು ಸುದ್ದಿಯು 'ನಿಶ್ಚಿತವಾಗಿ' ತಿಳಿದು ಬಂದರೆ ಅದು, ಸಂಬಂಧಪಟ್ಟ ಮುಖ್ಯಾಧಿಕಾರಿಯಿಂದಲೇ ಬಂದುದಾಗಿ ಭಾವಿಸಬೇಕು. ಉಗಮವನ್ನು ಸೂಚಿಸದೇ ಪ್ರಸಿದ್ಧಿಶಾಖೆಯುವರು ಪ್ರಕಟಸಹೇಳಿದ ವಾರ್ತೆ 'ಅಧಿಕೃತವಾಗಿ ತಿಳಿದು ಬಂದಿದೆ' ಎಂದಾಗುತ್ತದೆ.

★

ನಮಗೆ ತಿಳಿದಿರುವಂತೆ ನಮ್ಮ ದೇಶದಲ್ಲಿ ಸುದ್ದಿಗಳಲ್ಲಿ ರಾಜಕೀಯ 'ರಗಳೆ'ಗೇ ಹೆಚ್ಚು ಪ್ರಾಧಾನ್ಯವಷ್ಟೆ. ಅದಕ್ಕೆ ಕಾರಣ ೧೯೪೭ರ ವರೆಗೆ ರಾಜಕೀಯ ಸ್ವಾತಂತ್ರ್ಯಕ್ಕಾಗಿ ನಾವು ಹೋರಾಡುತ್ತಿದ್ದುದು. ವಿದೇಶೀಯ ಸರಕಾರದ 'ಕಾರಭಾರ'ವನ್ನು ಟೀಕಿಸುವಲ್ಲಿ ನಾ ಮುಂದು, ನೀ ಮುಂದು ಎನ್ನುತ್ತ ಎಲ್ಲರೂ ಕೈಕೂಡಿಸಿದರು. ಬೀದಿಯ ನಾಯಿಯನ್ನು ಹೊಡೆಯುವಾಗ ಬಣ್ಣದ ಕೋಲೇಕೆ ಬೇಕು? ಎಂಬ ಗಾದೆಯಿದೆಯಲ್ಲ. ಹಾಗೆಯೆ ಇದು. ಮನಬಂದ ಹಾಗೆ, ಲೆಕ್ಕಣಿಕೆ ಓಡಿದಹಾಗೆ ಬೈದ ಬರವಣಿಗೆ ಸಹಿತ ಉತ್ತಮುಮಟ್ಟದ ಪತ್ರಿಕಾಲೇಖನವೆನ್ನುವ ಸ್ಥಿತಿ ಬಂದಿತ್ತು, ಆಗ. ಬಹುಶಃ ಇಂದು, ಬರಿಯ ವಿಘಾತಕ ವಿಮರ್ಶೆಯಲ್ಲಿ ತೊಡಗಿರುವ ಪತ್ರಿಕೋದ್ಯಮಿಗಳ ಬಹುಸಂಖ್ಯೆಗೆ ಇದೇ ಕಾರಣವೆಂದು ತೋರುತ್ತದೆ.

ಏನಿದ್ದರೂ ಆಗ, ಉಜ್ವಲ ರಾಷ್ಟ್ರಾಭಿಮಾನದ ಪತ್ರಿಕೋದ್ಯಮಿಗಳು ಇದ್ದರು. ಯಾಕೆ, ಸ್ವತಃ ಗಾಂಧೀಜಿ ತಮ್ಮನ್ನು ಒಬ್ಬ ಪತ್ರಿಕೋದ್ಯಮಿ ಎಂದು ಕರೆದುಕೊಳ್ಳುತ್ತಿದ್ದರು. ಅಸಹಕಾರ ಹಾಗೂ ಸತ್ಯಾಗ್ರಹದ ದಿನಗಳಲ್ಲಿ ಅವರೊಬ್ಬ ಆದರ್ಶ ಪತ್ರಿಕೋದ್ಯಮಿಯೆನ್ನಬೇಕು. ಸ್ವಾತಂತ್ರ್ಯ ಸಂಗ್ರಾಮುವೆಂದರೆ, ಸತ್ಯದ ಹೋರಾಟವೆಂದೇ ತಿಳಿದಿದ್ದ ಅವರು ಮುದ್ರಿತ ಶಬ್ದದ ಸಾಮರ್ಥ್ಯವನ್ನು ಚೆನ್ನಾಗಿ ಅರಿತಿದ್ದರು. ರಾಜಕೀಯ ಸಭೆಗಳಲ್ಲಿ ಪತ್ರಿಕೋದ್ಯಮಿಗೆ ಆಗ ಅಗ್ರಸ್ಥಾನವಿದ್ದಿತು. ಮತ್ತು ಆವನು ನಾಡಿನ ನಾಯಕರ ವಿಶ್ವಾಸಪಾತ್ರನಾಗಿದ್ದನು. ಪತ್ರಿಕೋದ್ಯಮಿಯ ಬರವಣಿಗೆಯನ್ನು "ಹಾಗಲ್ಲ ಇದು, ಶುದ್ಧ ಸುಳ್ಳಿದೆ" ಎಂದು ಈಗಿನಂತೆ ಅಲ್ಲಗಳೆಯುವ ಸಂದರ್ಭವೇ ಇರಲಿಲ್ಲ. ಸ್ವಾತಂತ್ರ್ಯಸಂಗ್ರಾಮ ಕಾಲದಲ್ಲಿ ಪತ್ರಿಕೋದ್ಯಮಿ ಒಬ್ಬ ಪ್ರಭಾವಶಾಲಿ ಪ್ರಚಾರಕನೆಂದು ತಿಳಿಯಲಾಗಿತ್ತು.

ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಪರಿಸ್ಥಿತಿ ಬದಲಾಗಿದೆ. ನುರಿತ ಪತ್ರಿಕೋದ್ಯಮಿಗಳು ಅಧಿಕಾರ ಹಾಗೂ ಹೊಣೆಗಾರಿಕೆಯ ಕ್ಷೇತ್ರಗಳಲ್ಲಿ ಪ್ರವೇಶಿಸಿದ್ದಾರೆ. ಇಂದು ಜನತಾಸರಕಾರವಿದ್ದರೂ ಪತ್ರಿಕೋದ್ಯಮಿ ತಾನು ಬರೆದ ಟೀಕೆ ಟಪ್ಪಣಿಗಳೆಲ್ಲ ಸರಕಾರೀ ಅಭಿಪ್ರಾಯಕ್ಕೆ ವಿರುದ್ಧವೂ ಸಾರ್ವಜನಿಕ ಅಭೀಷ್ಟದಂತೆಯೂ ಇವೆಯೆಂಬುದಾಗಿ ತಿಳಿದಿದ್ದಾನೆ.

★

ಪತ್ರಿಕೋದ್ಯಮಿಯ ಅಭಿಪ್ರಾಯ ಅಥವಾ ವರದಿಯನ್ನು ಅಲ್ಲಗಳೆಯುವ ಮಾತು ಇಲ್ಲಿ ಬರುತ್ತದೆ. ಒಂದು ವಾರ್ತೆಯು ಇಂಥ ಒಂದು ರೀತಿಯಲ್ಲಿ ಬರಬೇಕಾಗಿ ಸರಕಾರೀ ವಕ್ತಾರನ ಅಪೇಕ್ಷೆಯಾಗಿರುತ್ತದೆ. ಅದರಂತೆ ಆ ವಿಷಯದಲ್ಲಿ ತಮಗೆಷ್ಟು ಹೇಳಲಿಕ್ಕಿದೆಯೋ, ಅಷ್ಟೇ ಸುದ್ದಿಯನ್ನು ವರದಿಗಾರನಿಗೆ ಒಪ್ಪಿಸುತ್ತಾನೆ. ತನ್ನ ವೃತ್ತಿಯಲ್ಲಿ ಸಾಕಷ್ಟು ಪಳಗಿದ್ದರೆ ಪತ್ರಿಕೋದ್ಯಮಿಗೆ ವರದಿಯಲ್ಲಿ ಬಾರದಿದ್ದ ವಿಷಯವೂ ಗೋಚರವಾಗುತ್ತದೆ. ಇಲ್ಲಿಂದ ತಿಕ್ಕಾಟದ ಆರಂಭ, ಯಾವ ವಿಷಯುವನ್ನು ತನ್ನ ಊಹನೆಯಿಂದ ತುಂಬಿರುವನೋ ಅದಕ್ಕೆ ತಕ್ಕ ಹಿನ್ನೆಲೆಯಿದ್ದುದಾದರೆ ಅವನದೇ ಮೇಲುಗೈಯಾಗುತ್ತದೆ.

ಈ ಮಾತಿಗೆ ಉದಾಹರಣೆಯಾಗಿ, ಕೆಲ ದಿನಗಳ ಹಿಂದೆ, ಮುಂಬಯಿಯ ಎಲ್ಲ ವೃತ್ತಪತ್ರಿಕೆಗಳಲ್ಲಿ, ರೇಲ್ವೆ ಅಧಿಕಾರಿಗಳು ತ್ರೈಮಾಸಿಕ ಸೀಜನ್ ಪಾಸುಗಳನ್ನು ರದ್ದುಗೊಳಿಸುವರೆಂಬ ವರ್ತಮಾನ ಪ್ರಕಟವಾಯಿತು. ಈ ವಾರ್ತೆಯನ್ನು ಬಹಿರಂಗಪಸಿಡಿದವರು, ರೇಲ್ವೆಯಲ್ಲಿ ಒಬ್ಬ ಹಿರಿಯ ಅಧಿಕಾರಿಗಳು. ಆದರೆ ತಮ್ಮ ಹೆಸರನ್ನು ಕಾಣಿಸಬಾರದಾಗಿ ವರದಿಗಾರರಿಗೆ ಹೇಳಿದ್ದರು. ಮತ್ತದರ ಬಗ್ಗೆ ರೇಲ್ವೆಯುವರ ಪ್ರಕಟನೆಯೇನೂ ಹೊರಟರಲಿಲ್ಲ. ಅಂತೂ ಸುದ್ದಿ ಹೊರಬಂದಾಗ, ಈ ವಿಚಾರದಲ್ಲಿ ಸಾರ್ವಜನಿಕ ವಿರೋಧ ಅತಿಯಾದಾಗ, ಒಂದು ಬೆಳಗಿನಲ್ಲಿ ಅಧಿಕಾರಿಗಳು ಪ್ರಕಟನೆಯೊಂದನ್ನು ಹೊರಡಿಸಿ ಯಾವ ಕಾಲಕ್ಕೂ ಈ ಪಾಸಿನ ರದ್ದತಿಯ ವಿಚಾರ ತಮ್ಮ ಮುಂದೆ ಬಂದಿಲ್ಲವಾಗಿ ಸಾರಿದರು. ಹೀಗೆ ಮೊದಲು ನೀರಿನ ನೆಲೆ ತಿಳಿಯುವುದಕ್ಕೆ ಕೋಲನ್ನು ಇಳಿಬಿಟ್ಟು ನೋಡಿದರು. ಯಾವಾಗ ಜನತಾ ವಿರೋಧ ಕಂಡುಬಂದಿತೋ ತುಸು ಎಚ್ಚರ ವಹಿಸಿದರು. ಆದರೆ ಗಾಳಿಯ ವರ್ತಮಾನ ಕೊಟ್ಟನೆಂದು ಪತ್ರಿಕೋದ್ಯಮಿ ಸಾರ್ವಜನಿಕ ಅವಿಶ್ವಾಸಕ್ಕೆ ಪಾತ್ರನಾಗಬೇಕಾಯಿತು.

ಚುನಾವಣೆ ಮುಗಿದಾದ ಮೇಲೆ ಇನ್ನೊಂದು ಇಂಥ ಘಟನೆ ನಡೆಯಿತು. ಶ್ರೀಯುತರೊಬ್ಬರಿಗೆ ಭಾರತದ ಉಪಾಧ್ಯಕ್ಷರಾಗಬೇಕೆಂಬ ಆಶೆಯಿದ್ದಿತು. ಆದರೆ ಸ್ವಲ್ಪ ಗೌರವದ ಮನುಷ್ಯರಾದುದರಿಂದ, ತಮ್ಮ ಪಕ್ಷದ ಮೀಟಂಗಿನಲ್ಲಿ ನಾಯುಕನಿಗೆ ತಮ್ಮ ಹೆಸರನ್ನು ಸೂಚಿಸುವ "ಉತಾವಳಿ"ಗೆ ಹೋಗಲಿಲ್ಲ. ಆಗ ಒಂದು ಕೆಲಸ ಮಾಡಿದರು. ಸುದ್ದಿಗಾರನೊಬ್ಬನನು ಕರೆದು ತಾವು ಉಪಾಧ್ಯಕ್ಷರಾಗಬಹುದೆಂಬ ನಿರೀಕ್ಷೆಯಿದೆ ಎಂದರು. ಅದರ ಇಂಗಿತವನ್ನು ಸರಿಯಾಗಿಯೇ ಅರಿತ ಸುದ್ದಿಗಾರನು ಜಾಗಟೆಯನ್ನು ಹಿಡಿದುಕೊಂಡು ಬಂದು "ಶ್ರೀಮಾನ್..ಅವರು ಭಾರತದ ಅಧ್ಯಕ್ಷರಾಗುವ ನಿರೀಕ್ಷೆ ಇದೆ" ಎಂಬ ಕತೆಯ ಕೋಲನ್ನು ನೀರಲ್ಲಿ ಇಳಿಬಿಟ್ಟ. ಎಲ್ಲಿಂದ ಬಂತು ಸುದ್ದಿ? ಯಥಾಪ್ರಕಾರ "ವಿಶ್ವಸನೀಯ ವರ್ತುಲ"ಗಳಿಂದ ಬಂದಿತ್ತು. ಉಪಾಧ್ಯಕ್ಷನ ಕುರ್ಚಿಯನ್ನು ಅಲಂಕರಿಸುವ ಆಸೆಯಿರುವಾಗ ಅಧ್ಯಕ್ಷಸ್ಥಾನವೆಂಬ ಅತ್ಯುಕ್ತಿಯ ಮಾತು ಬಂತಲ್ಲ ಎಂದು ಶ್ರೀಯುತರಿಗೆ ಏನೇ ಅನ್ನಿಸಿರಲಿ, ಅದ

ರಿಂದ ಅವರಿಗೆ ಪ್ರಯೋಜನವಾಯಿತು. ಅವರ ಪಕ್ಷದ ನಾಯಕ ಈ ವಿಷಯವನ್ನೋದಿ ಅವರನ್ನು ಕರೆದು, "ನಿಮ್ಮನ್ನೇನು ಅಧ್ಯಕ್ಷರನ್ನಾಗಿ ಮಾಡುವ ಯೋಚನೆ ಇಲ್ಲ. ನಿಮಗಾಗಿ ಬೇರೊಂದು ಮನ್ನಣೆಯ ಜಾಗ ಕಾದಿರಿಸಿದೆ" ಎಂದು ಹೇಳಿದ. ಆಯಿತಲ್ಲ, ವರದಿಗಾರ ಆ ಕತೆಯ ಡಂಗುರ ಸಾರದಿದ್ದಲ್ಲಿ ಶ್ರೀಯುತರು ಸಹಿತ, ಇತರ ಕೆಲವರಂತೆ, ಸ್ಟೇಟ ಕೌನ್ಸಿಲ್ಲಿನಲ್ಲಿಯೋ ಪಾರ್ಲಿಮೆಂಟಿನ ಮೇಲ್ಮನೆಯಲ್ಲಿಯೋ ಉಳಿಯುವಂತಾಗುತ್ತಿತ್ತು.



ಸುದ್ದಿಗಳನ್ನು ವರದಿಗಾರನು ಎಲ್ಲಿಂದ ತರುವ? ಚುನಾವಣೆ ಮುಗಿದ ದೇಶದಲ್ಲಿ ಏನೂ ವಿಶೇಷ ನಡೆದುದಿಲ್ಲದಿರಬಹುದು; ಶಾಸನ ಸಭೆಗಳ ಅಧಿವೇಶನಗಳೂ ಕೊನೆಗೊಂಡು ರಾಜಕಾರಣಿಗಳೂ ಊರಿಗೆ ಮರಳಿರಬಹುದು; ಜಾಗತಿಕ ರಂಗದಲ್ಲಿ ಯುದ್ಧದ ಸದ್ದು ಅಡಗಿರಬಹುದು; ಆದರೂ ಸುದ್ದಿಗಾರನು ಸುದ್ದಿಗಳನ್ನು ದೊರಕಿಸಲೇಬೇಕು. ಮೋಜೆಂದರೆ, ವರ್ಷದ ಎಲ್ಲ ದಿನಗಳಲ್ಲೂ ದಿನದ ಎಲ್ಲ ತಾಸುಗಳಲ್ಲೂ ಸುದ್ದಿ ಅವನಿಗೆ ದೊರಕಿಯೇ ದೊರಕುತ್ತದೆ.

ಸಾರ್ವಜನಿಕದ ಉನ್ನತ ಮತ್ತು ಅವನತ ವ್ಯಕ್ತಿಗಳ ಪರಿಚಯ ಚೆನ್ನಾಗಿ ಇದ್ದವನೇ ನಿಜವಾದ ಪತ್ರಿಕೋದ್ಯೋಗಿ ಎನ್ನಬಹುದು. ಅವನಿಗೆ ಜನರ ಪರಿಚಯ ಹಾಗೂ ಅವರ ಗತ ಇತಿಹಾಸ ತಿಳಿದಿರುತ್ತದೆ. ಅದನ್ನವಲಂಬಿಸಿ, ತನ್ನ ಸುದ್ದಿಯ ಉಗಮ ಸ್ಥಾನಗಳಿಗೆ "ವಿಶ್ವಸನೀಯವಾಗಿ, ನಂಬಲರ್ಹವಾದ ಕಡೆಗಳಿಂದ", ಎಂದೆಲ್ಲ ನಾಮಕರಣ ಮಾಡುತ್ತಾನೆ. ಇಷ್ಟಾಗಿ ಅವನ ವರದಿಯಲ್ಲಿ ಆಯ್ಕೆ ಎನ್ನುವುದುಂಟು. ಒಂದು ವಿಷಯದ ಮೇಲೆ ಅವನ ಬಳಿ ಒಂದು ಹೊರೆ ಮಾಹಿತಿ ದೊರಕಿರಬಹುದು. ಅದೆಲ್ಲವನ್ನೂ ಹೊರಹಾಕಲಾಗುವುದಿಲ್ಲ. ಸುಪ್ರಸಿದ್ಧ ದೈನಿಕವಾದ 'ಹಿಂದೂ'ವಿನ ಸಂಸ್ಥಾಪಕರು ಒಂದು ಸಲ, ತನ್ನ ಮಾಹಿತಿಯಲ್ಲಿ ಎಷ್ಟನ್ನು ಹೊರಗೆ ಹಾಕಬೇಕೆಂಬುದನ್ನು ಅರಿತವನೇ ಉತ್ತಮ ಪತ್ರಿಕಾ ವ್ಯವಸಾಯಿ ಎಂದು ಕಿರಿಯರಿಗೆ ಸಲಹೆಯನ್ನು ನೀಡಿದ್ದರು.

ವರದಿಗಾರನು ಹಲವು ವೇಳೆ ಸುದ್ದಿಯ ಬೆನ್ನಟ್ಟಿ ಹೋಗಿ, ಅದನ್ನು ಹಿಡಿದು ತರುವ ಪ್ರಸಂಗವಿರುತ್ತದೆ. ಉದಾಹರಣೆಗೆ ಸರಕಾರೀ ಅಧಿಕಾರಿಯೊಬ್ಬ ಹೀಗೆಯೇ ಒಂದು ಕಾಂಟ್ರ್ಯಾಕ್ಟಿನಲ್ಲಿ ಸಿಕ್ಕಿಬಿದ್ದನೆಂಬ ವರ್ತಮಾನವನ್ನು ಯಾರೊ ಆಡಿದ್ದುದು, ಅಥವಾ ಆಡಿಕೊಳ್ಳುತ್ತಿದ್ದುದು ಇವನ ಕಿವಿಗೂ ಬೀಳುತ್ತದೆ. ಅಗಲೇ ಆ ಸುದ್ದಿಯನ್ನು ಅವನು ಕೊಡಲಾಗುವುದಿಲ್ಲ. ಇನ್ನಷ್ಟು ವಿವರಗಳನ್ನು ತಿಳಿಯಲೆಳಸುತ್ತಾನೆ. ಹಾಗೆಂದು ನೇರವಾಗಿ ಸಂಬಂಧಪಟ್ಟವರ ಬಳಿಗೇ ಹೋಗುವುದುಂಟೆ? ಇಲ್ಲಿ ಪತ್ರಿಕೋದ್ಯಮಿ ಪತ್ತೇದಾರನಾಗಿ ಒಂದು, ಎರಡು, ಮೂರು ಸಲ ಅದನ್ನು ಹಿಂಜಿ ನೋಡುವ; ತನಗೆ ತಿಳಿದ ಸಂಗತಿಯಲ್ಲಿ ಸಾಕಷ್ಟು ಸತ್ಯತೆ ಇದೆಯೆಂದು ಅರಿತುಕೊಂಡು, ಪ್ರಸಂಗ ಬಂದರೆ, ಪುರಾವೆಗಳೂ ಬೆಂಬಲಕ್ಕಿವೆಯೆಂಬುದನ್ನು ಗಮನಿಸಿ, ಕೊನೆಗೊಮ್ಮೆ ಅದನ್ನು ಹೊರಡಿಸುವನು.

ಸುದ್ದಿ ಸಂಗ್ರಹ ಈಗ ಮೊದಲಿನಷ್ಟು ತಾಪದಾಯಕವಿಲ್ಲ. ಮೂವತ್ತು ವರ್ಷಗಳ ಹಿಂದೆ ದಕ್ಷಿಣ ಭಾರತದಲ್ಲೊಂದು ರೈಲಿನ ಅಪಘಾತವಾದಾಗ, ವರದಿಗಾರನೊಬ್ಬ – ಈಗವರು ಭಾರತದ ಆದ್ಯ ಪತ್ರಿಕೋದ್ಯಮಿ – ಮದ್ರಾಸಿನಿಂದ ೧೪ ಮೈಲು ನಡೆದುಕೊಂಡು ಆ ಜಾಗ ಮುಟ್ಟಿ, ವರದಿ ಮಾಡಿದುದಿದೆ. ಈಗಾಗಿದ್ದರೆ ಮದ್ರಾಸಿನಲ್ಲೇ ಕುಳಿತು ರೇಲ್ವೆಯ ಪ್ರಸಿದ್ಧಿ ಶಾಖೆಗೆ ಟೆಲಿಫೋನ್ ಮಾಡಿ, ಅಂಥ ದುರ್ಘಟನೆಯ ವಿವರಗಳನ್ನು ದೊರಕಿಸಿ ವರದಿ ಮಾಡುತ್ತಾನೆ. ಅದರಿಂದಾಗಿ ರೇಲ್ವೆಯ ಅಧಿಕಾರಿಗಳೊಂದಿಗೆ ಘಟನೆಯ ಕಾರಣ ಮತ್ತು ಸತ್ಯತೆಯ ಸಂಬಂಧವಾಗಿ ಜಗಳ ತಪ್ಪುತ್ತದೆ. ಮತ್ತೆ, ಆ ಸ್ಥಳಕ್ಕೇನೇ ಹೋದರೆ, ಅಧಿಕಾರಿಗಳ ಹೇಳಿಕೆ, ಕೆಲವೆಡೆ ನಂಬುವಂತಹದಲ್ಲವಾಗಿ ಗೋಚರವಾದೀತು! ಸಾರ್ವಜನಿಕ ದೃಷ್ಟಿಯಲ್ಲಿ ಈ ಕ್ರಮ ತಪ್ಪಾದುದಿರಬಹುದು. ಆದರೆ ಹಾಗೆ ನಡೆದುಬಂದಿದೆ. ಯುದ್ಧಕಾಲ ಮುಗಿದ ನಂತರ ಸುದ್ದಿಗಳಲ್ಲಿ, ಅಧಿಕಾರೀ ಪ್ರಕಟನೆ, ಹಾಗೂ ಸ್ವಂತದ ವರದಿ ಇವುಗಳಲ್ಲಿನ ಅಂತರ ಗೊತ್ತಾಗುವುದಿಲ್ಲ.

ಇದಕ್ಕೆ ಇನ್ನೊಂದು ಕಾರಣವೆಂದರೆ, ಅಂದು ಘಟನೆಯೊಂದರ ಸತ್ಯತೆಯ ಕಡೆ ಹೆಚ್ಚು ಗಮನವಿಟ್ಟಿದ್ದ ಸಂಪಾದಕ ಪತ್ರಿಕಾ ಸಂಸ್ಥೆಯಲ್ಲಿ ಮುಖ್ಯನಾಗಿದ್ದ. ಇಂದು ಆ ಪಟ್ಟ ಅದರ ಮೆನೇಜಿಂಗ್ ಡೈರೆಕ್ಟರನದಾಗಿದೆ. ಜಾಹಿರಾತುಗಳನ್ನು ದೊರಕಿಸುವಲ್ಲಿ ಇವನ ದುಡಿಮೆ; ದೇಶದ ರಾಜಕಾರಣದಲ್ಲಿಯೂ ಇವನಿಗೆ ಆಸಕ್ತಿ. ಇದನ್ನುಳಿದು ಸ್ವಂತದ ಹಿತಸಾಧನೆಗಳು ಕೆಲವಿರುತ್ತವೆ; ಸರಕಾರದೊಡನೆ ಅನವಶ್ಯಕ ಘರ್ಷಣೆಗಳಿಗೆ ಅದಷ್ಟು ಅವಕಾಶ ಕೊಡುವುದಿಲ್ಲ. ಇನ್ನು ಸರಕಾರದ ಕರಧೋರಣೆ, ಅಥವಾ ಆಯಾತ ಧೋರಣೆ, ಮೇನೆಜಿಂಗ್ ಡೈರೆಕ್ಟರನಿಗೆ ಅನುಕೂಲವಾಗಿರದಿದ್ದರೆ, ಸರಕಾರದ ವಿರುದ್ಧ ಕತ್ತಿ ಮಸೆಯುವ ಮಾತು ಬೇರೆ.



ಸುದ್ದಿ ಸಂಗ್ರಹ ಸುಲಭವಾದೀತು-ಒಮ್ಮೊಮ್ಮೆ ಅದರ ಪ್ರಸರಣ ಮಾತ್ರ ಬಲು ಜೀವ

ತಿನ್ನುತ್ತದೆ. ಟೆಲಿಗ್ರಾಫ್, ಟೆಲಿಫೋನ್ ಮುಂತಾದ "ಟೆಲಿ" ಯಂತ್ರಗಳಿಂದ ಜಗತ್ತಿನ ಅಂತರ ಬಹಳಷ್ಟು ಕಿರಿದಾಗಿದೆ. ಇಪ್ಪತ್ತು ವರ್ಷಗಳ ಹಿಂದೆ ಇಂಗ್ಲೆಂಡು ಭಾರತದಿಂದ ೩೦ ದಿನಗಳ ದಾರಿಯಾಗಿತ್ತಲ್ಲವೆ? ಈಗ ೩೦ ಮಿನಿಟು ಸಾಕು. ೬ನೆಯ ಜಾರ್ಜ ದೊರೆ ತೀರಿಕೊಂಡ ಎಂಟನೆಯ ನಿಮಿಷಕ್ಕೆ ಆ ಸುದ್ದಿ ಮುಂಬಯಿಗೆ ತಲುಪಿತ್ತು. ಅದರಂತೆ ಗಾಂಧೀಜಿಯು ಕಗ್ಗೊಲೆಯ ವಾರ್ತೆ ಲಂಡನ್ನಿಗೆ ಮುಟ್ಟಿದ್ದು ೫॥ ಮಿನಿಟಿನಲ್ಲಿ ಮಾತ್ರ.

ಯು. ಪಿ. ಎ.ದ ನುರಿತ ಸುದ್ದಿಗಾರನಾದ ವೆಬ್ ಮಿಲರ್ (ಈಗ ದಿವಂಗತ) ತನ್ನ ಒಂದು ಪುಸ್ತಕದಲ್ಲಿ ಅಬಿಸೀನಿಯದ ಯುದ್ಧದ ಸುದ್ದಿಯನ್ನು ಕೊಡುವಲ್ಲಿ ಇತರ ಸುದ್ದಿಗಾರರನ್ನು ೨೫ ತಾಸುಗಳಷ್ಟು ಹಿಂದೆ ಹಾಕಿದುದನ್ನು ವಿವರಿಸಿದ್ದಾನೆ. ೧೯೩೫ರಲ್ಲಿ ಮುಸೋಲಿನಿಯು ಆ ಬಡ ದೇಶದ ಮೇಲೆ ಶಸ್ತ್ರವನ್ನೆತ್ತಿದಾಗ, ಅಲ್ಲಿ ಸುಮಾರು ಏಳೆಂಟು ಜನ ಮಾತ್ರ ವಿದೇಶಿ ಸುದ್ದಿಗಾರರಿದ್ದರು. ಎಲ್ಲರ ಕೈಯಲ್ಲಿಯೂ ಯುದ್ಧವಾರ್ತೆಯ ವಿವರಗಳಿದ್ದವು. ಆದರೆ ಅದರ ಶೀಘ್ರ ಮರುಪ್ರಸಾರದ ಬಗೆಯೇ ಇರಲಿಲ್ಲ. ಅಂಚೆಯ ಕಟ್ಟೆಗಳು ಕೇಬಲ್ಲುಗಳಿಂದ ತುಂಬಿಹೋಗಿದ್ದವು. ವೆಬ್ ಮಿಲರ್‌ನ ಮೆದುಳಲ್ಲಿ ಒಂದು ಮಿಂಚು ಸೆಳೆಯಿತು. ಅವನು ತುಸು ದೂರದಲ್ಲಿನ ಒಂದು ಸಣ್ಣ ಅಂಚೆಕಟ್ಟೆಗೆ ಧಾವಿಸಿ, ಅಲ್ಲಿಯ ಗುಮಾಸ್ತನ ಗೆಳೆತನ ಬೆಳೆಸಿ, ತನ್ನ ತಂತಿ ಕೂಡಲೇ ಹೋಗುವಂತೆ ನೋಡಿಕೊಂಡನು. ಜಗತ್ತಿಗೆ ಅಬಿಸೀನಿಯದ ಯುದ್ಧವಾರ್ತೆಯನ್ನು ತಿಳಿಸುವಲ್ಲಿ ಮಿಲರ್ ಮೊದಲಿಗನಾಗಿದ್ದ.

ಡಿ. ಆರ್. ಮಂಕೇಕರ ಇಂಫಾಲದಲ್ಲಿ ರಾಯಟರ್ ಸುದ್ದಿಗಾರರಾಗಿದ್ದಾಗ, ಇಂಥದೇ ಒಂದು ಘಟನೆ ನಡೆಯಿತು. ಆಗ ಇಂಫಾಲನ್ನು ಜಪಾನೀಯರು ಸುತ್ತುಗಟ್ಟಿದ್ದರು. ಈ ಸುದ್ದಿಯನ್ನು ಅಧಿಕಾರಿಗಳು ಪ್ರಕಟಿಸಗೊಟ್ಟಾರೆಯೇ? ಅದಕ್ಕೆ ಮಂಕೇಕರ ಒಂದು ಉಪಾಯವನ್ನು ಹೂಡಿದರು. ಆ ಸ್ಥಳದ ಭೌಗೋಲಿಕ ಚಕಬಂದಿಯನ್ನು ಕೊಟ್ಟು, ಜಪಾನಿಗಳು ಮಿತ್ರಸೇನೆಯ ಗಡಿಯಿಂದ ಎಷ್ಟು ದೂರ ಇರುವರೆಂದು ವಿವರಿಸಿದರು. ಸೇನ್ಸಾರಿನ ಅಧಿಕಾರಿಗಳಿಗೆ ಅದು ತಿಳಿಯಲಿಲ್ಲ. ಇಂಫಾಲದ ಭೂಗೋಲವನ್ನು ಕೊಡುವ ಈ ಸುದ್ದಿಗಾರನಿಗೆಲ್ಲೋ ಮಬ್ಬು ಕವಿದಿದೆ ಎಂದವರು ಭಾವಿಸಿರಬೇಕು. ಅಂತೂ ಅವರ ಕತ್ತರಿಯಿಂದ ಪಾರಾಗಿ, ತಂತಿ ಮುಂಬಯಿಗೆ ಬಂತು. ಕಳ್ಳನಿಗೇ ಗೊತ್ತು ಕಳ್ಳನೊಬ್ಬನ ಗತ್ತು, ಎನ್ನೋಣವೇ. ಸುದ್ದಿ ಸಂಸ್ಥೆಯಲ್ಲಿನ ಸಂಪಾದಕನು ನಕ್ಷೆಯೊಂದನ್ನು ಮುಂದಿಟ್ಟುಕೊಂಡು, ಮಂಕೇಕರನ ವಿವರಣೆಯ ಅರ್ಥವನ್ನು ಸರಿಯಾಗಿಯೆ ಮಾಡಿಕೊಂಡ. ಮತ್ತು ಇಂಫಾಲದ ಪತನ ಅನಿವಾರ್ಯವೆಂಬುದಾಗಿ ವಾರ್ತಾಪ್ರಸಾರ ಮಾಡಿದ. ನಂತರ ಎರಡು ದಿನಗಳ ಮೇಲೆ ಯಥಾಪ್ರಕಾರ ಸರಕಾರೀ ಸುದ್ದಿ ಬಂತು; ಇತರ ವರದಿಗಾರರ ವಿವರಗಳೂ ಬಂದುವು. ಆದರೆ 'ರಾಯಟರ'ದವರಿಗೆ ಈ ವಾರ್ತೆಯನ್ನು ೪೮ ತಾಸುಗಳಿಗೆ ಮುಂಚೆಯೇ ತಿಳಿಸುವ ಹೆಮ್ಮೆಯ ಪ್ರಮೇಯ ಒದಗಿತು.

೧೯೧೮ರಲ್ಲಿ ಒಂದು ಸಲ 'ಲಂಡನ ಟೈಮ್ಸ್' ಪತ್ರಿಕೆಯ ಸುದ್ದಿಗಾರನೊಬ್ಬ, ಮೊದಲ ಮಹಾಯುದ್ಧದ ಮಹತ್ತರ ಶಾಂತಿ ಒಪ್ಪಂದದ ಕುರಿತು ದುಂಡು ಮೇಜಿನ ಪರಿಷತ್ತು ನಡೆದಾಗ ಮೇಜಿನ ಅಡಿಯಲ್ಲಿ ಅಖಂಡ ೪ ತಾಸು ಅಡಗಿಕೊಂಡಿದ್ದನಂತೆ! ಅದರ ಮೂಲಕ ಅವನಿಗೆ ವರ್ಸಾಯಿ ಒಪ್ಪಂದದ ವಿವರಗಳೆಲ್ಲ ತಿಳಿಯುವಂತಾಯಿತು. ಆದರಿಂದ, ಇತರರಿಗಿಂತ ೪ ದಿನ ಮುಂಚೆಯೇ ಅದರ ಸಾರವನ್ನು ಪ್ರಕಟಿಸಿದ 'ಲಂಡನ ಟೈಮ್ಸ್'ದ ಕೀರ್ತಿ ಮುಗಿಲೆತ್ತರವಾಯಿತು.



ಸುದ್ದಿಗಾರರಿಗಿಂತ ಸಂಪೂರ್ಣ ಈ ತುದಿಯಲ್ಲಿ ನಿಂತವನೆಂದರೆ ಸಹಸಂಪಾದಕ, ಯಾವಾಗಲೂ ಮೇಜಿನ ಮುಂದೆ ಕುಳಿತು, ತಿದ್ದುವ, ಕಾಟುಹಾಕುವ ಕೆಲಸದಲ್ಲಿರುವ ಈ ವ್ಯಕ್ತಿಗೆ ಸಣ್ಣ ಶಬ್ದಗಳು, ಸಣ್ಣ ವಾಕ್ಯಗಳು ಮತ್ತು ದೊಡ್ಡ ಟೈಪುಗಳದೇ ಚಿಂತೆ. ಸುದ್ದಿಗಾರರ ಮೇಲೆ ಅವನ ಹಿಡಿಶಾಪ ಯಾವಾಗಲೂ ಇದ್ದುದೇ. ಒಂದು ಸಲಕ್ಕೆ ಆತ ಜಗತ್ತೆಲ್ಲ ವಾರ್ತೆಗಳಿಂದ ತುಂಬಿಹೋಗಿದೆ ಎಂದು ಗೋಗರೆದರೆ, ಇನ್ನೊಂದು ಸಲ ಜಗತ್ತು ನಿಂತೇಹೋಯಿತೇ ಎಂದು ಗೊಣಗುವ. ಆದರೆ ಒಂದು, ಅವನ ಕೈಂಕರ್ಯದಲ್ಲಿ ಸ್ಥಿತಪ್ರಜ್ಞತೆ ಎದ್ದುಕಾಣುವಂತಹದಿರುತ್ತದೆ. ಎಂಥದೇ ಮಹಾಘಟನೆ ಸಂಭವಿಸಿರಲಿ, ಅವನ ಮೆದುಳು ಎಂದೂ ಸೆಟೆದುನಿಲ್ಲುವುದಿಲ್ಲ. ಉತ್ಸುಕತೆ ಇಲ್ಲ, ಕಾತರತೆ ಇಲ್ಲ, ಆನಂದವೂ ಇಲ್ಲ, ಅದರಲ್ಲಿ ದುಃಖವೂ ಇಲ್ಲ. ಈ ಸುದ್ದಿಗೆ ಎಷ್ಟು ಕಾಲಂನ ಶೀರ್ಷಿಕೆ ಆದೀತು, ಮತ್ತೆ ಆ ಶೀರ್ಷಿಕೆ ಸುದ್ದಿಯ ಸಾರರೂಪವಾಗಿದ್ದು ಓದುಗರು ಮುಂದೆ ಓದಲನುವಾಗವಂತಿರಬೇಕು. ಮುಖ್ಯ ಸುದ್ದಿ ಯಾವುದಾಗಬೇಕು, ಬಾಕ್ಸಗಳಲ್ಲಿ ಯಾವವುಗಳನ್ನು ಹಾಕಬೇಕು ಎಂದೆಲ್ಲ ಮಾತ್ರ ಅವನ ಯೋಚನೆ. 'ಫರೂಕನ ಸಿಂಹಾಸನತ್ಯಾಗ'ದ ಸುದ್ದಿ ಬರುತ್ತದೆ, ಅವನಿಗದು ಒಳ್ಳೆಯ ಏಳು ಕಾಲಂನ ಸುದ್ದಿ. ಬರ್ನಾರ್ಡ್ ಶಾ ತೀರಿಕೊಳ್ಳುತ್ತಾನೆ, ಅವನಿಗದು ಮಹತ್ವದ್ದಾಗಿ ಕಂಡರೆ ಮಹಾವ್ಯಕ್ತಿಯೊಬ್ಬನ ಸಾವು ಎಂಬುದಲ್ಲ; ಓದುಗರಿಗೆ ಅದನ್ನು ಎಷ್ಟು ಚೆನ್ನಾಗಿ ಕೊಡಲು ಸಾಧ್ಯ, ಎಂಬುದಾಗಿ. ಅವನ ಆಸ್ಥೆ ಅಲ್ಲಿಗೆ ಮುಗಿಯಿತು.

ಮೊನ್ನೆ ಮೊನ್ನೆ ಒಂದು ಸಂಗತಿ ಜರುಗಿತು. ಭಾರತದ ಪ್ರಮುಖ ಸುದ್ದಿ ಸಂಸ್ಥೆಯ ವಾರ್ತಾಸಂಪಾದಕರು, ರಾತ್ರಿ ತಮ್ಮ ಮನೆಯಿಂದ ಆಫೀಸಿಗೆ ಟೆಲಿಫೋನ್ ಮಾಡಿದರು. ಹೆಲ್ಸಿಂಕಿಯಿಂದ ಓಲಿಂಪಿಕ್ಸಿನಲ್ಲಿಯ 'ಹಾಕೀ' ಪಂದ್ಯಾಟದ ಫಲಿತಾಂಶ ತಿಳಿದುಬರಬೇಕಿತ್ತು. ಸಮಸ್ತ ಭಾರತವೇ ಅದಕ್ಕಾಗಿ ಕಾದಿತ್ತಷ್ಟೆ. ಇವರ ಚಿಂತೆ ಏನೆಂದರೆ ಸುದ್ದಿ ಹೊತ್ತಿಗೆ ಸರಿಯಾಗಿ ಭಾರತಕ್ಕೆ ಬಂತೇ? ಬಂದಮೇಲೆ ಅದಕ್ಕೊಂದು ರೂಪಕೊಟ್ಟು ರಾತ್ರಿ ಡ್ಯೂಟಿಯಲ್ಲಿದ್ದ 'ಸಹಸಮ್' ಸರಿಯಾದ ಹೊತ್ತಿಗೆ ಅದನ್ನು ಪತ್ರಿಕೆಗಳಿಗೆ ಕಳಿಸಿದನೇ ಇಲ್ಲವೆ, ಎಂದು. ಅಂತೆಯೇ 'ಹೆಲ್ಸಿಂಕಿಯ ಸುದ್ದಿ ಬಂತೇ?' ಎಂದು ಅವನಿಗೆ ಕೇಳಿದರು.

"ಹೌದು."

"ಕಳಿಸಲಾಯಿತೋ?"

"ಹೌದು, ಎದುರಾಳಿ ಸುದ್ದಿ ಸಂಸ್ಥೆಗಿಂತ ಅರ್ಧ ತಾಸು ಮುಂಚೆಯೇ ಹೋಗಿದೆ."

ಮುಗಿಯಿತು! ಅದನ್ನು ಕೇಳಿ ಶ್ರೀಯುತರು ರಿಸೀವರನ್ನು ಕೆಳಗಿಟ್ಟುಬಿಟ್ಟರು. ಭಾರತಕ್ಕೇ ವಿಶಿಷ್ಟವಾದ ಅಂಥ ಸುದ್ದಿಯಲ್ಲಿ ಯಾರು ಗೆದ್ದರು

ಎಂದು ತಿಳಿಯುವ ಕುತೂಹಲದ ನರಗಳು ಅವರಲ್ಲಿ ಸತ್ತುಹೋಗಿದ್ದವು !

★

ಎರಡು ವರ್ಷಗಳ ಹಿಂದೆ ಪತ್ರಿಕೋದ್ಯೋಗಿಗಳ ಒಂದು ಸಮ್ಮೇಳನದಲ್ಲಿ ಭಾಷಣಮಾಡುತ್ತ ನಾಡಿನ ಹಿರಿಯ ತಲೆಮಾರಿನ ಒಬ್ಬ ಪತ್ರಿಕಾಕರ್ತರು "ನಿಜವಾದ ಪತ್ರಿಕೋದ್ಯಮಿಯು ವಿಧುರನಾದರೂ ಆಗಿರಬೇಕು; ಬ್ರಹ್ಮಚಾರಿಯಾದರೂ ಇರಬೇಕು" ಎಂದರು. ವಿಧುರ, ಬ್ರಹ್ಮಚಾರಿ ಆಗಿರದೆ ಯಶಸ್ವಿ ಪತ್ರಿಕಾಕರ್ತರಾದವರು ಇದನ್ನು ಹೇಗೆ ಪರಿಭಾವಿಸಬೇಕು? ಆದರೆ ಅಧ್ಯಕ್ಷರಿಗೆ ಈ ಉದ್ಯಮದ ಯಶಸ್ಸಿನ ಹಿನ್ನೆಲೆಯನ್ನು ಕೊಡುವ ಉದ್ದೇಶವಿತ್ತು. ಹೆಂಡತಿ, ಮಕ್ಕಳನ್ನು ಕಟ್ಟಿಕೊಂಡು ತನ್ನೆಲ್ಲ ವೇಳೆಯನ್ನು ಬೇಕಾದ ಸಮಯದಲ್ಲಿ ಇದಕ್ಕೆ ವಿನಿಯೋಗಿಸುವದು ಸಾಧ್ಯವಾಗುವದಿಲ್ಲ ಎಂಬುದೇ ಅವರ ಹೇಳಿಕೆಯ ತಿರುಳೆನ್ನಬೇಕು. ನಡುರಾತ್ರಿಯಲ್ಲಿ ವಿಮಾನ ಅಪಘಾತವೊಂದು ಘಟಿಸಬಹುದು. ಪ್ರಮುಖ ವ್ಯಕ್ತಿಯೊಬ್ಬ ಅಪವೇಳೆಯಲ್ಲಿ ತೀರಿಕೊಳ್ಳಬಹುದು. ಆಗ ಪತ್ರಿಕೋದ್ಯಮಿ ಹೆಂಡತಿ, ಅಥವಾ ಸಂಸಾರದ ಕಡೆ ನನಗೆ ಗಮನ ಕೊಡಲಿಕ್ಕುಂಟು ಎನ್ನುವಂತಿಲ್ಲ. ಅದೇ ಮಾನ್ಯರು ಮದುವೆಯಾಗಿ ಜೀವನದಲ್ಲಿ ನೆಲೆಗೊಂಡ ಪತ್ರಿಕೋದ್ಯಮಿಗಳನ್ನು ಹೇಗೆ ತಿಳಿಯಬೇಕು ಎಂಬುದಾಗಿ ಏನೂ ಹೇಳಲಿಲ್ಲ. ತುಸು ಸೂಕ್ಷ್ಮದ ಮಾತಾಯಿತಿದು. ಅವರಿಗೆ ಯಾರ ಮನಸ್ಸನ್ನೂ ನೋಯಿಸುವ ಇಚ್ಛೆ ಇರಲಿಲ್ಲವೆನ್ನಬಹುದು.

ಪತ್ರಿಕೋದ್ಯಮಿಗೊಂದು ಮನೆಮಾತು ಇರಲಿ ಬಿಡಲಿ, ಎಲ್ಲರಂತೆ ಅವನದೂ ಒಬ್ಬ ಸಭ್ಯ ಗೃಹಸ್ಥನ ಬಾಳ್ವಿಕೆ ಆಗಿರಲಿ, ಇಲ್ಲದಿರಲಿ, ಲೋಕಸತ್ತೆಯುಳ್ಳ ದೇಶದಲ್ಲಿ ಅವನಿಗೆ ಖಂಡಿತ ಮಹತ್ವದ ಸ್ಥಾನವಿದೆ. ಸಾರ್ವಜನಿಕ ಜೀವನದಲ್ಲಿ ಅವನಿಗೆ ಆಯಕಟ್ಟಿನ ಆಸನ ದೊರಕಿದೆ. ಜನತೆ ಪ್ರೇಕ್ಷಕವರ್ಗವಾಗಿರುತ್ತ, ರಾಜಕಾರಣಿಗಳು ಹಾಗೂ ಅಧಿಕಾರಗಳೇ ನಟರಾಗಿರುವ ಸಾರ್ವಜನಿಕ ರಂಗಭೂಮಿಯ ಮೇಲೂ ಗ್ರೀನ್‌ರೂಮಿನ ಒಳಗೂ ಹೋಗುವ ಅಧಿಕಾರ ಈತನಿಗಿದೆ.

ವಿಚಾರದ ಅಭಿವ್ಯಕ್ತಿಯ ಸ್ವಾತಂತ್ರ್ಯಕ್ಕಾಗಿ ಜಗತ್ತಿನ ಎಲ್ಲ ರಾಷ್ಟ್ರಗಳಿಗಿಂತ ಇಂಗ್ಲೆಂಡಿಗೆ ಹೆಚ್ಚಿನ ಮನ್ನಣೆ ಇದೆಯಷ್ಟೆ. ಮೊದಲ ಮಹಾಯುದ್ಧದ ಕಾಲದಲ್ಲಿ ಎಸ್ಕ್ವಿಥ್ ಮುಖ್ಯಮಂತ್ರಿಯಾಗಿದ್ದಾಗ, ಲಾರ್ಡ ನಾರ್ಥಕ್ಲಿಫ್ ಸರಕಾರವನ್ನು ಉರುಳಿಸಿದನಷ್ಟೆ. ಅಲ್ಲಿ ಯಾವ ಸೈನ್ಯವಾಗಲಿ, ನಾವಿಕಪಡೆಯಾಗಲಿ ಸಾಧನವಾಗಿರಲಿಲ್ಲ. ನಾರ್ಥಕ್ಲಿಫ್ 'ಡೇಲೀ ಮೇಲ್' ಮತ್ತು 'ಲಂಡನ ಟೈಮ್ಸ್'ಗಳ ಸೂತ್ರಗಳನ್ನು ಹಿಡಿದುಕೊಂಡಿದ್ದ, ಅಷ್ಟೆ. ಮುಂದಿನ ಒಬ್ಬ ಮುಖ್ಯಮಂತ್ರಿ, ಓರ್ವ ಪತ್ರಿಕಾಸಂಪಾದಕನಿಗೆ "ಹೊಣೆಗಾರಿಕೆಯಿಲ್ಲದ ಅಧಿಕಾರ ನಿಮ್ಮದು. ಅದರ ದುರುಪಯೋಗ ಮಾಡುತ್ತಿದ್ದೀರಿ" ಎಂದು ಹೇಳಿದರಂತೆ. ಅಧಿಕಾರವಿರುವುದು ನಿಜ. ಜೊತೆಗೆ ಹೊಣೆಗಾರಿಕೆಯೂ ಖಂಡಿತವಾಗಿ ಇದೆ. ಓದುಗರೇ ಅವನ ಒಡೆಯರು. ಅವರ ಅಭಿರುಚಿಗೆ ತಕ್ಕಂತೆ ಪತ್ರಿಕೋದ್ಯೋಗಿಗಳು ನಡೆಯಬೇಕಾಗುತ್ತದೆ.

★

ಪತ್ರಿಕೋದ್ಯಮಿಯ ಜೀವನದ ವೈಚಿತ್ರ್ಯವನ್ನು ಕುರಿತು ಬರೆಯಬೇಕೆಂಬುದು ಈ ಲೇಖಕನಿಗೆ ಒಪ್ಪಿಸಿದ ಕೆಲಸವಾಗಿತ್ತು. ಪ್ರಾರಂಭವೇನೋ ಸರಿಯಾಯಿತು. ಮುಂದೆ ಅವನ ಜೀವನದ ಬಗೆ ತಿಳಿಯದೆಯೇ, ಎಲ್ಲೆಲ್ಲೋ ಸುತ್ತಾಡಿದಂತಾಯಿತು. ಇದೇ ಅವನ ಜೀವನದ ಬಗೆ ಎನ್ನಬೇಕು. ಯಾಕೆ, ಏನು ಎಂಬುದರ ಸ್ಪಷ್ಟ ಕಲ್ಪನೆ ಇಲ್ಲದೆ ಕಾಲದಲ್ಲಿ ಸುತ್ತಾಡುವುದೇ ಅವನ ಬಾಳಿನ ಸೂತ್ರ. ಇಷ್ಟುಮಾತ್ರ ನಿಜ, ಎಲ್ಲರಂತೆ ಅವನು ಸಾಮಾನ್ಯ ಜೀವನ ನಡೆಸಲಾರ! ವಿನೋದಿಗೆಳೆಯನೊಬ್ಬನ ಮಾತಿನಲ್ಲಿ ಹೇಳುವುದಾದರೆ ಅವನದು 'ಪ್ರತ್ಯೇಕೋದ್ಯಮ'. ಅವನ ಊಟ, ನಿದ್ದೆ ಎಲ್ಲವೂ ಅಪವೇಳೆಯಲ್ಲಿ. ಸಾಕಷ್ಟು ಗಳಿಕೆ ಸಾಧ್ಯವಾದರೂ ಕಿಸೆ ಯಾವಾಗಲೂ ಬರಿದು. ಅದು ತನ್ನ ಹಣೆಬರೆಹವೆನ್ನುತ್ತಾನಲ್ಲದೆ, ಅದನ್ನು ನೀಗಿಸಲಾರ. ಬಾಳಿನಲ್ಲಿ ಬೇಕೆಂದರೆ ಸ್ಥಾನ, ಮನ್ನಣೆ ಇದೆ. ಆದರೆ ಅದನ್ನು ಉಳಿಸಿಕೊಳ್ಳುವುದಿಲ್ಲ.

ಅವನ ಬಾಳ್ವೆಯ ವೈಚಿತ್ರ್ಯವೇನೆಂದರೆ, ಇತರರಾರೇ ಆಗಲಿ, ಅವರ ಹಕ್ಕು ಹಾಗೂ ಸ್ಥಾನಗಳನ್ನು ಎತ್ತಿಹಿಡಿದು ಹೋರಾಡಬಲ್ಲ, ಆದರೆ ತನ್ನದನ್ನಲ್ಲ! ಅವನಿಗದು ಬರುವುದಿಲ್ಲ. ಅದಕ್ಕಾಗಿ ಅವನಿಗೆ ವೇಳೆಯಿಲ್ಲ, ವ್ಯವಧಾನವೂ ಇಲ್ಲ. ಈ ಬಗೆಯ ಜೀವನ ನಡೆಸುವುದಕ್ಕೆ ಬಹುಶಃ ಇದೇ ಕಾರಣವಿರಬಹುದು. ಅವನದು ಇತರರಿಗಾಗಿ ಮತ್ತು ಇತರರೊಂದಿಗೆ ಜೀವನ.

---

## ಠೋಕ ದರದಲ್ಲಿ

# ಸಾಯಕಲ್‌ಗಳು



ಎಲ್ಲ ಕಂಪನಿಗಳ ಇಂಗ್ಲೀಷ ಸಾಯಕಲ್‌ಗಳು ಹಾಗೂ ಬಿಡಿಭಾಗಗಳು ಠೋಕದರದಲ್ಲಿ ಮಾರಾಟಕ್ಕೆ ದೊರೆಯುವವು. ಹೆರ್ಕ್ಯುಲಸ್, ಫಿಲಿಪ್ಸ, ಬಿ. ಎಸ್. ಎ. ರ್‍ಯಾಲೆ ಇತ್ಯಾದಿಗಳ ಬೆಲೆಗಳ ಬಗ್ಗೆ ನಮ್ಮಲ್ಲಿ ವಿಚಾರಿಸಿರಿ. ಮಾರಾಟಗಾರರು ಪತ್ರವ್ಯವಹಾರ ಮಾಡಬೇಕು.

**ದಿ ಆರ್ಕಾಡಿಯಾ ಜನರಲ್ ಟ್ರೇಡ ಆ್ಯಂಡ ಇಂಡಸ್ಟ್ರೀಜ ಲಿ.**

೨೧೧ ಚರ್ನಿರೋಡ, ಮುಂಬಯಿ ೪.

---

**ಹೊಸ ಪುಸ್ತಕವು** — — — — **ಇದೀಗ ಹೊರಟಿದೆ!**



# ಕನ್ನಡ ಕನ್ನಡ ಶಬ್ದಕೋಶವು



ಬರೆಹಗಾರರು : ಎಚ್. ವಿ. ರಮಾಕಾಂತರಾವ, ಬಿ. ಎ. (ಆನರ್ಸ)

**ಬೆಲೆ : ಕೇವಲ ೬ ರೂಪಾಯಿ ಮಾತ್ರ.**

ಈ ಹೊಸ ಪುಸ್ತಕದಲ್ಲಿ ಸುಮಾರು ೩೫೦೦೦ ಮೇಲ್ಪಟ್ಟು ಶಬ್ದಗಳು ಅವೆ. ಮತ್ತು ಇದರಲ್ಲಿ ಸಾಧಾರಣವಾಗಿ ೨ ಲಕ್ಷ ಅರ್ಥ ವಿವರಣೆಗಳಿಂದ ಕೂಡಿದೆ. ಈ ಕೋಶದಲ್ಲಿ ತಮಿಳ, ತೆಲಗು, ಸಂಸ್ಕೃತ, ಹಿಂದಿ ಮತ್ತು ಎಲ್ಲ ಹಳೆಗನ್ನಡ ಶಬ್ದಗಳಿಗೆ ಅರ್ಥಗಳನ್ನು ಬಹು ವಿಶಾಲವಾಗಿ ಬರೆಯಲ್ಪಟ್ಟಿದೆ. ಸುಮಾರು ೬೬೫ ಪುಟಗಳಷ್ಟು ಪುಸ್ತಕ ದೊಡ್ಡದಾಗಿದೆ. ಮತ್ತು ಮಂಗಳೂರಿನ ಅಂದವಾದ ಮುದ್ರಣದಿಂದ ಪ್ರಿಂಟಾಗಿರುವದು. ಇಂಥ ಅತ್ಯುತ್ತಮವಾದ ಗ್ರಂಥವು ಬೇರೊಂದು ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು.

— ಇದು ಅಲ್ಲದೆ ನಮ್ಮ ಸ್ವಂತ ಪ್ರಕಾಶನದ ಹೊಸ ಧಾರ್ಮಿಕ ಪುಸ್ತಕಗಳು —

| | | | | | |
|---|---|---|---|---|---|
| ೧) | ಶನಿ ಮಹಾತ್ಮೆ | ೦—೨—೦ | ೬) | ಭಕ್ತವರೇಣ್ಯ ಪುರಂದರ ದಾಸರ ಪದಗಳು | ೦-೧೦—೦ |
| ೨) | ವೆಂಕಟೇಶ ಸ್ತೋತ್ರ | ೦—೫—೦ | ೭) | ಸಂಧ್ಯಾವಂದನೆ | ೦—೩—೦ |
| ೩) | ಮನೋಬೋಧೆ | ೦—೫—೦ | ೮) | ಗಜೇಂದ್ರಮೋಕ್ಷ | ೦—೪—೦ |
| ೪) | ಶ್ರೀರಾಮ ರಕ್ಷಾ | ೦—೫—೦ | ೯) | ಶಂಕರಾಚಾರ್ಯ ಚರಿತ್ರ | ೦—೬—೦ |
| ೫) | ವಿಷ್ಣು ಸಹಸ್ರ ನಾಮಾವಳಿ (ಟೀಕಾ ಸಹಿತ) | ೦—೬—೦ | ೧೦) | ಬದರಿಯಾತ್ರೆ | ೦—೮—೦ |

ಈ ಪ್ರಕಾರ ಹೊಸ ಪುಸ್ತಕಗಳು ಹೊಸದಾಗಿ ತಯಾರಾಗಿವೆ. ಇದು ಅಲ್ಲದೆ ಇತರ
ಯಾವತ್ತೂ ಶಾಲೋಪಯೋಗಿ ಪುಸ್ತಕಗಳು, ಕತೆ, ಕಾದಂಬರಿ ಪುಸ್ತಕಗಳು, ಸ್ಟೇಶನರಿ ಸಾಮಾನುಗಳು
ಯಾವಾಗಲೂ ಯೋಗ್ಯ ಬೆಲೆಗೆ ಸಿಗುತ್ತವೆ. ವ್ಹಿ. ಪಿ. ಯಿಂದ ಬೇಡುವವರು
ತಮ್ಮ ಪೂರ್ಣ ವಿಳಾಸ ಮತ್ತು ೧/೪ ಹಣ ಮುಂಗಡ ಕಳಿಸಬೇಕು.

ಪುಸ್ತಕಗಳು ಠೋಕಾಗಿಯೂ, ಚಿಲ್ಲರೆಯಾಗಿಯೂ ಸಿಗುವ ಒಂದೇ ಸ್ಥಳವು.

ಪ್ರಕಾಶಕರು :

**ಕೆ. ಎಸ್. ಕುಲಕರ್ಣಿ, ಬುಕ್ ಸೇಲರ್ಸ ಆ್ಯಂಡ ಪಬ್ಲಿಶರ್ಸ**

ಸ್ಟೇಶನ್ ರೋಡ, ಹುಬ್ಬಳ್ಳಿ

ಪತ್ರಿಕೆಯನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಪ್ರೆಸ್ಸಿನಲ್ಲಿ "ಲೋಕಶಿಕ್ಷಣ ಟ್ರಸ್ಟಿ"ನ ಪರವಾಗಿ ಹ. ರಾ. ಮೊಹರೆಯವರು ಮುದ್ರಿಸಿ ಪ್ರಕಟಿಸಿದರು.

Regd. No. B. 3148 | LICENCE No. 3 Licenced to post without prepayment | KARMAVEER 20-10

ದೀಪಾವಳಿಯು ಸಕಲರಿಗೂ ಶುಭದಾಯಕವಾಗಲಿ



ಬೆಲೆ ರೂ